ಪಂ. ಪುಟ್ಟರಾಜಕವಿಕೃತ

ಶ್ರೀ. ಗಂಜೀಗಟ್ಟಿ

# ಚರಮೂರ್ತೀಶ್ವರ ಪುರಾಣ

ಪ್ರಕಾಶಕರು

ಶ್ರೀ ಗಂಜೀಗಟ್ಟಿ ಚರಮೂರ್ತಿಸ್ವಾಮಿಗಳು

ನವ್ಹಂಬರ್ ೧೯೭೧] [ಬೆಲೆ ೫ ರೂಪಾಯಿ

ಶ್ರೀ ಪಂಚಾಕ್ಷರ ಗ್ರಂಥಮಾಲೆಯ ೧೩ ನೇ ಕುಸುಮ

---

ಅಚ್ಚುಗಾರ

ಶ್ರೀಗುರುಸ್ವಾಮಿ ಕಲಿಕೇರಿ

ಸಹಾಯಕರು

ಶ್ರೀ ಮೌನೇಶಕುಮಾರ ವಡಗೇರಿ

ಹಾಗೂ

ಶ್ರೀ ಬಿ. ಆರ್. ಪಾಟೀಲ ಕಣವಿ



ಪ್ರಿಂಟರ್

ಶ್ರೀ ದೇವದಾಸ ಪ್ರೆಸ್, ಗದಗ.

ಪ್ರಕಾಶನ ದಿನ

೧೩-೧೧-೧೯೭೧

ಪ್ರಕಾಶನ ಸ್ಥಳ

ಶ್ರೀ ಚರಮೂರ್ತೀಶ್ವರಮಠ

ಮು. ಪೋ. ಗಂಜೀಗಟ್ಟಿ.

ತಾ. ಶಿಗ್ಗಾಂವ್ ಜಿ ಧಾರವಾಡ




ಘನತಪಸ್ವಿ

**ಪೂಜ್ಯ ಲಿಂಗೈಕ್ಯ**

**ಶ್ರೀ ಶಂಭುಲಿಂಗ ಚರಮೂರ್ತಿ ಮಹಾಸ್ವಾಮಿಗಳು**

**ಗಂಜೀಗಟ್ಟಿ**

# ಪರಿವಿಡಿ

## ಉದ್ಘಾಟಕರು



ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ
ಶ್ರೀ ೧೦೦೮

**ಶ್ರೀ ಶ್ರೀ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು**

ದಿ. ೧೬-೧೧-೧೯೭೧ ದಿನ ಗಂಜೀಗಟ್ಟಿ ಮುಕ್ಕಾಮಿನಲ್ಲಿ ಈ ಪುರಾಣ ಗ್ರಂಥದ ಉದ್ಘಾಟನೆಯನ್ನು ನೆರವೇರಿಸಿದರು.

॥ ಶ್ರೀ ಜಗದ್ಗುರು ಪಂಚಾಚಾರ್ಯ ಪ್ರಸೀದಂತು ॥

## ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ ಶ್ರೀ೧೧೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಶ್ರೀಮುಖದ

# ಆಶೀರ್ವಾಣಿಯು

ಧಾರವಾಡ ಜಿಲ್ಲಾ ಶಿಗ್ಗಾಂವ ತಾಲೂಕ ಗಂಜೀಗಟ್ಟಿ ಗ್ರಾಮದಲ್ಲಿರುವ ಶ್ರೀ ಚರಮೂರ್ತಿಗಳ ಮಠವು ಗುರುವರ್ಗದ ಚರಪಟ್ಟಾಧಿಕಾರಿಗಳ ಮಠಗಳ ಲ್ಲೊಂದಾಗಿದೆ. ಲಿಂಗೈಕ್ಯರಾದ ಶ್ರೀ ಚರಮೂರ್ತಿಸ್ವಾಮಿಗಳು ಲಿಂಗಾಂಗ ಸಾಮ ರಸ್ಯ ತತ್ವ ಜ್ಞಾನಿಗಳಾದ ಶಿವಯೋಗಿಗಳೂ, ಶಾಪಾನುಗ್ರಹ ಸಮರ್ಥರಾದ ಸಿದ್ಧಪುರುಷರೂ ಆಗಿದ್ದರೆಂದು ಅರಿಕೆಯಾಗಿ ಮಹದಾನಂದವಾಯಿತು. ಈಗಿನ ಶ್ರೀ ಚರಮೂರ್ತಿಗಳು ಲೀಲಾ ಪುರುಷರಾದ ತಮ್ಮ ಗುರುಗಳ ಪುರಾಣವನ್ನು ಗದಗಿನ ವೀರೇಶ್ವರ ಪುಣ್ಯಾಶ್ರಮ ವಾಸಿಗಳಾದ ಶ್ರೀ ಪುಟ್ಟರಾಜ ಗವಾಯಿಗಳಿಂದ ಬರೆಯಿಸಿ ಶ್ರೀ ಮಹಾ ॥ ॥ ಸನ್ನಿಧಿಯ ಅವಗಾಹನೆಗೆ ಯಳವತ್ತಿ ಮುಕ್ಕಾಮಿನಲ್ಲಿ ಒಪ್ಪಿಸಿದರು.

ಸದಾಚಾರ ಸಂಪನ್ನರೂ, ಸಂಗೀತ ಸಾಹಿತ್ಯ ವಿಶಾರದರೂ, ಜನ್ಮತಃ ಪ್ರಜ್ಞಾ ಚಕ್ಷುಗಳಾದ ಶ್ರೀ ಪುಟ್ಟರಾಜ ಗವಾಯಿಗಳು ಈ ಪುರಾಣವನ್ನು ಸರಳ ಶೈಲಿಯಲ್ಲಿ ರಚಿಸಿರುತ್ತಾರೆ. ಇವರು ಕನ್ನಡ, ಹಿಂದೀ, ಸಂಸ್ಕೃತ ಭಾಷೆಗಳಲ್ಲಿ ಅಸಾಧಾರಣ ವಿದ್ವತ್ತನ್ನು ಆಳವಡಿಸಿಕೊಂಡು ಈಗಾಗಲೇ ಕೆಲವು ಪುರಾಣಗಳನ್ನು ರಚಿಸಿರುವದು ಸುಪ್ರಸಿದ್ಧವಾಗಿದೆ. ದೀಕ್ಷಾ ಮತ್ತು ವಿವಾಹಾದಿ ಮಂಗಲ ಕಾರ್ಯಗಳಲ್ಲಿ ಪಂಚ ಕಲಶ ಸ್ಥಾಪನೆಯು ಶಾಸ್ತ್ರ ಮತ್ತು ರೂಢಿಗಳಿಂದ ಪ್ರಸಿದ್ಧವಾಗಿದ್ದರೂ ಈ ಪುರಾಣ ದಲ್ಲಿ ಕೇವಲ ಕಲಶಗಳನ್ನೆ ಹೇಳಿದ್ದಾರೆ. ಎಲ್ಲ ಗ್ರಂಥಗಳಲ್ಲಿ ಉಕ್ತವಾದಂತೆ ಪಂಚ ಕಲಶಗಳನ್ನು ಸ್ಪಷ್ಟವಾಗಿ ಹೇಳಬೇಕಾಗಿತ್ತು. ಪುನರ್ಮುದ್ರಣ ಕಾಲದಲ್ಲಿ ಸರಿಪಡಿಸ ಬಹುದೆಂದು ವಿಶ್ವಾಸವಿದೆ. ಪುರಾಣದಲ್ಲಿ ವರ್ಣಿತರಾದ ಶ್ರೀ ಚರಮೂರ್ತಿಸ್ವಾಮಿಗಳು ಸಾಮಾನ್ಯರಿಗೆ ಹುಚ್ಚರಂತೆ ಕಂಡು ಬಂದರೂ "ಲೋಕಕ್ಕೆ ತಾ ಮರುಳು ತನಗೆ ಲೋಕಂ ಮರುಳು" ಎಂಬ ಹಾಗೆ ಪರಶಿವನಿಗೆ ಅಚ್ಚು ಮೆಚ್ಚಾದವರೆಂಬುದು ಸ್ಪಷ್ಟವಾಗುವದು.

ಪರಮಾತ್ಮನ ಸತ್ ಸಂಕಲ್ಪದಂತೆ ಮಹಿಮಾತ್ಮನು ಲೀಲಾಜಾಲವಾಗಿ ಲೋಕ ಕಲ್ಯಾಣವನ್ನು ಸಾಧಿಸುವರೆಂಬುದಕ್ಕೆ ಈ ಚರಿತ್ರ ನಾಯಕರು ಸಾಕ್ಷಿಯಾಗಿದ್ದಾರೆ.

ಈಗಿನ ಶ್ರೀ ಚರಮೂರ್ತಿಸ್ವಾಮಿಗಳು ಮಹಿಮಾಶಾಲಿಗಳಾದ ತಮ್ಮ ಗುರುಗಳ ಪುರಾಣವನ್ನು ಬರೆಯಿಸಿ ಸಮಾಜಕ್ಕೆ ಮಹದುಪಕಾರವನ್ನು ಮಾಡಿ ದ್ದಾರೆ. ಸದ್‌ಭಕ್ತರು ಈ ಪುರಾಣದ ಸದುಪಯೋಗವನ್ನು ಮಾಡಿಕೊಂಡು ಸದಾಚಾರಿಗಳೂ, ಸನ್ಮಾರ್ಗಗಾಮಿಗಳೂ ಅಗಿ ಮಾನವ ಜೀವನದ ಸಾರ್ಥಕತೆ ಯನ್ನು ಮಾಡಿಕೊಂಡು ಧನ್ಯರಾಗಲೆಂದು ಹರಿಸಿ ಆಶೀರ್ವದಿಸಲಾಗಿದೆ.

ಯಳವತ್ತಿ
ದಿನಾಂಕ ೭-೯-೧೯೭೦

ಶಿವಂ ಭೂಯಾತ್
ಇತ್ಯಾಶಿಷಃ

ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು

## ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
## ಮೂರುಸಾವಿರಮಠ ಹುಬ್ಬಳ್ಳಿ

ಅವರ

# ಆಶೀರ್ವಚನ

ಉಭಯಗಾನ ವಿಶಾರದರೂ, ತ್ರಿಭಾಷಾಕವಿಗಳೂ ಆದ ಪಂ. ಪುಟ್ಟರಾಜ ಗವಾಯಿಗಳಿಂದ ರಚಿತವಾಗಿರುವ "ಶ್ರೀ ಗಂಜೀಗಟ್ಟಿ ಚರಮೂರ್ತೀಶ್ವರ ಪುರಾಣ" ಕಾವ್ಯಕ್ಕೆ ಮುನ್ನುಡಿಯಾಗಿ "ಆಶೀರ್ವಚನ" ನೀಡಲು ಆನಂದವೆನಿಸುತ್ತದೆ. ಅಭಿಮಾನವುಂಟಾಗುತ್ತಿದೆ. "ನಾನೃಷಿಃ ಕುರುತೇ ಕಾವ್ಯಂ" ಎಂಬಂತೆ ರುಷಿಯಲ್ಲದವನು ಕಾವ್ಯ ಬರೆಯಲಾರನು. ಆಂಗ್ಲ ಕವಿ ಶೆಲ್ಲಿಯ "Poets are un-acknowledged legislators of the world." ಎಂಬ ಮಾತಿನಂತೆ, ಕವಿಗಳೂ ಒಂದು ತೆರನಾಗಿ ಜಗದ ಶಾಸಕರಲ್ಲವೆ ? ಫ್ರಾನ್ಸದಲ್ಲಿ ರಾಜ್ಯಕ್ರಾಂತಿಯಾಗಲು ಕವಿಗಳೇ ಕಾರಣರಂತೆ. ಪಂ, ಪುಟ್ಟರಾಜ ಕವಿಗಳು ಶಿವಕವಿಗಳು. ಶರಣ ಜೀವನದಿಂದೊಡಗೂಡಿದ ಅವರ ಕಾವ್ಯ ಬಹುಕಾಲ ಬಾಳಿ ಬೆಳಗುವದು. ಅಂತಹ ಕವಿತಾಶಕ್ತಿ ಅವರ ಪುರಾಣ ಕಾವ್ಯಗಳಲ್ಲಿ ಎದ್ದು ಕಾಣುತ್ತಿದೆ. ಆ ಶಕ್ತಿ ಅವರಿಗೆ ಗುರುಕೃಪೆಯಿಂದ ನೈಸರ್ಗಿಕವಾಗಿ ಬಂದ ಬಳುವಳಿ. "ಕಲಿಸಿದೊಡೆ ಬರ್ಕುಮೆ ಸಲ್ಲಲಿತ ಕವಿತ್ವಂ ನಿಸರ್ಗ ಸುಭಗಂ" ಎಂದು ಮಹಾಕವಿ ಷಡಕ್ಷರಿ ಹಾಡಿರುವನಷ್ಟೇ ? ಕವಿ ಪುಟ್ಟರಾಜರು ಗಾನಯೋಗಿಗಳು ತಮ್ಮೀ ಪುರಾಣ ಕಾವ್ಯವನ್ನು ೧೯ ಸಂಧಿಗಳೊಳಗೆ ೯೧೮ ಪದಗಳಲ್ಲಿ ಉಭಯ ಗಾಯನಾಚಾರ್ಯ, ರಸರುಷಿಗಳಾದ ಪಂಚಾಕ್ಷರ ಗವಾಯಿಗಳ ಯೋಗಸಮಾಧಿಯೆಡೆ ಕುಳಿತು ಬರೆದು, ಎಡೆಯೂರ ಸಿದ್ಧಲಿಂಗ ಶಿವಯೋಗಿಗಳಿಗೆ ಹೃದಯವನ್ನೂ ಸಮರ್ಪಿಸಿ ಭಕ್ತಿ ಭಿಕ್ಷೆ ಬೇಡಿದ್ದಾರೆ; ಷಟ್ಪದೀ ಸೀಮಾ ಪುರುಷ ರಾಘವಾಂಕನ ಮಾರ್ಗ ವಿಡಿದು ಅತ್ಯಂತ ವಿಶಿಷ್ಟವಾದ "ಬಸವ ಪುರಾಣ" ಕಾವ್ಯವನ್ನು ರಚಿಸಿ ಹೋದ ಭೀಮ ಕವಿಗೆ ಮೆಚ್ಚಿಗೆಯಾಗಿದ್ದ ಭಾಮಿನೀ ಷಟ್ಪದಿಯಲ್ಲಿ ಅವರು ತಮ್ಮ ಕಾವ್ಯವನ್ನೂ ರಚಿಸಿದ್ದಾರೆ. ಪ್ರಾಚೀನ ಷಟ್ಪದೀ ಪರಂಪರೆಯನ್ನು ಪರಿಪಾಲಿಸಿದ್ದಾರೆ. ಜನ್ಮಾಂಧರಾದರೂ ಜನ್ಮದತ್ತ ಕವಿತಾಕಲೆಯಿಂದ ತಮ್ಮ ಜನ್ಮಸಾರ್ಥಕ ಪಡಿಸಿಕೊಂಡಿದ್ದಾರೆ. ತಮ್ಮೀ ಪುರಾಣ ಕಾವ್ಯದಿಂದ ಇತರರಿಗೆ ಜನ್ಮೋದ್ಧಾರ ಮಾರ್ಗವನ್ನೂ ಕಲ್ಪಿಸಿ ಕೊಟ್ಟಿದ್ದಾರೆ.

ಪುರಾಣದ ಕಥಾನಾಯಕರಾದ ಲಿಂ. ಶ್ರೀ ಗಂಜೀಗಟ್ಟಿ ಚರಮೂರ್ತಿಗಳು ಸವಣೂರು ಸಂಸ್ಥಾನ (ಈಗ ಧಾರವಾಡ ಜಿಲ್ಹೆಯಲ್ಲಿ ತಾಲೂಕು)ದ ಮಾದಾಪೂರ ಹಿರೇಮಠದಲ್ಲಿ ಹುಟ್ಟಿ ಬಂದವರು. ಈ ಬೃಹನ್ಮಠಕ್ಕೆ ಪಟ್ಟ- ಚರಮೂರ್ತಿಗಳಿಬ್ಬರ ಅಧಿಕಾರವಿರುವದಲ್ಲದೆ, ಊರಿನ ಸಮಸ್ಯೆಗಳ ಪರಿಹಾರ ಮಾಡುವ ಅಧಿಕಾರವೂ ಇರುತ್ತದೆ. ಸಾಕಷ್ಟು ಭೂಮಿ ಸೀಮೆ, ಶಿಷ್ಯ ಸಂಪತ್ತು ಇರುವ ಮಠವಿದು. ಕಾರಡಗಿ ಶ್ರೀ ವೀರಭದ್ರೇಶ್ವರ ದೇವಸ್ಥಾನದ ಪಂಚ ಪರಿಷತ್ತಿಗೆ ಈ ಮಠಾಧೀಶರೇ ಅಧ್ಯಕ್ಷರು! ಈ ಹಿರೇಮಠದ ಶಿವಪ್ಪಯ್ಯ ಪಾರ್ವತಮ್ಮ ದಂಪತಿಗಳಿಗೆ ಎರಡನೆಯ ಮಗನಾಗಿ ಅವತರಿಸಿದವರೆ ಲಿಂ. ಶ್ರೀ ಗಂಜೀಗಟ್ಟಿ ಚರಮೂರ್ತಿಗಳು. ಅವರ ಮುಂಚಿನ ಹೆಸರು ಶಂಭುಲಿಂಗಾರ್ಯರು. ಅವರು ಸಂಸ್ಕೃತ ಓದಿ ನಿಜಗುಣ ಶಾಸ್ತ್ರದಲ್ಲಿ ಅನುಭವ ಹೊಂದಿದವರು. ಮೇಲೆ ನೋಡಲಿಕ್ಕೆ ಅದ್ವೈತಿಗಳಂತೆ ಕಂಡರೂ "ಹುಚ್ಚ ಚರಂತೆಪ್ಪ" ನೆನೆಸಿಕೊಂಡರೂ ಲಿಂಗ ನಿಷ್ಠೆಯುಳ್ಳವರೂ, ಶಿವಾನುಭವಿಗಳೂ ಆಗಿದ್ದರು. "ಲೋಕದ ಕಣ್ಗೆ ತಾಂ ಮರುಳ್, ತನಗೆ ಲೋಕಂ ಮರುಳ್" ಎಂಬಂತಿದ್ದರು. ಶಂಭುಲಿಂಗ ಚರಮೂರ್ತಿಗಳು ತಮ್ಮ ಊರನ್ನು ಬಿಟ್ಟು ಸಂಚರಿಸುತ್ತ, ಗಂಜೀಗಟ್ಟಿಗೆ ಬಂದು ನೆಲೆಸಿದರು. ಆಗಲೆ ಅವರು ಲೀಲಾ ಮೂರ್ತಿಗಳೆನಿಸಿಕೊಂಡಿದ್ದರು. "ಶರಣ ಸತಿ, ಲಿಂಗಪತಿ" ಎಂಬ ತತ್ವಕ್ಕನುಗುಣವಾಗಿ "ಸ್ತ್ರೀಯು ಸ್ತ್ರೀಯೊಡನಹ ವಿವಾಹಂ ನ್ಯಾಯದಿಂ ನಗೆಗೀಡಲವೇ? ಎಂದು ಪ್ರಶ್ನಿಸಿ ಅವರು ಮದುವೆಯನ್ನು ತೊರೆದಿದ್ದರು. ಎಡಗೈ ತಾನೆ ಇಷ್ಟಲಿಂಗದ ಗದ್ದುಗೆಯೆಂದು ನಂಬಿ ಅವರು ಎಡಗೈಯಿಂದ ಯಾವ ಅಶುಚಿ ಕಾರ್ಯವನ್ನು ಮಾಡುತ್ತಿರಲಿಲ್ಲ. ಮೊಳಕಾಲು, ಕೈಗಳನ್ನು ಊರಿ ಕೊಂಚ ಹೊತ್ತು ಮಾತ್ರ ನಿದ್ರೆಗೈಯ್ಯುತ್ತಿದ್ದರು. ಅವರು ತಮ್ಮ ಮೂಗನ್ನೂ ಎಂದೂ ಕೈಯಿಂದ ಮುಟ್ಟುತ್ತಿದ್ದಿಲ್ಲ. ಅವರು ಕಂತೀ ಭಿಕ್ಷೆ ಮಾಡುತ್ತಿದ್ದರು. ಜನತೆಗೆ ಶಿವಯೋಗಿ ನಿಜಗುಣರ ತತ್ವಗಳನ್ನು ಬೋಧಿಸುತ್ತಿದ್ದರು; ಶಿವಾನುಭವಾಮೃತವನ್ನು ಉಣಿಸುತ್ತಿದ್ದರು. ಅವರು ಗರಗದ ಮಡಿವಾಳ ಸ್ವಾಮಿಗಳ, ಶಿಶುನಾಳ ಶರೀಫ ಸಾಹೇಬರ ಸಮಕಾಲೀನರು. ಹುಬ್ಬಳ್ಳಿ ಸಿದ್ಧಾರೂಢರನ್ನು ಎಚ್ಚರಿಸಿ ದಾಸೋಹದ ಪಾಠ ಕಲಿಸಿದವರು. ಅನಂತ ಅದ್ಭುತ ಮಹಿಮೆಗಳನ್ನು ತೋರಿ ಮೆರೆದವರು. ಜನರಲ್ಲಿ ಬೇರೂರಿದ ದುಷ್ಟಟ ದುರಾಚಾರಗಳನ್ನು ನಿವಾರಿಸುತ್ತ ತಮ್ಮ ನೀತಿ ಬೋಧೆಯಿಂದ ಜನ ಜಾಗೃತಿ ಮಾಡಿದವರು. ಶಿವಭಕ್ತಿಯನ್ನು ಬಿತ್ತಿದವರು. ಲಿಂಗಲೀಲಾ ಲೋಲುಪರು. ಆತ್ಮಜ್ಞಾನದಲ್ಲಿ ಬಲ್ಲಿದವರು, ಈ ಎಲ್ಲ ವಿಷಯವನ್ನು ಪುಟ್ಟರಾಜ ಕವಿಗಳು ಪುರಾಣದಲ್ಲಿ ವಿಶದೀಕರಿಸಿದ್ದಾರೆ.

ಕವಿ ಪುಟ್ಟರಾಜರ ಈ ಪುರಾಣ ಕಾವ್ಯ ಕರ್ನಾಟಕದ ಕಾರಣಿಕರೊಬ್ಬರ- ವೀರಶೈವ ವಿಭೂತಿಗಳೊಬ್ಬರ ಜೀವನವನ್ನು ಚಿತ್ರಿಸುತ್ತಿದೆ. ಕಾವ್ಯದುದ್ದಕ್ಕೂ ಹೆಚ್ಚಾಗಿ ಆ ಚರಮೂರ್ತಿಗಳ ಪವಾಡಗಳನ್ನು ವಿವರಿಸಲಾಗಿದೆ. ನಡುನಡುವೆ ಪುರಾತನರ- ಪಂಚಾಚಾರ್ಯರ- ಬಸವಾದಿ ಪ್ರಮಥರ ಉಪಕಥೆಗಳನ್ನು ಹೆಣೆಯ

ಲಾಗಿದೆ. ಕವಿಗಳ ಶೈಲಿ ನಿರರ್ಗಳವಾಗಿ ಹರಿದಿದೆ. ಕಥೆಯ ನಿರೂಪಣೆ ನಿರಾತಂಕವಾಗಿದೆ.

ಕವಿಗಳು ಭಕ್ತಿಯ ಹಿರಿಮೆಯನ್ನು ಹೀಗೆ ಸುಲಭವಾಗಿ ಹೇಳಿದ್ದಾರೆ.

ಭಕ್ತಿಯಿಂದಲೆ ಭುಕ್ತಿಯಹುದೈ
ಭಕ್ತಿಯಿಂದಲೆ ಮುಕ್ತಿಯಹುದೈ
ಭಕ್ತಿಯಿಂದಲೆ ಒಕ್ತಿಯಹುದೈ ಸರ್ವ ಜೀವರಿಗೆ ||
ಭಕ್ತಿಯಿಂದಲೆ ಸಕ್ತಿಯಹುದೈ
ಭಕ್ತಿಯಿಂದಲೆ ಯುಕ್ತಿಯಹುದೈ
ಭಕ್ತಿಗಸದಳ ಮಾವುದಿಲ್ಲಂ ನಂಬು ಭಕ್ತಿಯನೆ. ||

ಸಂಧಿ ೪– ಪದ ೧೫೪

ಇನ್ನೊಂದೆಡೆ ಮಠದೊಡೆಯನ ಲಕ್ಷಣವನ್ನು ಬಣ್ಣಿಸುವಾಗ ಈ ರೀತಿ ಹಾಡಿದ್ದಾರೆ.

" ಶಿವರೂಪೇಷ್ಟ ಲಿಂಗಾರ್ಚಕಂ
ಶಿವಲೀನ ಚಂಚಲ ಮನಸ್ಕಂ
ಶಿವಭಕ್ತಗಣವರ ಪೋಷಕಂ ಹಂಸಮನುಸಿದ್ಧಂ ।
ಶಿವಭಕ್ತಿ ಭಾವಿತ ಭಾವುಕಂ
ಶಿವಗುಣಾಸ್ಪದ ಚಿದ್ರೂಪಕಂ
ಶಿವಭಾವ ಜನನಾಯಕಂ ಮಠದೊಡೆಯನಾಗಿರ್ದಂ ||

ಸಂಧಿ ೭– ಪದ–೪

ಮತ್ತೊಂದೆಡೆ ಅವರು ಏಳರ ಮುಖಾಂತರ ಶಿವ ಸ್ತುತಿಯನ್ನು ಕೆಳಗಿನಂತೆ ಮಾಡಿದ್ದಾರೆ.

ಏಳು ಸ್ವರದಿಂ ಸಂಗೀತ ಮಹು–
ದೇಳು ಬಣ್ಣದೇ ಬಿಳಿಂಪು ಬಣ್ಣಮು–
ದೇಳು ದಿನಂಗಳಿಂ ವಾರಮುಹುದಭವ ಪರಶಿವನೆ ।
ಏಳುಧಾತುಗಳಿಂದ ಶರೀರಮು–
ದೇಳು ರುಷಿವರರಿಂ ಶಾಸ್ತ್ರಮಿಹು–
ದೇಳು ಪೇಳೆನ್ನಿಂದೇನಪ್ಪುದೊಲೆದು ಸರ್ವೇಶಾ ||

ಸಂಧಿ–೬, ಪದ –೧

ಮಗದೊಂದೆಡೆ ಗುರು ಶಿಷ್ಯರ ಸಾಮರಸ್ಯವನ್ನೂ ಸಾದರ ಪಡಿಸುವಲ್ಲಿ ಕವಿಗಳು ಈ ತೆರನಾಗಿ ಉತ್ಕೃಷ್ಟ ಉಪಮೆಗಳಿಂದ ಸ್ಪಷ್ಟಪಡಿಸಿದ್ದಾರೆ.

"ಕ್ಷೀರ ರುಚಿಗಳ ಬೆರೆತಂತೆ ಸ–
ಸ್ಕೋರು ರಸಗಳ್ ಕಲೆತಂತೆ ಮೆಣ್–
ಸಾರಸ ಪರಿಮಳಂಗಳ್ ಕೂಡಿದಂತಯೆ ನಿತ್ಯದೆ ।
ಪಾರವಿಲ್ಲದ ಭಕ್ತಿ ಶಕ್ತಿಗ–
ಳೋರೆಯಾಗಿರದಂತೆ ಯಿರ್ದರ್
ತಾರಕ ಶಂಭುಲಿಂಗ ಸದಾಶಿವೇಂದ್ರರ್ ಭಾವದೆ ||

ಸಂಧಿ ೧೧– ಪದ ೩

ಈ ರೀತಿಯಾಗಿ ಛಂದೋ ಬದ್ಧವಾಗಿ ಬರೆಯುತ್ತ, ಚರಿತ್ರ ನಾಯಕರ ಜೀವನ ಚಿತ್ರವನ್ನೂ ಕವಿಗಳು ಹೃದಯಂಗಮ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಕವಿಯಲ್ಲಿರ ಬೇಕಾದ ಬುದ್ಧಿ ಸೂಕ್ಷ್ಮತೆ, ಕಲ್ಪನೆಯ ವಿಸ್ತಾರ, ಭಾವಬಂಧುರತೆ ಎದ್ದು ಕಾಣು ತ್ತದೆ. ಆದರೆ ಅವರು ಸ್ವತಃ ಲಿಪಿಕಾರರು ಇಲ್ಲದಿರುವದರಿಂದ ಅಲ್ಲಲ್ಲಿ ಕೆಲ ದೋಷ ಗಳು ಕಂಡುಬರುವದು ಸಹಜ. ಆಧುನಿಕ ಯುಗದಲ್ಲಿ ಷಟ್ಪದೀ ಕಾವ್ಯಗಳು ಕಡಿಮೆ ಯಾಗುತ್ತಿರುವ ಸಮಯದಲ್ಲಿ ಪುಟ್ಟರಾಜ ಕವಿಗಳು ಪ್ರಾಚೀನ ಪರಂಪರೆಯ ಭವ್ಯ ಸಂಸ್ಕೃತಿಯನ್ನು ಎತ್ತಿ ಹಿಡಿದು ಭಾವದ ಮೆರಗನ್ನಿತ್ತು, ಭಾಷೆಯ ಬಿಗುವನ್ನಿಟ್ಟು ಪುರಾಣವನ್ನು ರಚಿಸುತ್ತ ಕಾವ್ಯದೇವಿಯನ್ನು ಆರಾಧಿಸುತ್ತಿರುವದು ಮೆಚ್ಚತಕ್ಕ ದ್ದಾಗಿದೆ. ಕಲೆಯ ಸವಿಯನ್ನು ಆಸ್ವಾದಿಸುತ್ತ ಆನಂದಾನುಭವಗಳನ್ನು ಪಡೆಯುತ್ತ ನಾಡನುಡಿಯ ಸೇವೆ ಸಲ್ಲಿಸುತ್ತಿರುವದು ನಮಗೆ ಅತೀವ ಸಂತಸವನ್ನುಂಟು ಮಾಡಿದೆ.

ಒಟ್ಟಿಗೆ ಪುಟ್ಟರಾಜ ಕವಿಗಳು ಪ್ರತಿಭಾವಂತರು, ಪಾಂಡಿತ್ಯಾನುಭವ ಸಂಪ ನ್ನರು. ಅವರು ಕನ್ನಡ, ಸಂಸ್ಕೃತ ಹಿಂದಿ ಭಾಷೆಗಳಲ್ಲಿ ಅನೇಕ ಸಾಹಿತ್ಯಕೃತಿಗಳನ್ನು ರಚಿಸಿ, ಆಧುನಿಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿರು ವರು; ಜೊತೆಗೆ ಶ್ರೀಗುರುವಿನ ಕರುಣೆಯಿಂದ ಸಂಗೀತ-ನಾಟ್ಯ ಕಲೆಗಳಲ್ಲಿ ಸಿದ್ಧಿಯನ್ನು ಪಡೆದಿರುವರು; ಹೆಚ್ಚೇನು ? ಸಾಮಾನ್ಯ ಜನತೆಯನ್ನು ತಮ್ಮ ಅಗಾಧ ಕಲೆಯಿಂದ ಉದ್ಧರಿಸಲಿಕ್ಕೆಂದು ಒಳಗಣ್ಣು ಪಡೆದಿರುವರು. ಅವರಿಂದ ಇನ್ನೂ ಇಂತಹ ಪುರಾಣ ಕಾವ್ಯಗಳು ಹೊರಬರಲಿ, ಅವರ ಮೇಲೆ ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಕೃಪೆ ಸದಾ ಇರಲೆಂದು ಹಾರೈಸೋಣವಾಗಿದೆ.

— सत्यं शिवं सुंदरम् —

ಮುಕ್ಕಾಂ-ಹುಬ್ಬಳ್ಳಿ 4—10—71

# ಮುನ್ನುಡಿ

ಕನ್ನಡ ಸಾಹಿತ್ಯಕ್ಕೆ ವೀರಶೈವರ ಕೊಡುಗೆ ಅಸದೃಶವಾದುದು. ಬಸವಣ್ಣ-ಚನ್ನಬಸವಣ್ಣ, ಹರಿಹರ-ರಾಘವಾಂಕ, ಭೀಮಕವಿ-ಚಾಮರಸ, ಸರ್ವಜ್ಞ-ಷಡಕ್ಷರ ದೇವ ಮೊದಲಾದ ಕವಿಗಳು ಈ ಸಾಹಿತ್ಯದ ಮಹಿಮಾನ್ವಿತರು. ಇವರ ಸಾಹಿತ್ಯ ಶ್ರದ್ಧೆ ಮತ್ತು ಪ್ರಗತಿಶೀಲ ಮನೋಧರ್ಮಗಳ ಮೂಲಕ ಹೊಸ ಹೊಸ ಸಾಹಿತ್ಯ ಪ್ರಕಾರಗಳು ಕನ್ನಡದಲ್ಲಿ ಕಣ್ಣು ತೆರೆದವು. ಇವುಗಳಲ್ಲಿ ಪುರಾಣ ಸಾಹಿತ್ಯ ಪ್ರಮುಖ ವಾದುದು.

"ಬಹುತರ ಜನ್ಮಕೋಟಿಗಳೋಳಾರ್ಜಿಸಿದುತ್ತಮ ಪುಣ್ಯದೇಳ್ಗೆಯಿಂ" ಸಾಧ್ಯ ವಾದ ಸಾಹಿತ್ಯಶಕ್ತಿಯನ್ನು ರಾಜಕೀರ್ತನೆಗೆ ಬಳಸುತ್ತಿದ್ದ ಯುಗಧರ್ಮವನ್ನು ಎದುರಿಸಿ 'ಶಿವನಂ, ತದೀಯಶರಣವ್ರಜಮಂ' ಕೀರ್ತಿಸಲು ಆಂದೋಲನೆ ಹೂಡಿ ಯಶಸ್ಸು ಪಡೆ ದರು, ವೀರಶೈವ ಕವಿಗಳು. ಈ ಆಂದೋಲನೆಯ ಮಂದಾರಪುಷ್ಪ ವೀರಶೈವ ಪುರಾಣ ಸಾಹಿತ್ಯ. ಈ ನೆಲದ ಮೇಲೆ ಮರ್ತ್ಯರಾಗಿ ಹುಟ್ಟಿ ಮಹಾಂತರಾಗಿ ಬೆಳಗಿದ ಪುಣ್ಯ ಪುರುಷರ ಬದುಕನ್ನು ಬರಹಕ್ಕಿಳಿಸಿದ ಈ ಚಾರಿತ್ರಿಕ ಸಾಹಿತ್ಯ ಕನ್ನಡಕ್ಕೆ ಹೊಸ ಕೊಡುಗೆ. ಇದರಿಂದಾಗಿ ಮಹಾತ್ಮರಾದ ಅರುವತ್ತುಮೂವರು ಪುರಾತನರ, ಬಸವ-ಚನ್ನಬಸವಾದಿ ಪ್ರಮಥರ, ಕರಸ್ಥಲದ ನಾಗಲಿಂಗ ಮೊದಲಾದ ನೂರೊಂದು ವಿರಕ್ತರ, ತೋಂಟದಾರ್ಯ ಮೊದಲಾದ ಏಳುನೂರೊಂದು ವಿರಕ್ತರ ಜೀವನ ಪುರಾಣಗಳಲ್ಲಿ ಪರಮಾವತಾರಗೊಂಡಿತು. ಈ ಸುದೀರ್ಘ ಮತ್ತು ಶ್ರೀಮಂತವಾದ ಪುರಾಣ ರಚನಾ ಪರಂಪರೆ ವೀರಶೈವ ಸಮಾಜದಲ್ಲಿ ಇನ್ನೂ ಜ್ವಲಂತವಾಗಿದೆ. ೧೯-೨೦ ನೆಯ ಶತಮಾನಗಳಲ್ಲಿ ದ್ಯಾಂಪುರ ಚೆನ್ನಕವಿ, ವೈ. ನಾಗೇಶಶಾಸ್ತ್ರಿ ಮೊದ ಲಾದ ವಿದ್ವಾಂಸರು ಆ ನಂದಾದೀಪವನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಉಜ್ವಲ ಪರಂಪರೆಯಲ್ಲಿ ನಿಲ್ಲುತ್ತಾರೆ ಪ್ರಸ್ತುತ ಪುರಾಣ ಕರ್ತೃ ವೇದಮೂರ್ತಿ. ಶ್ರೀಪುಟ್ಟರಾಜ ಗವಾಯಿಗಳು.

ಪುಟ್ಟರಾಜ ಕವಿಗಳೆಂದು ಖ್ಯಾತನಾಮರಾದ ವೇ. ಮೂ. ಪುಟ್ಟಯ್ಯನವರು ಒಂದು ಅದ್ಭುತ ಪವಾಡವಾಗಿರುವರು. ಅವರು ಜನ್ಮತಃ ಚರ್ಮಚಕ್ಷುವಿಲ್ಲದ ಕುರು ಡರು. ಯುಗಪುರುಷರಂತಿದ್ದ ಲಿಂ. ಪಂಚಾಕ್ಷರ ಗವಾಯಿಗಳವರ ಕರಕಮಲ ಸಂಜಾ ತರಾಗಿ ಶಿವಯೋಗ ಮಂದಿರದ ಪುಣ್ಯಪರಿಸರದಲ್ಲಿ ಹಾನಗಲ್ಲ ಕುಮಾರ ಸ್ವಾಮಿ ಗಳವರ ಪರಮಾಶೀರ್ವಾದಗಳಿಂದ ಬೆಳೆದವರು. ಶ್ರೀಗುರುವಿನ ಸನ್ನಿಧಿಯಲ್ಲಿ ಭಕ್ತಿ ಯಿಂದ ಸಂಗೀತ, ಸಾಹಿತ್ಯ, ತತ್ವಜ್ಞಾನಗಳನ್ನು ಅಭ್ಯಾಸ ಮಾಡಿದರು. ಕಣ್ಣಿಲ್ಲದ

ಗುರು; ಕಣ್ಣಿಲ್ಲದ ಶಿಷ್ಯ; ಅಂಧಕನ ಕೈಹಿಡಿದು ಅಂಧಕ ಮಹಾಬೆಳಗಿನತ್ತ ನಡೆದಿರು ವುದು ಪವಾಡವಲ್ಲದೆ ಬೇರೆ ಏನು ? ಎಷ್ಟು ಸಂಗೀತ, ಎಷ್ಟು ಶಾಸ್ತ್ರ, ಎಷ್ಟು ತತ್ವ ಜ್ಞಾನ, ಎಷ್ಟು ಸಾಹಿತ್ಯ ಅವರಿಗೆ ಹಸ್ತಗತವಾಗಿದೆಯೆಂಬುದನ್ನು ಮನದಂದರೆ ಮೈನ- ವಿರೇಳುತ್ತದೆ. ಶ್ರವಣವೊಂದೇ ಸಾಧನವಾಗಿರುವ ವ್ಯಕ್ತಿ ಇಷ್ಟೊಂದು ಜ್ಞಾನ ಸಂಪಾ ದನೆ ಮಾಡಿರುವುದು ವಿಶ್ವದ ಅದ್ಭುತಗಳಲ್ಲಿ ಒಂದನಿಸುತ್ತದೆ. ಪುಟ್ಟಯ್ಯನವರು ಸಂಗೀತಕ್ಕೆ ಕುಳಿತರೆ ಉಭಯ ಗಾನಗಳಲ್ಲಿ ಅವರನ್ನು ಸರಿಗಟ್ಟುವವರಿಲ್ಲ. ಸಾಹಿ ತ್ಯಕ್ಕೆ ಬಂದರೆ ೩-೪ ಭಾಷೆಗಳಲ್ಲಿ ಸರಸವಾಗಿ; ಸಲೀಲವಾಗಿ ಬರೆಯಬಲ್ಲರು. ಕೀರ್ತನ ಹೇಳಲು ನಿಂತರೆ ಲಕ್ಷಾಂತರ ಜನರನ್ನು ಸ್ತಬ್ಧವಾಗಿ ಕುಳ್ಳಿರಿಸುವ ಶಕ್ತಿ. ಹೀಗೆ ಒಂದೊಂದು ಕ್ಷೇತ್ರದಲ್ಲಿಯೂ ಅಚ್ಚಳಿಯದ ಮುದ್ರೆಯನ್ನೊತ್ತಿರುವ ಲೀಲೆ ಪುಟ್ಟಯ್ಯ ನವರದು.

ವೇ| ಪುಟ್ಟಯ್ಯನವರ ಸಂಘಟನಾಶಕ್ತಿ ಅದ್ಭುತವಾದುದು. ವೇ. ಪಂಚಾ ಕ್ಷರ ಗವಾಯಿಗಳು ಗದುಗಿಗೆ ಬಂದು ನೆಲೆ ನಿಂತರು. ಭೀಕರ ಬರಗಾಲದಲ್ಲಿ ಪುಣ್ಯ ಚರಿತರಾದ ಬಸರೀಗಿಡದ ವೀರಪ್ಪನವರಂತಹ ಭಕ್ತರ ಉದಾರ ದಾನಗಳಿಂದ ಗವಾಯಿ ಗಳ ಸಂಸ್ಥೆ ಹೇಗೋ ಜೀವಹಿಡಿದು ನಿಂತಿದ್ದಿತು. ಅಷ್ಟಾದರೂ ಅದಕ್ಕೆ ಸಾಲದ ಶೂಲ ತಪ್ಪಿರಲಿಲ್ಲ. ವೇ. ಪುಟ್ಟಯ್ಯನವರು ಕುರುಡರ ಏಳ್ಗೆಗಾಗಿ ತಮ್ಮ ಗುರುಗ ಳಿಂದ ಸ್ಥಾಪಿತವಾದ ಸಂಸ್ಥೆಯನ್ನು ಶಾಶ್ವತಗೊಳಿಸಲೇಬೇಕೆಂಬ ಸಂಕಲ್ಪ ಮಾಡಿದರು. ನಾಟಕ ಕಲೆಯನ್ನು ಉದ್ಧರಿಸಲು ಬಂದ ಪುಣ್ಯಚರಿತರಂತೆ ಬಂದು ಕಂಪನಿಯನ್ನೇ ಸ್ಥಾಪಿಸಿದರು. ಸಂಗೀತದ ನಾಲ್ಕು ಮೈಗಳನ್ನು ಮೇಳವಿಸಿ ಭಕ್ತಿ ಪೂರಿತವಾದ ನಾಟ ಕಗಳನ್ನು ಆಡಲು ಆರಂಭಿಸಿದರು. ಜನತೆಯಲ್ಲಿ ಧರ್ಮಪ್ರಚಾರವಾಗುವದರ ಜೊತೆಗೆ ಸಂಸ್ಥೆಯ ಆರ್ಥಿಕ ಅಭಿವೃದ್ಧಿಯಾಯಿತು. ಪುಟ್ಟರಾಜ ಗವಾಯಿಗಳ ಅಂತಶ್ಶಕ್ತಿ, ಆತ್ಮಬಲಗಳ ಮೂಲಕ ಒಂದು ಆದರ್ಶ ಸಂಸ್ಥೆ ಮೈವೆತ್ತು ನಿಲ್ಲುವಂತಾಯಿತು. ಭಾರ ತದಲ್ಲಿಯೇ ವಿನೂತನತೆಯನ್ನು ಸ್ಥಾಪಿಸಬಲ್ಲ ವೀರೇಶ್ವರ ಪುಣ್ಯಾಶ್ರಮ ಪುಟ್ಟರಾಜ ಗವಾಯಿಗಳ ಕ್ರತು ಶಕ್ತಿಯ ಕುರುಹು.

ಹೀಗೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಪುಟ್ಟಯ್ಯನವರು ಮೇರು ಸದೃಶವಾದ ಕಾರ್ಯವನ್ನೆಸಗಿರುವರು. ಕನ್ನಡ, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ಪ್ರಕಾಂಡ ಪಂಡಿತ ರಾದ ಪುಟ್ಟರಾಜ ಕವಿಗಳು ಪುರಾಣ, ನಾಟಕ, ಸುಪ್ರಭಾತ, ನಾಮಾವಳಿ, ಚರಿತ್ರೆ ಮತ್ತು ಸಂಗೀತ ಶಾಸ್ತ್ರಗಳಿಗೆ ಸಂಬಂಧಿಸಿದ ಸುಮಾರು ೩೪ ಕೃತಿಗಳನ್ನು ಸೃಷ್ಟಿಸಿ ದ್ದಾರೆ. ಇವರ ಬಾಹ್ಯ ಚಕ್ಷು ಮುಚ್ಚಿದ್ದರೂ ಅಂತಃಚಕ್ಷು ಸದಾ ಜಾಗ್ರತ. ಹೀಗಾಗಿ ಅವರು ಸಂಗೀತ ಕಲೆಯಲ್ಲಿ ಎಷ್ಟು ಸೀಮಾ ಪುರುಷರೋ, ಸಾಹಿತ್ಯ ಕಲೆಯಲ್ಲಿಯೂ ಅಷ್ಟೇ ಸಿದ್ಧಹಸ್ತರು. ಹಲವು ಭಾಷೆ, ಹಲವು ಜ್ಞಾನಕ್ಷೇತ್ರಗಳ ಒಡನಾಟದಿಂದ ಪರಿ

ಪಕ್ವವಾದ, ಪರಿಶುದ್ಧವಾದ ಜೀವನ ಅವರದು. ಇದೆಲ್ಲಕ್ಕೂ ತಾಯಿಬೇರು ವೀರಶೈವದ ಪರಮ ಮಾರ್ಗವನ್ನು ಅರಿತು ಆಚರಿಸುತ್ತಿರುವ ಇವರಿಗೆ ಶರಣರಲ್ಲಿ ಸಂತರಲ್ಲಿ ಪರಮ ಭಕ್ತಿ. ಇವರ ಸಾಹಿತ್ಯವೆಲ್ಲ ಶಿವಶರಣಮಯವಾದುದೇ ಇದಕ್ಕೆ ನಿದರ್ಶನ. ಇಂಥ ಮಾಗಿದ ಪ್ರತಿಭೆ "ಶ್ರೀ ಗಂಜೀಗಟ್ಟಿ ಚರಮೂರ್ತೀಶ್ವರ ಪುರಾಣ" ವನ್ನು ಸೃಷ್ಟಿಸಿದೆ.

ಮಾದಾಪುರ ಬೃಹನ್ಮಠದ ಶಿವಾರ್ಯ ಮತ್ತು ಶಿವಯೋಗಿ ಶಂಭುಲಿಂಗನ ಪುಣ್ಯ ಪುರಾಣವಿದು. ಬಾಲ್ಯದಿಂದಲೇ ಶಿವಯೋಗದ ದಿವ್ಯಸೆಳವಿಗೆ ಸಿಕ್ಕು ಗುರುವಿನಿಂದ ಶಿವದೀಕ್ಷೆ ಪಡೆದು, ವಿರಕ್ತಧರ್ಮವನ್ನು ಸ್ವೀಕರಿಸಿ, ಮಾದಾಪುರ ಮಠದ ಚರಮೂರ್ತಿಯಾಗಿ, ಉತ್ತರ ದಕ್ಷಿಣ ಕರ್ನಾಟಕಗಳಲ್ಲಿ ಸಂಚರಿಸಿ, ಮುಖಸೆಜ್ಜೆಯಲ್ಲಿ ಇಷ್ಟಲಿಂಗಧರಿಸಿ, "ಲೋಕಕ್ಕೆ ತಾಮರುಳ್, ತನಗೆ ಲೋಕ ಮರುಳ್" ವೆಂಬ ರೀತಿಯಲ್ಲಿ ಬದುಕಿ, ಗಂಜೀಗಟ್ಟಿಗ್ರಾಮವನ್ನು ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡು, ನಿಜಗುಣರ ಷಟ್‌ಶಾಸ್ತ್ರವನ್ನು ಬೋಧಿಸಿ, ಸದಾಶಿವ ಮತ್ತು ಪುಟ್ಟಮಲ್ಲಾರ್ಯರಿಗೆ ದೀಕ್ಷೆಯನ್ನು ದಯಪಾಲಿಸಿ, ಶಾಪಾನುಗ್ರಹ ಸಮರ್ಥನೆನಿಸಿ, ಹುಬ್ಬಳ್ಳಿಯ ಸಿದ್ಧಾರೂಢ ಮತ್ತು ಶಿಶುನಾಳ ಶರೀಫರ ಒಡನಾಟ ಹೊಂದಿ, ಸುತ್ತಲಿನ ಪ್ರದೇಶಗಳಲ್ಲಿ ನೂರಾರು ದಿವ್ಯಪವಾಡಗಳನ್ನು ಮೆರೆದು, ಸದಾಶಿವಾರ್ಯನಿಗೆ ಉತ್ತರಾಧಿಕಾರತ್ವವನ್ನು ವಹಿಸಿಕೊಟ್ಟು ಮುಕ್ತನಾದ ಈ ಮಹಾಶಿವಯೋಗಿಯ ಲೀಲೆಯನ್ನು ವೇ. ಪುಟ್ಟರಾಜ ಗವಾಯಿಗಳು ಭಕ್ತಿಯಿಂದ ಸೃಷ್ಟಿಸಿರುವರು. ಈ ನಿಶ್ಚಲ ಭಕ್ತಿಯ ಅದಮ್ಯ ಪ್ರವಾಹದಲ್ಲಿ ಭಾವ, ಭಾಷೆಗಳು ಸಂಗಮಹೊಂದಿ ಕಾವ್ಯ ಲೀಲಾಜಾಲವಾಗಿ ಮುಂದುವರಿದಿದೆ.

ಕಂದಜೋ ಜಿತಬಂಧಜೋ ಸ್ವಾ ।
ನಂದಜೋ ಸತ್ಸಂಧಜೋ ಸ್ವ ।
ಚ್ಛಂದಜೋ ಚಿತ್ಸಿಂಧಜೋ ಷಟ್ಸ್ಥಲಸಿಂಧುಜೋ ಜೋ ॥
ನಂದಜೋ ಸುಸ್ಕಂಧ ಜೋ ಉದ ।
ಮಂದಜೋ ಸದ್ಗಂಧ ಜೋ ಅರ ।
ವಿಂದ ಜೋ ತುಷ್ಟಾಂಧ ಜೋ ಶಂಭುಲಿಂಗನೆ ಜೋ ಜೋ ॥

ಮೊದಲಾದ ಪದ್ಯಗಳಲ್ಲಿ ಸಾಧಿಸಿದ ಪದಬಂಧ ಸುಂದರವಾಗಿದೆ. ವೀರಶೈವ ವೈಶಿಷ್ಟ್ಯವಾದ ಷಟ್ಪದಿ ಇಲ್ಲಿ ತನ್ನ ವಾಂಶಿಕ ಗಂಧವನ್ನು ಉಳಿಸಿಕೊಂಡಿದೆ. ಪ್ರತಿಯೊಂದು ಸಂಧಿಯಲ್ಲಿಯೂ ಶ್ರೀಗಳು ಇಂಥ ಸಿದ್ಧಿಯನ್ನು ವ್ಯಕ್ತಪಡಿಸಿದ್ದಾರೆ. ಈ ಕಾವ್ಯ ಸಿದ್ಧಿಯ ಜೊತೆ ಹೃದ್ಯವಾಗಿ ಬಂದಿದೆ ವೀರಶೈವ ತತ್ವನಿರೂಪಣೆ. ಈ ಮಾತಿಗೆ ಒಂಬತ್ತನೆಯ ಸಂಧಿ ಉದಾಹರಣೆಯೆನಿಸಿದೆ.

ಪುರಾಣ ರಚನಾ ಶೈಲಿ ಶ್ರೀ ಪುಟ್ಟರಾಜ ಗವಾಯಿಗಳ ಉಸಿರಾಗಿದೆ. ಸಾಮಾನ್ಯರನ್ನು ಸಾಹಿತ್ಯದ ಮೂಲಕ ಉದ್ಧರಿಸುವ ಪುಣ್ಯಸಾಧನ ಪುರಾಣ, ಎಂಬುದನ್ನು ಅವರು ಧೃಡವಾಗಿ ನಂಬಿದ್ದಾರೆ. ಅದಕ್ಕಾಗಿಯೇ ಅಷ್ಟಾವರಣ, ಪಂಚಾಚಾರ ವಿವರಣೆಯ ಪ್ರಸಂಗದಲ್ಲಿ ಈ ಕೃತಿಯನ್ನು ಶಾಸ್ತ್ರಗೊಳಿಸದೆ, ಕಥೆಗಳ ಮೂಲಕ ತತ್ವಗಳನ್ನು ತಿಳಿಸಿ ಜನಸ್ತೋಮ ಪುರಾಣ ಶ್ರವಣಕ್ಕೆ ಒಲಿಯುವಂತೆ ಮಾಡಿದ್ದಾರೆ. ಶ್ರೀ ಗಂಜೀಗಟ್ಟಿ ಚರಮೂರ್ತಿಗಳ ಪುರಾಣ ಹೇಳುವ ನೆವದಲ್ಲಿ ಕಲ್ಯಾಣ ಶರಣರ, ತರುವಾಯದ ಎಡೆಯೂರ ತೋಂಟದಾರ್ಯ, ಬಳ್ಳಾರಿಯ ಮರಿಸ್ವಾಮಿಗಳ, ಸಮಕಾಲೀನರಾದ ಸಿದ್ಧಾರೂಢ, ಶರೀಫ ಶಿವಯೋಗಿಗಳ ಚರಿತ್ರೆಗಳನ್ನೂ ವಿವರಿಸಿ ಈ ಕೃತಿಗೆ ಶರಣರ ಕಥೆಗಳ ಸಮಷ್ಟಿರೂಪ ಕೊಡುವ ಪ್ರಯತ್ನ ಮಾಡಿದ್ದಾರೆ. ಹೀಗಾಗಿ ಶ್ರೀ ಚರಮೂರ್ತಿಗಳ ಈ ಪುರಾಣ ನೂರಾರು ಲೀಲಾಮೂರ್ತಿಗಳ ಪುರಾಣವೂ ಆಗಿ ಪರಿಣಮಿಸಿದೆ. ಕಥೆಗಳ ಮೂಲಕ ಸಾಮಾನ್ಯರನ್ನು ಪುರಾಣ ಸೌಧಕ್ಕೆ ಕರೆತಂದು, ಭಕ್ತಿ ಪಂಜರದಲ್ಲಿ ಸೆರೆಹಿಡಿವ ಈ ವಿಧಾನ ಮೆಚ್ಚುವಂತಹದು.

"ಜನ ಬದುಕಬೇಕೆಂದು" ಅನಪೇಕ್ಷೆಯಿಂದ ಬರೆದ ಈ ಪುರಾಣ ಜನಕೋಟಿಯನ್ನು ಉದ್ಧಾರಮಾಡಲಿ, ಕವಿಗಳ ಶುಭಹಸ್ತದಿಂದ ಇಂಥ ನೂರಾರು ಪುರಾಣಗಳು, ಪುಣ್ಯ ಚರಿತ್ರೆಗಳು ಬೆಳಕಿಗೆ ಬರಲಿ ಎಂದು ಹಾರೈಸುತೇನೆ.

೬-೧೧-೧೯೭೧
ಮುಕ್ಕಾಂ- ಧಾರವಾಡ

ಆರ್. ಸಿ. ಹಿರೇಮಠ

ಕನ್ನಡ ಅಧ್ಯಯನ ಸಂಸ್ಥೆ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

# ಕವಿವಾಣಿ

ಜೀವತ್ವಂ ದುಃಖ ಸರಸ್ವಂ ತದಿದಂ ಮಲ ಕಲ್ಪಿತಂ
ನಿರಸ್ಯತೇ ಗುರೋರ್ಬೋಧಾತ್ ಜ್ಞಾನಶಕ್ತಿಃ ಪ್ರಕಾಶತೇ ॥

ಈ ಜೀವತ್ವವು ಮೂರುಮಲಗಳಿಂದೊಡಗೂಡಿರೋಣದರಿಂದ ದುರ್ವಾಸನಾಮಯವಾಗಿದೆ; ದುಃಖಮಯವಾಗಿದೆ. ಈ ದುಃಖ ದುವ್ಮಾನದ ದುರ್ವಾಸನೆಯಳಿದು ಜೀವತ್ವ ದೂರಾಗಲು ಗುರುಬೋಧೆ ಅಗತ್ಯ. ಮೂರ್ತ್ತನುಗಳಲ್ಲಿಯ ಮೂರ್ಮಲಗಳಿಲ್ಲವಾಗಿಸಲು ಮೂರ್ಲಿಂಗಗಳನ್ನು ಗುರುವಿನಿಂದ ಪಡೆದ ಲಿಂಗಿಗಳಿಗೆ ಅತ್ಯವಶ್ಯ ಗುರುಬೋಧೆ. ಈ ಬೋಧೆಯಿಂದ ಜ್ಞಾನಶಕ್ತಿಯು ಅರಿವಾಗಿ ಅದು ಬೆಳಕಾಗಿ ಬೆಳಗಿದಾಗ ಕರ್ಮದ ಕತ್ತಲೆ ನಾಶವಾಗುತ್ತದೆ. ಇದೆ ದಿಸೆಯಲ್ಲಿ ಶ್ರವಣ ಭಕ್ತಿ ಕಲಿಸಿ; ಬೆಳೆಸಿ; ಗುರುಬೋಧೆಯನ್ನೇ ಕೀರ್ತನ ಪುರಾಣಗಳ ಮೂಲಕ ಗುರುವಚನ ಸುಧೆ ನೀಡುವ ರೂಢಿಗಿರಿಸಿದ್ದಾರೆ ಆರ್ಯರು. ಆ ಶ್ರವಣದಲ್ಲಿ ಶ್ರೀಗುರುಬೋಧಾಮೃತ ಹೊನಲಾಗಿ ಹರಿದು ಬಂದು ಭವಬಂಧಿಗಳನ್ನು ಶಿವಬಂಧಿಗಳನ್ನಾಗಿ ಮಾಡುತ್ತದೆ.

ಈ ಗುರುಬೋಧೆಗೆ ಮೂಲ ಕಾರಣ. ಗುರು ಕಾರುಣ್ಯ. ಆ ಕಾರುಣ್ಯ ಕೈಗೂಡಬೇಕಾದರೆ ಮೈಮನಗಳಲ್ಲಿ ಅದರ ಅಪೇಕ್ಷೆ ಆವರಿಸಿರಬೇಕು. ಅಂಥಾ ಅಪೇಕ್ಷೆ ಅಕ್ಷಯವಾದಾಗ ಭಕ್ತಿ ಪ್ರಸನ್ನತೆ. ಭಕ್ತಿಯಿಂದ ಭಜಿಸಿದಾಗ ಭಗವಂತನ ಸಾಕಾರ ರೂಪಿ ಗುರುವಿನ ಕೃಪೆ. ಅಂತೇ "ಸತ್ಯರ ಭಜನೆಯ | ನಿತ್ಯರ ಭಜನೆಯ | ನೆತ್ತಿಬಾಗಿ ಹಸ್ತವ ಮುಗಿದು | ಉತ್ತಮತನದಲಿ ಚಿತ್ತವಿಟ್ಟು ಶಿವ | ಗತ್ತಿನಲಿ ಕುಣಿಯುತ ನಾದದೊಳು" ಎಂದು ಬಾಲಲೀಲಾ ಮಹಾಂತರು ಮನದುಂಬಿ ಹಾಡಿದ್ದಾರೆ. ಇಂಥಾ ಹಾಡು "ನೀನು ಸದಾ ಹಾಡು"ತ್ತಿರು ಎಂದೇ ನನಗೆ ಗಾನಗುರು ಶ್ರೀ ಪಂಚಾಕ್ಷರ ಶಿವಯೋಗಿಗಳವರು ಸಂಗೀತ ಕಲಿಸಿದರು. ಬರೀ ನಾದವಿದ್ದರೆ ಹಾಡು ಪೂರ್ತಿಯಲ್ಲ, ಪದ್ಯಬೇಕು, ಎಂದು ಸಾಹಿತ್ಯ ಕಲಿಯಲು; ಕಲಿಸಲು ಅಪ್ಪಣೆಗೈದು "ಪುಟ್ಟಯ್ಯ ಸಂಸ್ಕೃತ ಕಲಿ, ಸಾಹಿತ್ಯ ಓದು, ಅಂದರೆ ನೀನೊಬ್ಬ ಕವಿಯಾಗಿ ಮೆರೆಯುವಿ" ಎಂದು ಹರಸಿದರು ನನ್ನ ಗುರುವಿನ ಗುರು ಪರಮ ಗುರು ಹಾನಗಲ್ಲಕುಮಾರಮಹಾಶಿವಯೋಗಿಗಳವರು. ಈ ಉಭಯರ ಹರಕೆಯಂತೆ ಉಭಯ ಸಂಗೀತ, ತ್ರಿಭಾಷಾ ಪಾಂಡಿತ್ಯ ನನಗೊಲಿತು ಬಂದಿದೆ. ಹರಕೆಯಾಗಿ ಹರಿದು ಬಂದ ಈ ಎರಡೂ ಕಲೆಗಳು ಹರನ ಸೇವೆಗೆ ಮೀಸಲಾಗಿರಿಸಿ ಭವಪರಿಯಬೇಕೆಂಬ ಹಿರಿ ಹಂಬಲವೆನಗೆ.

ಹಿಂದೆಂಬುದಿಲ್ಲ, ಮುಂದೆಂಬುದಿಲ್ಲ,
ಒಳಗೆಂಬುದಿಲ್ಲ; ಹೊರಗೆಂಬುದಿಲ್ಲ,
ಕೀಳೆಂಬುದಿಲ್ಲ; ಮೇಲೆಂಬುದಿಲ್ಲ,
ಕೂಡಲಸಂಗಮದೇವಾ ! ನಿಮ್ಮ ಶರಣನ
ಎತ್ತೆತ್ತ ನೋಡಿದಡತ್ತ ನೀವೇ ಕಂಡಯ್ಯ.



ತ್ರಿಭಾಷಾಕವಿಗಳು, ಉಭಯಗಾಯನವಾದನ ವಿಶಾರದರೂ,
ರಾಷ್ಟ್ರಪತಿ ಸನ್ಮಾನಿತರೂ, ರಾಜ್ಯ ಸಂಗೀತ ನಾಟಕ
ಅಕ್ಯಾಡಮಿ ಸನ್ಮಾನಿತರೂ ಹಾಗೂ ಈ ಪುರಾಣ ಕರ್ತೃಗಳಾದ

ಶ್ರೀ ಪೂಜ್ಯ ಪುಟ್ಟರಾಜಕವಿಗವಾಯಿಗಳು

( ಹಾರ್ಮೋನಿಯಂ ವಾದನದಲ್ಲಿ )

ಏಕಾತ್ಮಭಾವ ಬೆಸಗೊಂಡು ಶಿವಭಕ್ತನಲ್ಲಿ ನಿಂದಾಗ ಅವನಲ್ಲಿ ಅಂತರ್ಬಹಿರ್ ಭೇದ ಗಳಿಗಿಂಬಿಲ್ಲ. ಆತ ಶರೀರವಿದ್ದರೂ ಅಶರೀರಿ, ನಾಮವಿದ್ದರೂ ನಿರ್ನಾಮಿ, ರೂಹಿದ್ದೂ ಅರೂಹಿ, ಗಮ್ಯನಾದರೂ ಅಗಮ್ಯ. ಪ್ರಕೃರ್ತಿವಿಡಿದು ಪರಮ ಪರಿಣಾಮಿ ಕೂಡಲ ಸಂಗನ ಶರಣ ! ಎಂದ ಬಸವ ತಂದೆಯ ಬೋಧೆ ಎನ್ನಲ್ಲಿ ಬೇರೂರಿ "ಮಮಭಕ್ತೋ ಮಮಾಧಿಕಃ" ಎಂಬ ಶಿವವಾಣಿ ಸಾಕ್ಷಿ ನುಡಿಯೆ, ಶಿವಶರಣರು ಶಿವಯೋಗಿಗಳು ಶಿವನಸಾಕಾರ ಮೂರ್ತಿಗಳೆಂಬ ಭಾವ ಸಾಮ್ರಾಜ್ಯದ (ಪುಟ್ಟ) ರಾಜನಾದೆ. ಶಂಭು ವಿನ ನಾಮ-ಗುಣ-ಘನ ವ್ಯಕ್ತಿತ್ವವೇ ಮೈಗೊಂಡು ಭುವಿಗಿಳಿದ ಶ್ರೀ ಗಂಜೀಗಟ್ಟಿ ಚರಮೂರ್ತೀಶ್ವರ ಚರಿತ್ರೆ ಬರೆದೆನು.

ಚರಮೂರ್ತಿಗಳ ಪುರಾಣ ಬರೆಯಲು ಮುಖ್ಯ, ಗುರು ಕಾರುಣ್ಯ. ಈಗಿನ ಗಂಜೀಗಟ್ಟಿ ಚರಮೂರ್ತೀಶ್ವರ ಮಠಾಧಿಪತಿಗಳು ಈ ಪುರಾಣ ಬರೆಯಲು ಅಪ್ಪಣೆ ಕೊಡಿಸಿದರು. ಬೇಡಿದರೂ ಸಿಗದ ಭಾಗ್ಯ ಬಾಗಿಲಿಗೆ ಬಂದಂತೆ ಗುರುಲಿಂಗ ಜಂಗಮ ಸೇವಾಭಿಲಾಷಿಯಾದ ನನಗೆ ಚರಮೂರ್ತೀಶ್ವರ ಸೇವೆ ನನಗೊದಗಿ ಬಂದಿದೆ; ಹೃದ ಯಾರೆ ಈ ಸೇವಾ ಭಾಗಿಯಾದೆ. ಶ್ರೀ ಪೂಜ್ಯ ಕಾಶೀ ಜಗದ್ಗುರುಗಳು ಹಾಗೂ ಶ್ರೀ ಪೂಜ್ಯ ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರುಗಳು ಈ ಕೃತಿಗೆ ಆಶೀರ್ವ ದಿಸಿದ್ದಾರೆ ಆಶೀರ್ವಚನದ ಮೂಲಕ. ಗುರು-ವಿರಕ್ತರ ಕಲಹದ ಕಣವಾದ ಈ ಕಾಲ ಪರಿಸರಕ್ಕೆ, ಅವರೀರ್ವರು ಒಂದಾಗುವದೇ ಸುಖ; ಶುಭ. ಈ ಆದೇಶದಂತೆ ಈ ಉಭಯ ಜಗದ್ಗುರುಗಳ ಆಶೀರ್ವಾದ ಅಭೇದ ರೂಪದಿಂದ ಈ ಕೃತಿಯಲ್ಲಿ ಮೇಳ ಗೊಂಡಿವೆ; ಇಂಥಾ ಸುಪ್ರಸಂಗ ಹಲವಾರು ನನಗೊದಗಿಸಿಕೊಡಬೇಕೆಂದು ಬೇಡುವೆ. ಇನ್ನು ನಮ್ಮ ನಾಡಿನ ಪ್ರಮುಖ ಸಂಶೋಧಕರಾದ ಡಾ॥ ಆರ್. ಸಿ. ಹಿರೇಮಠ, ಕ. ವಿ. ವಿ. ಧಾರವಾಡ ಅವರು ನನ್ನ ಕೃತಿಯನ್ನು ಹೃದಯಾರೆ ಮೆಚ್ಚಿ ಮುನ್ನುಡಿ ಬರೆದಿದ್ದಾರೆ. ಅವರ ಹಿರಿ ಹೃದಯದ ಸಾಹಿತ್ಯ ಸೇವೆ ಇನ್ನೂ ಬಹುಕಾಲ ಸಾಗಿ, ಆಯುರ ಬಾಳು ಅವರಿಗೆ ವಿಸ್ತರಿಸಲಾಗಲಿ ! ಎಂದು ಆಶಿಸುವೆ. ದಿನಾಲು ಲಿಂಗಪೂಜೆಗೆ ಕುಳಿತಾಗ ಕಷ್ಟಪಟ್ಟು ಪುರಾಣ ಬರೆದ ಚಿ॥ ಬಿ. ಆರ್. ಪಾಟೀಲ ಕಣವಿ, ಹಾಗೂ ಕರಡು ಪ್ರತಿ ತಯಾರಿಸಿ ಅಚ್ಚುಗೊಳಿಸಿದ ಚಿ॥ ಗುರುಸ್ವಾಮಿ ಕಲಿಕೇರಿ, ಇವರೀರ್ವರಿಗೂ ಸದ್ಗುರು ಆಯುರಾರೋಗ್ಯ ಸಂಪತ್ತು ಕರುಣಿಸಲೆಂದು ಬಯಸಿ, ಕೃಪಾಮೂರ್ತಿ ಗುರುದ್ವಯರು ಸದಾ ಇಂಥ ಸೇವೆಗೆನ್ನ ಅಣಿಮಾಡಿ ಕೊಳ್ಳಲಿ ! ಎಂದು ನೆನೆವೆ.

ಸತ್ಯಂ ಶಿವಂ ಸುಂದರಂ

ಗುರುಲಿಂಗ ಜಂಗಮ ಭಕ್ತ ವಿಧೇಯ

**ಶ್ರೀ ಪಂ. ಪುಟ್ಟರಾಜ ಕವಿ ಗವಾಯಿಗಳು**

# ಪ್ರಕಾಶಕರ ಚತುರ್ನುಡಿಗಳು

ಚತುರ್ನುಡಿಗಳೆಂದರೆ ಚತುರ ನುಡಿಗಳಲ್ಲ, ನಾಲ್ಕು ಮಾತುಗಳು. ಪಂಡಿತ ಪುಟ್ಟರಾಜ ಗವಾಯಿಗಳು ತ್ರಿಭಾಷಾ ಕವಿಗಳಾಗಿ, ರಾಷ್ಟ್ರಪತಿ ಸನ್ಮಾನ ಪಡೆದವರಾಗಿ, ಕನ್ನಡಿಗರಿಗೆ ಮಾತ್ರವಲ್ಲ, ಅಖಂಡ ಭಾರತೀಯರಿಗೇ ಸುಪರಿಚಿತರಾಗಿದ್ದಾರೆ. ಇಂತಹರು ಲಿಂಗೈಕ್ಯ ಪರಮಪೂಜ್ಯ ಶ್ರೀ ಚರಮೂರ್ತಿ ಮಹಾಸ್ವಾಮಿಗಳು ಗಂಜೀಗಟ್ಟಿ ತಾ: ಶಿಗ್ಗಾಂವ ಅವರ ಚರಿತ್ರಾಮೃತವನ್ನು ಸುಲಲಿತ ಪದಲಾಲಿತ್ಯದ ಸೊಂಪಿನೊಡನೆ ಸರ್ವ ಭಕ್ತವೃಂದಕ್ಕೆ ಉಣಬಡಿಸಿದ್ದಾರೆ. ಪೂಜ್ಯರ ಚರಿತ್ರೆಯ ಕರಡು ಪ್ರತಿಯನ್ನು ಸದ್ಭಕ್ತ ಮಾಹೇಶ ಶ್ರೇಷ್ಠ ಲಿಂಗೈಕ್ಯ ಶ್ರೀ ಮಹಾಂತಸ್ವಾಮಿಗಳು ಹಿರೇಮಠ, ಸಾ|| ಚಿಕ್ಕಮಲ್ಲೂರ ಅವರು ತಯಾರಿಸಿದ್ದರು. ಅದನ್ನೇ ಆಧಾರ ಗ್ರಂಥವಾಗಿಟ್ಟುಕೊಂಡು ಷಟ್ಪದಿಯಲ್ಲಿ ರಚಿತವಾದ ಸ್ಪಟಿಕ ಸದೃಶವಾದ ಈ "ಚರಮೂರ್ತೀಶ್ವರ ಪುರಾಣ" ವನ್ನು ಪ್ರಕಾಶನಗೊಳಿಸುವದು ತುಂಬ ಪ್ರಯಾಸದ್ದೆಂದು ಭಾವಿಸುವೆ.

ಸ್ವಯಂಪ್ರಕಾಶನವಾದ ರವಿಯನ್ನು ಕಿರುಜ್ಯೋತಿಯೊಂದು ಉರಿದು ಅತನಿಗೆ ನಾನೇ ಬೆಳಕನ್ನಿತ್ತು ಪ್ರಕಾಶಗೊಳಿಸಿದೆನೆಂದರೆ ಎಂತಾಗುವದೋ, ಅಂತೆಯೇ ನಾನು ಕವಿವರ್ಯರ ಕೃತಿಯನ್ನು ಪ್ರಕಾಶನಗೊಳಿಸುವಿಕೆಯೆಂದು ಭಾವಿಸುವೆ. ಅದೇನೇ ಇದ್ದರೂ ಬಲ್ಲಿದರೊಪ್ಪಿಸಿದ ಕಾರ್ಯವನ್ನು ನಿರಾಕರಿಸಲಾರದೆ ಸ್ವೀಕರಿಸಿರುವೆ.

ಗವಯಿಗಳು ಗ್ರಂಥ ರಚನೆಯಿಂದಾರಂಭಿಸಿ, ಮುದ್ರಣ ಕಾರ್ಯ ಪೂರೈಸಿಸಿದ್ದಲ್ಲದೆ ತಾವೇ ಸ್ವತಃ ಇದೇ ಶ್ರೀ. ಶಾ. ಶಕೆ. 1893 ನೆಯ ವಿರೋಧಿ ನಾಮ ಸಂ. ಶ್ರಾವಣದಾರಂಭದಿಂದ ಭಾದ್ರಪದ ಶುದ್ಧ ಚತುರ್ದಶಿಯವರೆಗೂ ಅವ್ಯಾಹತವಾಗಿ ಪುರಾಣ ಪ್ರವಚನೆ ಮಾಡಿ ಭಕ್ತಕೋಟಿಯನ್ನು ಪುನೀತಗೊಳಿಸಿದ್ದಾರೆ. ಅಲ್ಲದೆ ಈ ಗ್ರಂಥ ಪ್ರಕಾಶನಗೊಳಿಸಲು ನನಗೆ ಅವಕಾಶವಿತ್ತು ನನ್ನನ್ನೂ ಕಿಂಚಿತ್ ಸೇವಾಭಾಗಿಯಾಗುವಂತೆ ಮಾಡಿ ಕೃತಾರ್ಥನನ್ನಾಗಿ ಮಾಡಿದ್ದಾರೆಂದು ತಿಳಿಯುವೆ. ಚರಮೂರ್ತಿಗಳ ಪುರಾಣಗಳಂತಹ ಕೃತಿ ರತ್ನಗಳು ಆ ದಯಾಘನನ ಕೃಪೆಯಿಂದ ಪುಟ್ಟರಾಜರಿಂದ ರಚಿಸಲ್ಪಟ್ಟು ಕನ್ನಡ ಮಾತೆಯು, ಕರ್ನಾಟಕದ ಸದ್ಭಕ್ತರ ಏಳ್ಗೆಗೆ ನೆರವಾಗುವಂತಾಗಲೆಂದು ಮತ್ತೊಮ್ಮೆ ದಯಾಘನನನ್ನು ಪ್ರಾರ್ಥಿಸುತ್ತೇನೆ.

ಓಂ, ಶಾಂತಿಃ, ಶಾಂತಿಃ, ಶಾಂತಿಃ.

ಶ್ರೀ. ಶ್ರೀ. ಚರಮೂರ್ತಿ ಮಹಾಸ್ವಾಮಿಗಳು
ಚರಮೂರ್ತೀಶ್ವರಮಠ
ಗಂಜೀಗಟ್ಟಿ. (ತಾ. ಶಿಗ್ಗಾಂವ.)



ಗಂಜೀಗಟ್ಟಿ ಚರಮೂರ್ತಿೀಶ್ವರ ಮಠದ ಸದ್ಯದ ಅಧಿಕಾರಿಗಳು
ಸಮಾಜಪ್ರೇಮಿಗಳು ಆದ

ಶ್ರೀ ಚರಮೂರ್ತಿ ಸ್ವಾಮಿಗಳು

ಶ್ರೀ

ಗಂಜೀಗಟ್ಟಿ

# ಚರಮೂರ್ತೀಶ್ವರ ಪುರಾಣ

( ಭಾಮಿನಿ ಷಟ್ಪದಿ )

—ಪಂ. ಪುಟ್ಟರಾಜಕವಿ ಕೃತ

|| ಶ್ರೀ ಜಗದ್ಗುರು ತೋಂಟದಾರ್ಯ ಪ್ರಸನ್ನ ||



# ಮೊದಲನೆಯ ಸಂಧಿ

## (ಪೀಠಿಕಾಧ್ಯಾಯ)

ಶ್ರೀಗುರೂತ್ತಮ ವಿನುತಸತ್ತಮ
ಯೋಗವಿದಸಮಭಾಸ್ವದನುಪಮ
ರಾಗಚಿತ್ತಮ ಭಾಷಿತಪ್ರಮ ಭೂಷಿತಮಹಿಮನೆ |
ಆಗಮೋಕ್ತ ಮಹದ್ಗುಣಾಗಮ
ನೈಗಮಾಗ್ರಿಮಧಾಮಸಂಗಮ
ಲೋಗರಕ್ರಮಮಂ ಬಿಡಿಸುತಮಶಾಂತಿಯಂ ಕಳೆಯೈ || ೧ ||

ಗಂಗೆಯಧರಿಸಿ ಕಾಮನದಹಿಸಿ
ಮಂಗಳಕೆಳಿಸಿ ಕಾಲನನಳಿಸಿ
ಭಂಗವಬಿಡಿಸಿ ಗಿರಿಜೆಯವರಿಸಿ ಶಂಕರನೆನಿಸಿದ್ದೈ |
ಜಂಗಮನೆನಿಸಿ ಭಕ್ತಿಯಬೆಳಿಸಿ
ಲಿಂಗದೆನೆಲಿಸಿ ಗುರುವೆಂದೆನಿಸಿ
ಸಂಗವಕೆಡಿಸಿ ನೈಜವತಿಳಿಸಿಪರಶಿವನೆಪೊರೆಯೈ ‖ ೨ ‖

ಶಿವನ ಸದ್ಯೋಜಾತಮುಖದಿಂ
ದವತರಿಸಿ ಸೋಮೇಶಲಿಂಗದಿ
ನವನಿಯೊೞ್ ಸದ್ವೀರಶೈವವಸ್ಥಾಪಿಸುತೆಮೆರೆದ |
ತವೆಜಗದ್ಗುರು ರೇಣುಕಾಚಾ
ರ್ಯವರ ಪಾದಂಗಳ್ಗೆ ನಮಿಸುತೆ
ನವ ಪುರಾಣವ ಬರೆಯಲುಜ್ಜುಗಿಪೆಂಕೃಪೆಯ ಬಯಸಿ ‖ ೩ ‖

ವಾಮದೇವ ಮುಖೋದ್ಭವನೆನಿಸು
ತಾ, ಮಹಿತ ಸಿದ್ಧೇಶ ಲಿಂಗದೆ
ಸೋಮನಪ್ಪಣೆಯಿಂದಲವತರಿಸಿದದಾರುಕಾಖ್ಯ |
ಕಾಮರಹಿತ ಜಗದ್ಗುರುವರಂ
ನೇಮದಿಂದೀ ವೀರಶೈವವ
ಭೂಮಿಯೊೞ್ ಸ್ಥಾಪಿಸಿದವೊಲಿಡಲಿಕೃಪೆಯನೀಕೃತಿಯೊೞ್ ‖ ೪ ‖

ಪಂಡಿತಾರಾಧ್ಯಂ ಜಗದ್ಗುರು
ದಂಡಲೆದು ಭಕ್ತಿಯ ಬೆಳೆಸುತಂ
ಖಂಡಿಸುತೆ ಪರದುರ್ವಾದಿಗಳ ಶಿವಮತವಕ್ಷಿತಿಯ |
ಮಂಡಲದೆ ಸ್ಥಾಪಿಸುತೆ ಮೆರೆದನ
ಖಂಡಮಹಿಮನಘೋರಮುಖಜಂ
ದಂಡಿತಷಡರಿ ಮಲ್ಲಿಕಾರ್ಜುನಲಿಂಗಾವತಾರಿ ‖ ೫ ‖

ಪರಮ ತತ್ಪುರುಷಾನನೋದ್ಭವ
ನುರು ಕೇದಾರಲಿಂಗ ಸಂಭವ
ನರಿಯಲಿಳೆಯೊಳ್ ವೀರಶೈವಸುಮತವಸ್ಥಾಪಿಸುತೆ |
ಮೆರೆದಮಹಿಮಂ ಜಗದಗುರುವೀ
ಚರಮೂರ್ತಿಯ ಪುರಾಣವಬರೆಯ
ಲುರುತರಶಕ್ತಿಯಂ ನೀಡಲೆನ್ನಜ್ಞಮತಿಯಲ್ಲಿ ॥ ೬ ॥

ಶ್ರೀಜಗದ್ಗುರುವೀಶಾನಾಖ್ಯ
ರಾಜಿತಾನನದಲ್ಲಿ ಜನ್ಮಿಸಿ
ಮೋಜಿನಿಂ ವಿಶ್ವೇಶಲಿಂಗೋದ್ಭವನೆನಿಸಿಕ್ಷಿತಿಯೊಳ್ |
ತೇಜದಿಂ ಜನಹೃದ್‌ಭೂಮಿಯೊಳ್
ಸೋಜಿಗವೆನಲ್ ಲಿಂಗತತ್ವದ
ಬೀಜಮಂ ಬಿತ್ತುತೆಫಲವಕಂಡವನೆ ಪೊರೆಗೆನ್ನ ॥ ೭ ॥

ಕಲ್ಯಾಣದೊಳ್ ಶೂನ್ಯಪೀಠವ
ಕಲ್ಯಾಣಕಾಗಿಯೆ ಸ್ಥಾಪಿಸುತೆ
ಕಲ್ಯಾಣಕರ ಬಸವನಾಮವ ಸಾರ್ಥಕಂಗೊಳಿಸಿ |
ಕಲ್ಯಾಣಕರ ವಚನಶಾಸ್ತ್ರವ
ಕಲ್ಯಾಣತಮನೆನಿಸಿ ರಚಿಸಿದ
ಕಲ್ಯಾಣಮೂರ್ತಿಯು ಸದ್ಯೈವನೆಲಿಸಿರ್ಕೆ ಹೃದ್ಗೃಹದೆ ॥ ೮ ॥

ನಂದಿಯೆ ಬಸವನೆಂದರುಹಲಾ
ನಂದದಿಂ ಧರೆಗಿಳಿದು ಬಂದಿಹ
ನಂದವಹ ಷಣ್ಮುಖಮೂರ್ತಿಯಂದೆಂಬಪೆಸರಾಂತ |
ಸುಂದರ ಚನ್ನ ಬಸವೇಶ್ವರನ
ಸುಂದರತೆವ್ಯಕ್ತಿಹಪದಾಬ್ಜಂ
ಸುಂದರತ್ವವನರುಹಲೆನ್ನಯ ಹೃತ್ಸರದೊಳಿರ್ಕೆ ॥ ೯ ॥

ಶಿವನಿರಂಜನಕಲೆಯವತಾರಿ
ಯ ವಿರಳ ಪರಂಜ್ಯೋತಿರೂಪಂ
ಕವಿದ ಷಡರಿಗಳುಪಟಳವಪರಿಹರಿಸಲೋಸುಗವೆ |
ಅವಿರತಂಪ್ರಭುವಲ್ಲಮಂತಾಂ
ತವೆಯನ್ನ ಹೃತ್ಪೀಠವನೇರಿ
ನವಲಿಂಗಸಾಹಿತ್ಯವನರುಹುತಿಲ್ಲಿ ರಾಜಿಸಲಿ || ೧೦ ||

ಜಗದ ಜಗಧೀಶ್ವರನಶಕ್ತಿಯೆ
ಸ್ವಗದೆ ತಾನೆನಿಸುತ್ತೆ ಸರ್ವಕೆ
ಮಿಗಿಲೆನಿಸಿ ಸರ್ವಸ್ವರೂಪಿಣಿ ತಾನೆನಿಸಿ ಮೆರೆದು |
ಬಗೆಯ ಸರಸತಿ ಲಕುಮಿಯೆನಿಸುತೆ
ಮಿಗುವ ಸೃಷ್ಟಿ ಸ್ಥಿತಿಲಯವಮಾಳ್
ಪಗಜೆಯೆನ್ನೊಳ್ ಕವಿತೆಯೋಜಯನಿತ್ತು ರಕ್ಷಿಸಲಿ || ೧೧ ||

ಈ ಮಹಾದೇವಿಯು ಲಿಂಗಾಂಗ
ಸಾಮರಸ್ಯದ ಸುಖವಪಡೆಯಲ್
ಭೂಮಿಗವತರಿಸುತೆ ಸುಮತಿನಿರ್ಮಲರ ಸುತೆಯನಿಸಿ |
ಕಾಮಿ ಕೌಶಿಕರಾಜ್ಞೀಪದವ
ನೇಮದಿಂ ಧಿಕ್ಕರಿಸಿ ಲಿಂಗಕೆ
ಪ್ರೇಮದಿಂಸತಿಯಾಗಿ ಮೆರೆದಕ್ಕನಪದಕೆ ನಮಿಪೇಂ || ೧೨ ||

ಧ್ಯಾನವಿಧಿ ಸುಜ್ಞಾನ ನಿಧಿ ಸನ್-
ಮಾನಕೃತಿ ವಿಜ್ಞಾನಮತಿ ಚಿರ-
ದಾನಪರ ನಿಜದೀನಾಂಧಸದನಾಥಧವ ವಿಭವ |
ಮೌನಿಜನ ಸುಜ್ಞಾನಿ ಘನದುರ್-
ಮಾನಿಭಯ ವಿಜ್ಞಾನಿಜಯ ಸಂ-
ಧಾನಿ ವಿರಾಟ್ಪುರವಿಧಾನಿ ಕುಮಾರಯತಿ ಶರಣು || ೧೩ ||



ಶ್ರೀಮದ್ವೀರಶೈವ ಮಹಾಸಭೆಯ ಸಂಸ್ಥಾಪಕರೂ ಶ್ರೀಮಚ್ಛಿವಯೋಗ ಮಂದಿರದ ಪಿತಾಮಹರೂ ಆದ

**ಶ್ರೀ ಮತ್ಪರಮ ಪೂಜ್ಯ ಲಿಂ. ಹಾನಗಲ್ಲ ಕುಮಾರ ಮಹಾ ಶಿವಯೋಗಿಗಳು**

ಹುಟ್ಟಿಗುರುಡರ ಹುಟ್ಟನಳಿಸಲು
ಹುಟ್ಟಲಾರದೆ ಹುಟ್ಟಿ ಬಂದಂ
ಬಿಟ್ಟ ಚರ್ಮಾ ಕ್ಷಿಯ ಕಾಡಶೆಟ್ಟಿಯಗ್ರಾಮದಲ್ಲಿ |
ದಿಟ್ಟನಾಗಿ ಚರಂತಿ ಪೆಸರಿನ
ಪಟ್ಟದಮಠದೆ ಶಿಷ್ಯನೆನಿಸುತ
ಮುಟ್ಟಿಗುರುವಂ ಗುರುವಾದ ಪಂಚಾಕ್ಷರಿಗೆ ಶರಣು || ೧೪ ||

ಇವರ ಸನ್ನಿಧಿಯಲ್ಲಿ ಸಂಸ್ಕೃತ
ನವರಾಷ್ಟ್ರಭಾಷೆಗಳ ಕನ್ನಡ
ಸವಿನುಡಿಯ ಸಾಹಿತ್ಯಗಳನಭ್ಯಸಿಸಿತತ್ಕೃಪೆಯೊಳ್ |
ವಿವಿಧ ಸಂಗೀತವ ವಾದನವ
ಸುವಿನಯದೆ ಕಲಿಯುತೆ ತ್ರಿಭಾಷಾ
ಕವಿಯನಿಸಿ ಮೆರೆದೇಂ ಪುಟ್ಟರಾಜಾಹ್ವಯದೊಳಾನೆ || ೧೫ ||

ಹಾನಗಲ್ಲ ಸೀಮೆಗೆ ಸೇರಿರುವ
ಸಾನುವಿನೊಳಿಹ ಹೊಸಪೇಟೆಯೊಳ್
ಮೂಗಿಶರ್ ಸಿದ್ಧಾಂಬಿಕಾ ರೇವಣಸಿದ್ಧರೆನಗೆ |
ದೀನರಾಗಿಹ ತಾಯ್ತಂದೆಗಳ
ಸೂನವೆಂಕಟೆ ಪುರಮಠದವರ್
ಸೂನುವಾದೆನ್ನಂ ಮಾವನಹ ಚಂದ್ರಶೇಖರಗೆ || ೧೬ ||

ಒಪ್ಪಿಸಲ್ ಸಂಗೀತ ವಿದ್ಯೆಯ
ತಪ್ಪದಲೆ ಪ್ರಾರಂಭಿಸುತಾತ
ನೊಪ್ಪಿಸಿದನಾ ಪಂಚಾಕ್ಷರೇಶ್ವರ ಗುರುವಿಗೆನ್ನಂ |
ತಪ್ಪನಾರಿಸದೆನ್ನ ಪೊರೆಯುತ
ಲೊಪ್ಪವಾಚಾರ ವಿಚಾರವಮಂ
ತಪ್ಪದೆ ಕಲಿಸಿ ಬಿದರಿಗುರುವಿಂ ದೀಕ್ಷೆಯಗೆಯ್ಸಿದಂ || ೧೭ ||

॥ ಶ್ರೀ ಗುರು ಬಸವಲಿಂಗಾಯನಮಃ ॥



# ಎರಡನೆಯ ಸಂಧಿಯು

ಮೂದಾಪುರದ ಪಿರಿಯಮಠದೋಳ್
ಖೇದಾಗ್ನಿಶಾಮಕ ಸುತನಂದು
ಮೋದಾಬ್ಧಿಯಂ ಪೆರ್ಚಿಸುತಲವತರಿಸಿದಂ ಪ್ರಮಥಂ ॥ ಪಲ್ಲ ॥

ದೇವದೇವ ಮಹಾದೇವ ಸದ್-
ಭಾವಮಂದಿರ ಭಕ್ತಸುಂದರ
ಜೀವಕರುಣಾಕರ ಮನೋಹರ ಮಂಗಲಾತ್ಮಕನೆ ।
ಕಾವುದೈ ಶಂಕರ ನಿರಂತರ
ಭಾವುಕಾಮಲ ಕೀರ್ತಿಬಂಧುರ
ಸೇವೆಯಂ ಮಾಳ್ಪಚಲ ಭಕ್ತಿಯ ಕರುಣಿಸುತ್ತ ಭವ ॥ ೧ ॥



ಲಲಿತ ಕಲೋದ್ಧಾರಕರೂ ಗಾನಯೋಗಿಗಳೂ ಆದ
ಉಭಯಗಾಯನಾಚಾರ್ಯ
ಶ್ರೀ ಲಿಂ. ಪಂಚಾಕ್ಷರ ಗವಾಯಿಗಳು
(ಅವರ ಅಮೃತ ಶಿಲಾಮೂರ್ತಿ)

ಈಗಿನೀ ಮಠದಧಿಕಾರಿಗಳ
ನಾಗಿನೀ ಮಠದಧಿಕಾರಿಗಳ
ಪೂಗವುಂ ಸ್ಮರಿಸುತ್ತಿ ಬರೆದುರು ಕರ್ತನಪುರಾಣಂ |
ಲೋಗರಿಷ್ಟವ ನೀಡಲಿದಕಾ
ಯೋಗಿ ಚರಮೂರ್ತಿಯೆ ನಾಯಕಂ
ರಾಗದಿಂದೋದಲಿ ಭಕ್ತರಿದಕುರೆ ಶಿವನೆ ದೈವಂ || ೨೨ ||

ಎಡೆಯೂರ ತೋಂಟದ ಸಿದ್ಧೇಶ
ನಡಿಯೊಳೀಕೃತಿಪುಷ್ಪಮುಂ ನೆರೆ
ಕಡುನಲವಿಂ ಸಮರ್ಪಿಸುತೆ ಸದ್ಭಕ್ತಿಯುಂ ಪಡೆವೇಂ |
ಎಡವಿಡದೆ ವಿಶ್ವವನುದ್ಧರಿಸ
ಸಡಗರದ ಗುರುಚರಭಕ್ತರಾ
ವ್ಯಡನಕಥೆಗಳ ನುತಿಪರತಿಯುದರಿಂದಲೊದಗುವದು || ೨೩ ||

ಗದುಗಿನೋಳ್ ಪಂಚಾಕ್ಷರನಗರ
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮುಲ್ಲಸಿವುದು |
ಪದುಳ್ದಿನ್ನ ಪಂಚಾಕ್ಷರಗುರುವಿ
ನುದಿತಯೋಗಸಮಾಧಿಯುದಲ್ಲಿ
ಮುದದೆ ಬರೆದ ಪುರಾಣಪೋಳ್ಪೀಠಿಕೆಯುಸಂಧಿಯಿದು || ೨೪ ||

**ಅಂತು ಸಂಧಿ ಒಂದಕ್ಕಂ ಪದಗಳು ಇಪ್ಪತ್ನಾಲ್ಕಕ್ಕಂ**
**ಮಂಗಲಂ**



# ಎರಡನೆಯ ಸಂಧಿಯು

ಮೂದಾಪುರದ ಪಿರಿಯಮಠದೋಳ್
ಖೇದಾಗ್ನಿಶಾಮಕ ಸುತನಂದು
ವೋದಾಬ್ಧಿಯಂ ಪೆರ್ಚಿಸುತಲವತರಿಸಿದಂ ಪ್ರಮಥಂ ॥ ಪಲ್ಲ ॥

ದೇವದೇವ ಮಹಾದೇವ ಸದ್-
ಭಾವಮಂದಿರ ಭಕ್ತಸುಂದರ
ಜೀವಕರುಣಾಕರ ಮನೋಹರ ಮಂಗಲಾತ್ಮಕನೆ।
ಕಾವುದೈ ಶಂಕರ ನಿರಂತರ
ಭಾವುಕಾಮಲ ಕೀರ್ತಿಬಂಧುರ
ಸೇವೆಯಂ ಮಾಳ್ಪಚಲ ಭಕ್ತಿಯ ಕರುಣಿಸುತ್ತಭವ ॥ ೧ ॥

ಧರೆಯ ಸೃಷ್ಟಿಗೆ ಮೊದಲಾವುದೆನ-
ಲೊರೆದುದಾಃಪೋವೇದವೆಂದಾ
ವುರುವೇದವಿಃೀಯುದಕವ ತೊರ್ದು ಮೆಃರೆವುದಲ್ಲದಲೆ |
ಯುರಗಿದ ಮುಗಿಲ್ಗಳಿಗಿದನಿತ್ತು
ಮೆರೆಯುವಂಬುದನೆಂಬ ಪೆಸರನು
ಮುರೆ ಕಾಯ್ದುಕೊಳ್ಳದಲಬ್ಧಿಯುಶಿದತ್ತವಕ್ಕಿತ್ತು || ೨ ||

ಕೆಡುಕನೆಸಗಿದವರ್ಗ್ಗೊಳಿತನುರೆ
ಸಡಗರದೆ ಗೆಯ್ಯುವಗುಣವ ಜನ-
ಕಡಿಗಡಿಗೆ ಸಲೆ ಕಲಿಸಲೆಂದಾಹ್ವಾನಿಸುವ ತೆಂದೆ |
ಕಡುಹಿನಿಂ ಶಬ್ದವ ಮಾಳ್ಪುದೀ
ಕಡಲಾನೇನ ಬಣ್ಣಿಪೆನದಂ
ಕಡೆದವನ ಕುಡಿದವನ ಕಟ್ಟಿದವನ ಪೊರೆದಿಹುದದು || ೩ ||

ಎನಗೆ ರತ್ನಾಕರನೆಂಬ ಪೆಸ-
ರನಘರಿಟ್ಟಿಹರಂತೆ ರತ್ನದ
ಖನಿಯುನ್ನೊಳಿರ್ದ್ದಡುಮಾನಿಧಿಯ ಪರರಿಗೀಯುವೆನು. |
ಘನಸುಕೃತದಿಂ ವಿಭವಕೀರ್ತಿಗ-
ಳನಿಶಮುಳಿದಿಹವಖಿಲರಿದನರಿ-
ದನವರತಮುಂ ದಾನಿಗಳಾಗಲೊರೆಯೆ ಗರ್ಜಿಪುದು || ೪ ||

ಇಂತೆಸೆವಬ್ಧಿಯೆಂಬ ವಸನವ-
ನಾಂತು ಮೆರೆಯುವ ಭೂದೇವಿಯುಂ
ಸಂತಸದೆ ಬಣ್ಣಿಪೆನೀಗಳಾನಾಲಿಪುದಖಿಲರು |
ಚಿಂತಿತಾರ್ಥವನೀಯಲೀ ಕ್ಷಿತಿ
ಕಾಂತೆಗಾರುಂ ಸಮರಲ್ಲವೆಂ-
ದೆಂತೊ ವಿಷ್ಣುವು ಕೈವಿಡಿದನಿವಳಂ ಮರೆದು ಶಿರಿಯ || ೫ ||

ವಸುಧಾರತ್ನ ಗರ್ಭ್ಭಮುಖ್ಯ
ಲಸಿತ ನಾಮಂಗಳ್ ಭೂಮಿಗುರೆ
ಯೆಸೆಯುವವು ಸಂಪತ್ಸಮೃದ್ಧಿಯಂ ತೋರ್ಪಡಿಸಲೆಂದು ।
ಸಸಿನದಿಂದಿದನರಿದು ಶೌರ್ಯದೊ-
ಳೊಸೆದಖಿಲ ಜನಮಂ ಬೆದರಿಸುತೆ
ವಸುಮತಿಯು ವಲ್ಲಭರಾವೆನುತೆ ನೃಪರಾಗೆಸೆದರು ॥ ೬ ॥

ನವಖಂಡ ಪೃಥ್ವಿಯೊಳಿದುವೆಯಾ
ನವಿರತವಿರ್ಪ ತಾವಿದರ ಪೆಸ-
ರವನಿಯೋಳ್ ಖ್ಯಾತಂ ಭರತಖಂಡಂ ಮೆರೆಯುತಿಹುದು ।
ತವೆ ಈ ಭೂಮಿಯಲ್ಲಿ ಎಸೆಯುತಿ-
ಹವುರೆ ಸಪ್ತ ದ್ವೀಪಂಗಳಿಹು-
ದವುಗಳೋಳ್ಪೆಸರಾಗಿ ಜಂಭುದ್ವೀಪವಿದರಲ್ಲಿ ॥ ೭ ॥

ಮೆರೆವವೈವತ್ತಾರು ದೇಶಗ-
ಳುರೆಪ್ರಥಿತವಾಗಿಹುದು ಭಾರತ-
ಮುರೆದೇಶಮಿದು ಸರ್ವವಿಭವಂಗಳ ತಾಣಮರಿಯೆ ।
ಕರಮಖಿಲ ಧರ್ಮಂಗಳಾಗರ-
ಮುರುತರನಿಖಿಲ ವಿದ್ಯಾಲಯಂ
ಚಿರಭೋಗ ಮೋಕ್ಷಾನಂದಕರ ತತ್ವನಿಲಯಮಿದೆ ॥ ೮ ॥

ವಿವಿಧ ಭಾಷೆಯ ವಿವಿಧ ವೇಷದ
ವಿವಿಧ ವ್ಯಕ್ತಿಯ ವಿವಿಧ ಶಕ್ತಿಯ
ವಿವಿಧ ಕರ್ಮದ ವಿವಿಧ ಧರ್ಮದ ವಿವಿಧ ಮರ್ಮಗಳ ।
ವಿವಿಧ ಬುದ್ಧಿಯ ವಿವಿಧ ವೃದ್ಧಿಯ
ವಿವಿಧ ಶುದ್ಧಿಯ ವಿವಿಧ ಸಿದ್ಧಿಯ
ವಿವಿಧತೆಯ ಸಂಗಮದಿಂದೆ ಮೆರೆದಿಹುದು ದೇಶಮಿದು ॥ ೯ ॥

ಎಲ್ಲ ಬೆಳೆಯಿಂದೆಲ್ಲಕಳೆಯಿಂ-
ದೆಲ್ಲ ಧರೆಯಿಂದೆಲ್ಲ ಶಿರಿಯಿಂ-
ದೆಲ್ಲ ಬನದಿಂದೆಲ್ಲ ಧನದಿಂದೆಲ್ಲ ಜನದಿಂದೆ |
ಎಲ್ಲ ಬಲದಿಂದೆಲ್ಲ ಫಲದಿಂ-
ದೆಲ್ಲ ಕುಲದಿಂದೆಲ್ಲ ಜಲದಿಂ-
ದೆಲ್ಲ ಸ್ಥಲದಿಂ ಚಲ್ವಾಯ್ತು ಭಾರತದೆ ಕರ್ನಾಟಂ || ೧೦ ||

ಭಾರತಾಂಬೆಯ ತನುಜೆಯಾಗಿಹ
ವೀರಕನ್ನಡ ಮಾತೆಯ ಸುತರ್
ಶೂರ ಹೊಯ್ಸಳ ಚಾಲುಕ್ಯಯಾದವ ರಾಷ್ಟ್ರಕೂಟ |
ಧೀರ ನೃಪಾಲ ಮುಖ್ಯರಹರೀ
ಧಾರುಣೀತಲದೋಳ್ ಪ್ರಶಿದ್ಧರ್
ಮೀರಿದ ಎಶೋಧ್ವಜವ ಮೆರೆಯಿಸಿದರ್ ಪರರಾಷ್ಟ್ರದೆ || ೧೧ ||

ಪಂಪ ಹರಿಹರ ರಾಘವಾದ್ಯರ್
ಪೆಂಪನಾಳ್ದ ಕವಿತ್ವದೊಡೆಯರ
ಲಂಪಿನಿಂ ಬರೆದನಘ ಕಥೆಗಳ್ ಕಾವ್ಯಮಾಗೆಸೆದು |
ಸೊಂಪಿನ ಕನ್ನಡದ ಸಾಹಿತ್ಯ-
ದಿಂಪನುರೆ ತೋರುತೆ ನೀತಿಯನು-
ಕಂಪಮಂ ಪುಟ್ಟಿಸುತೆ ನರರಂ ಸುರರನಾಗಿಪವು || ೧೨ ||

ಇಂತೆಸೆವ ಕರಿನಾಡ ತೆಂಕಣ-
ಕಂತರಿಸದೊಪ್ಪುವದು ಕಣ್ಮನ-
ಕಂತವಿಲ್ಲದ ತೃಪ್ತಿಯಂ ನೀಡುತ್ತೆ ಸವಣೂರು |
ಸಂತಸದ ಸೊಬಗಿಗೆ ಕಾರಣಂ
ಸಂತತಂ ದುಡಿಯುವ ಕೃಷಿಕರ ನಿ-
ತಾಂತಕಲಿತಸ್ರಮುವ ಬಣ್ಣಿಪೆನದನೆ ತಿಳಿದನಿತು || ೧೩ ||

ನರರು ಬ್ರಾಹ್ಮೀಸನ್ಮುಹೂರ್ತದೆ
ಹರನ ನೆನೆಯುತಲೇಳ್ದು ನಮಿಸುತೆ
ಪಿರಿಯರಂ ಗುರುವಂ ಭಕ್ತಿಯಿಂ ಗೋಗಳ ಮೇಯಿಸಿ |
ನೆರೆಗೋಷ್ಠಮಂ ಸ್ವಚ್ಛಗೊಳಿಸುತ-
ಲುರೆಗೊಬ್ಬರವ ಬಲಿಸಿ ಸ್ನಾನವ
ಭರದೆ ತೀರ್ಚುತೆ ದೇವರಯಜಿಸಿ ಗೆಯ್ವರುಜ್ಜುಗವ || ೧೪ ||

ಪಾದರವೆಂಬ ಶಬ್ದಂಸುಮದೆ
ವಾದದೋಳ್ ಕಳವೆಂಬ ಶಬ್ದಂ
ವೇದಿಸಲ್ ಪುಸಿಯೆಂಬ ಶಬ್ದಂ ಮನೆಯೊಳಬೀದಿಯೋಳ್ |
ಶೋಧಿಸಲ್ ಪೊಡೆಯಿದು ಬೆಳಸಿನೋಳ್
ಶೋಧಿಪೊಡೆ ಕಡಿಯಿದೊಡಲನಿರಿಯೋಳ್
ಶೋಧಿಸಲ್ಕೀ ನಾಡಜನತೆಯೊಳಿರಲಿಲ್ಲಮರಿಯೆ || ೧೫ ||

ಜನತೆಯುರು ನೈತಿಕಸುಧಾರ್ಮಿಕ
ಘನವೃತ್ತಿಗೆ ಮಹಾದೇವನೊಲೆ-
ದನವರತಮುಂ ಕಾಲಕಾಲದೆ ವೃಷ್ಟಿಯನೀಯುವ |
ಆನಘಪರಿಣಾಮದೆ ನಿಷ್ಠೆಯಿಂ
ಮನವಿಟ್ಟು ದುಡಿಯುವ ಪರಿಣತೆಯಿ-
ನನಿಶಂ ಸಾಕನಿತು ಫಲಗಳ ಭೂಮಿಗಳೀವವು || ೧೬ ||

ಪ್ರತಿಯೊಂದು ಪೊಲದೋಳ್‌ಬೆಳೆದು ನಿಂ-
ದತಿಶಯುಂ ಬಗೆಗೊಳುವಧಾನ್ಯದ
ಮಿತಿಯಿರದಬೆಳೆಯಂ ಕಂಡು ಪಾಂಥಸ್ಥರನುನಯದೆ |
ಹಿತದಿಂದೆ ಪೊಲದೊಡೆಯನನೊಲಿಸಿ
ಮತಿವೆಚ್ಚಿಕೃಷಿ ಪದ್ಧತಿಯ ತಿಳಿ-
ಯುತೆ ತೆರಳುತಿರ್ದರ್ ತಮ್ಮತಮ್ಮೂರ್ಗೆ ಸಂತಸದೆ || ೧೭ ||

ಬಾಳಿ ಕಿತ್ತಳಿ ನಾರಂಗಿ ಮಾ–
ದಾಳಿ ಮೊದಲಹ ಫಲಂಗಳಂ ಪಿಡಿ–
ದೇಳಗೆಯು ನಿಮಗಹುದು ತಿನ್ನಿರಿ ಬನ್ನಿರೆಂದು ಸಲೆ ।
ಮೇಳಯಿಸಿ ಕೈಸನ್ನೆಯಿಂದಲೆ
ಬೋಳೈಸೆ ಕರೆಯುವವೆಂಬಂತೆ
ನೀಳವಹ ತರುಲತೆಯ ಶಾಖೆಗಳಲೆವವು ಪವನದೆ || ೧೮ ||

ಭ್ರಮರಂಗಳೆಮ್ಮಯ ಪರಿಮಳವ
ಭ್ರಮಿಸುತ್ತೈದುತಲೊಯ್ದು ತುಪ್ಪವ
ಕ್ರಮದಿಂದೆ ಗೆಯ್ಯುತ್ತೆ ಸಂತರಿಗೀಯುವವು ಸತತಂ ।
ನಮಿಸುತ್ತಲೀ ವಿಷಯವ ಜನಕೆ
ಸುಮಲತೆಗಳೊರೆಯುವವೊಯನವವೊ–
ಲಮಿತ ಕುಸುಮಗಳಿಡಿದು ಬಾಗಿರೆ ತೋರ್ಪವಾಬನದೆ || ೧೯ ||

ಇಂತೆಸೆವ ಪೂಲತೋಟಂಗಳಂ
ಕಾಂತೆಯರ್ ಕಾಯುತ್ತಿರ್ಪರತಿ
ಶಾಂತೆಯರ್‌ಕೈಚಪ್ಪಾಳೆಯಂ ತಟ್ಟೆ ಹ್ಯಾ ಯೆಂದು ।
ನಿಂತು ಬೆದರಿಸುವವರ ಧ್ವನಿಯನಿ–
ತಾಂತಮೆನೆ ಪಕ್ಷಿಗಳಾಲಿಸುತೆ
ಸ್ವಾಂತದಿಂದಾಹಾರವ ಮರೆದು ಬಳಸಿನಿಂದಿಹವು || ೨೦ ||

ಸವಣೂರ ವಾಯುವ್ಯ ದಿಶೆಯೊಳ್
ಪವಣಿಂ ಚಿಕ್ಕದಾದಡುಮೂರು
ತವೆ ನೀತಿ ಧರ್ಮ ಸುತತ್ವದಿಂದೊಡ್ಡಿತಾಗಿಹುದು ।
ಸವಿಪೆಸರ್ಮಾದಾಪುರವೆಂಬು–
ದವಿರತಂ ಮೆರೆಯುತ್ತಿಹುದಿದಕೆ
ಸುವಿನೀತರಿಲ್ಲಿಹರು ಸರ್ವಮತೀಯರೈಕ್ಯದೊಳೆ || ೨೧ ||

ತುಂಗವಿಹಿತರ್ ಭಂಗರಹಿತರ್
ಸಂಗಮಹಿತರ್ ಮಂಗಲಯುತರ್
ಜಂಗಮಹಿತರ್ ಲಿಂಗಸಹಿತರ್ ಬಹುಸಂಖ್ಯಾಕರು |
ಅಂಗಜರಿತರ್ ಸ್ವಾಂಗಲಲಿತರ್
ರಂಗಕಲಿತರ್ ಸಂಗಮಗತರ್
ಕಂಗೊಳಿಸುವರ್ ಸಿಂಗರದವರ್ ಮಿತಸಂಖ್ಯಾಕರು ‖ ೨೨ ‖

ಬಹಳ ಮನೆಗಳ್ ಲಿಂಗವಂತರ-
ವಹವೀ ಗ್ರಾಮದೊಳಗವುಗಳಿಗೆ
ಮಹಿತ ಗುರುವಾಗಿರುತಿಹಂ ಶಿವಾಖ್ಯಂ ಬೃಹನ್ಮಠದೆ |
ಸಹಜವೇನೆ ಸರ್ವಮತೀಯರೊಲೆ-
ದಿಹದ ಶಿವನೆಂದಿವನ ಭಾವಿಸು-
ತಿಹರದಲ್ಲದಲವನ ಬಳಗವನಂತೆ ಭಾವಿಪರು ‖ ೨೩ ‖

ಪಟ್ಟಚರಮೂರ್ತಿಯಧಿಕಾರಂ
ದಿಟ್ಟಗೌಡಿಕೆಗಳಧಿಕಾರಂ
ತಟ್ಟನೇಶಿವಾರ್ಯನ ವಂಶಕ್ಕೆ ಸೇರಿಹುದು ಮೊದಲಿಂ |
ಮುಟ್ಟಿದೀ ಸರ್ವಾಧಿಕಾರದ
ಕಟ್ಟಿರುವ ವತನದ ಭೂಮಿಯಂ
ಬಿಟ್ಟಿರದೆ ಪಾಲ್ಗೊಂಡು ಭಾಗಾದಿಗಳು ಭೋಗಿಪರು ‖ ೨೪ ‖

ಇಲ್ಲಿಗೆ ಸನಿಹದಲ್ಲಿಹ ಊರು
ಸಲ್ಲಲಿತಕಾರಡಿಗಿಯೆಂಬುದು-
ಮಿಲ್ಲಿಯು ವೀರಭದ್ರನೆಂಬುವ ದೇವರಿರುತಿಹುದು |
ಸೊಲ್ಲಸಿತ ಎಶಮಿರ್ಪುದಿದಕ್ಕೆ
ಬಲ್ಲವರಾದ ಭಕ್ತರನೇಕ-
ರೆಲ್ಲಡೆಯೊಳಹರೀ ಸೇವೆಯೊಳ್ವಿಪುಲರಾಗಿಹರು ‖ ೨೫ ‖

ಈ ಮಹಾದೇವಾಲಯಕ್ಕಿಹ
ನೇಮದ ಪಂಚ ಪರಿಷತ್ತಿನೊಳ-
ಗಾ ಮಹಿತ ಮೂಡಾಪುರ ಬೃಹನ್ಮಠದವರಧಿಪರು |
ರಾಮಣೀಯಕಮಾದಿವರನು-
ಜ್ಞಾ ಮಹೌಜಮನವಲಂಬಿಸಿಯೆ
ಕಾಮಿತದ ಕಾರ್ಯಗಳಲ್ಲಿ ನಡೆಯುತ್ತಿಹವು ಸತತಂ || ೨೬ ||

ಇವರಿಂದಲೀ ಮೂಡಾಪುರದ
ತವೆಜಸಂ ಪೊರ್ಬಿದುದದಲ್ಲದೆ
ಸುವಿನೀತನಾದಾ ಶಿವಾರ್ಯನ ಸೌಶೀಲ್ಯದಿಂದೆ |
ಭುವನದೋಳ್ ತದ್ವಂಶಕೀರ್ತಿಯು
ಸ್ತವನೀಯ ಮಾಗೆಸೆದಿತ್ತರಿಯ-
ಲಿವನಮಿತ ಸುಗುಣಂಗಳೊಳ್ ಕೆಲವಂ ಪೇಳ್ವೆನಿಲ್ಲಿ || ೨೭ ||

ಅಚ್ಚಳಿಯದಿಹ ಶಾಂತಿಯೆಂದುಂ
ಬಿಚ್ಚದಿಹ ನಿಜದಾಂತಿಯೆಂದುಂ
ನಿಚ್ಚವಗಲದ ಸತ್ಯಮೆಂದುಂ ಮೆಚ್ಚತಿಹಕೃತ್ಯಂ |
ಸಚ್ಚರಿತಕರ ಕಾಮಮೆಂದುಂ
ರೊಚ್ಚಿಗೆಳಸದ ಪ್ರೇಮಮೆಂದುಂ
ನಚ್ಚುಗೆಡಿಸದ ಸ್ನೇಹಮೀ ಸುಗುಣಂಗಳಿಹವವನೊಳ್ || ೨೮ ||

ಮೆರೆವೇಕ ಪತ್ನೀವ್ರತಂಗುರೆ
ನೆರೆತ್ಯಕ್ತ ಪರವಿತ್ತಂಗೆ ಕರೆ-
ದರಿದು ಪಾತ್ರಕೆ ಕೊಡುವಂಗೆ ಮೆರೆಯುವ ಸುಶೀಲಂಗೆ |
ಪರಮ ಸದ್ಗುಣವಿತ್ತಂಗೆ ದೊರೆ-
ದಿರುವನಿತರಿಂ ತೃಪ್ತಂಗೆ ಜರೆ
ದರನೆ ಪ್ರೀತಿಸುವಂಗಿಹಳು ಸತಿಯೂ ಶಿವಾರ್ಯಂಗೆ || ೨೯ ||

ಪಾರ್ವತೀ ನಾಮಕಳ್ ಸಾಧ್ವಿಯು
ಸರ್ವ ಸದ್ಗುಣವತಿಯು ಚಲ್ವೆಯು
ಶರ್ವ ಪತ್ನಿಯ ತೆರದೊಳಿರ್ದಳ್ ತತ್ಪತಿವ್ರತೆಯು ।
ಪೂರ್ವಶರಣರವೋಲ್ ಭಕ್ತಿಯನ-
ಪೂರ್ವಮಾಗಿಯೆ ಗೆಯ್ಯುತಿರ್ದಳ-
ದೋರ್ವರಿಂದಲುಮಪವಾದವಂ ಪಡೆಯಲಿಲ್ಲಿವಳು ॥ ೩೦ ॥

ಆ ಶಿವಾರ್ಯನ ಪತ್ನಿಯನಘೆ ನಿ-
ರಾಶೆಯಿಂ ಪಿರಿಯರ ಸೇವಿಸಿ ದು-
ರಾಶೆಯಂ ತೊರೆಯುತ್ತೆ ಪತಿಹಿತೆಯಾಗಿಬಾಳಿದಳು ।
ಈಶನೆಂದರಿದವಳತಿಥಿಗಳ
ಪಾಶಹರ ನಿಜಗುರುವನೊಲಿಪಳ್
ಲೇಶಮಾದಡುಮುರುಚರಗೆ ವಂಚಿಸಲಿಲ್ಲಮವಳು ॥ ೩೧ ॥

ಸಮಸುಚಿತ್ತರ್ ಸಮಸುಮತಿಯರ್
ಸಮಸುರೂಪರ್ ಸಮಸುಕಲೆಯರ್
ಸಮಸುಕಾಯರ್ ಸಮಶುಭಗುಣರ್ ಸಮಶೀಲರವರು ।
ಸಮಸುಧರ್ಮರ್ ಸಮಸುವಿಧಿಯರ್
ಸಮಸುನಿಯಮರ್ ಸಮಸುಖಾತ್ಮರ್
ಸಮರೆನಿಸುತಂ ಸರ್ವವಿಧದಿಂ ದಂಪತಿಗಳಿಹರು ॥ ೩೨ ॥

ಆ ಸತಿಯು ಪತಿಗೊರೆದಳೆಂತೆನೆ
ಭಾಸುರಾಚಾರವ ಭಕ್ತರಿಗೆ
ಲೇಸೆನಲ್ ಕಲಿಸುವೊಡೆ ಭಿಕ್ಷೆಗೆ ಪೋಪುದತಿಯೋಗ್ಯಂ ।
ಮೀಸಲಹ ಕರ್ತವ್ಯಮೆಮಗದು
ಮೋಸಗೈದಂತಿಹುದು ತಪ್ಪಲು
ಸೋಸಿನೋಡಿರೆನಲ್ಮೆಚ್ಚಿದಂ ಪತ್ನಿಯ ವಚನಕೆ ॥ ೩೩ ॥

ಒರೆದನೀ ಮಾತಂ ಕೇಳಿಯುವ
ನರಿಯೆ ಸತ್ಯಂ ತವ ವಚನವಿದು
ನಿರಘೆ ನಿನ್ನಿಂದಹುದೀ ಕಾರ್ಯಮಖಿಲ ಮಹಿಳೆಯರು |
ಪರಮಾಚಾರವತಿಯರಾದೊಡ-
ವರ ಶಿಕ್ಷಣದೆ ಸಹಜಮೆನೆ ಸುಪ-
ಥರೆನಿಪರ್ ಮಕ್ಕಳುಮವರಿಂದೆ ನಾಡಿನೇಳಿಗೆಯು || ೩೪ ||

ಸಮ್ಮತಿಸಿ ಪತಿಯಾಜ್ಞೆಯಂತವ-
ಳೊಮ್ಮನದೆ ಗೃಹಕೃತಿಯ ಮುಗಿಸುತೆ
ಸಮ್ಮತಿಯೊಳಖಿಲ ಸ್ತ್ರೀಯರಂ ಮೆರೆಯಿಸುತೆ ಮನೆಯೊಳ್ |
ಒಮ್ಮೆ ಬೋಧಿಸುತಿಹಳು ನೀತಿಯ-
ನೆಮ್ಮೆ ತಾನೊರೆದಂತೆ ನಡೆಯುತ-
ಲುಮ್ಮಳಿಸದಿರ್ದಳ್ ದುಃಖದೆ ಸುಖದೆ ಹಿಗ್ಗದಿಹಳು || ೩೫ ||

ತನ್ನಧಿಕಾರ ಬಲದೆ ಲಿಂಗವ
ಸನ್ನುತಂ ತಾನಗಲಗೊಡದಲೆ
ನನ್ನೆಯಿಂದಾಚಾರವ ಶಿವಾರ್ಯಂ ಕಲಿಸುತಿಹನು |
ಸನ್ನಿಹಿತವಾಗಿಸಿಕೊಳ್ಳುವರ್
ಮನ್ನಣೆಯೊಳಲ್ಲಿಯ ಜನರದಂ
ಚೆನ್ನಮೆನಲಾತನ ನಡೆಯ ಪರಿಕಿಸುತಲರಿಯುತ್ತೆ || ೩೬ ||

ಇಂತು ಧರ್ಮದೊಳಿರುತಿರಲ್ ತತ್
ಕಾಂತೆ ಪಾರ್ವತಿಯಾಗ ಗರ್ಭವ
ಸ್ವಾಂತರಂಗಮ್ಮುದಿಸುತಿರೆ ತಳೆದಳ್ಪತಿವ್ರತೆಯು |
ಚಿಂತಿಪ ಶಿವಾರ್ಯಂಗತಿಶಯದೆ
ಸಂತಸಮನೀಯುತ್ತೆ ಬೆಳೆಯುವ
ಕಾಂತವಹ ಗರ್ಭವಕಂಡು ಜನರಾಹ್ಲಾದಿಸಿದರು || ೩೭ ||

ಶಶಿಯು ನಿರ್ಮಲ ಮಂಡಲದವೋಲ್
ಹಸಿತವದನಂ ಶೋಭಿಸುತ್ತಿರೆ
ಸಸಿನದಿಂ ತನುಬಿಳುಪಾಗೆ ಮೊಲೆದುದಿಯು ಕರ್ಪಾಗೆ |
ಹಸನಾದ ತ್ರಿವಳಿಗಳಡಂಗಲ್
ಪೊಸತಾದ ಚಂದ್ರಿಕೆಯಂದದಿಂ
ವಸುಧಿಯೊಳಗೊಪ್ಪಿದಳಾ ಗರ್ಭಿಣಿಯು ಮಂಗಲತೆಯೋಳ್ || ೩೮ ||

ನಡೆನುಡಿಗಳೋಳ್ ಮಂದ್ಯವೊದಗಿತು
ಕಡುವಡಲಿನೋಳ್ ಕೃಶತೆಯೊದಗಿತು
ಬಡನಡುವಿನೋಳ್ ಸ್ಥೂಲತೆಯ್ಯೆದಿತ್ತಾಗ ದಿನದಿನಕೆ |
ಯುಡುಗಿದುದರದೆ ಗರಿಮೆಯೊಂದಿತು
ನಿಡುಮನದೊಳಲಸತೆಯು ಪೊಂದಿತು
ಸಡಗರದೊಳಾ ಗರ್ಭಿಣಿಯೊಳಿವು ಸೊಗಯಿಸಿದವಂದು || ೩೯ ||

ಎಂಟನೆಯ ತಿಂಗಳದೆ ಶಿವಾರ‍್ಯ-
ನಂಟಿಸಿಕೊಳದಲಾ ಮರವೆಯಂ
ಕಂಟಕವ ಕಳೆಯುವ ಲಿಂಗಮಂ ಗುರುವರನಿಂದಲೆ |
ಬಂಟನೊಲವಿಂ ಕಟ್ಟಿಸುತೆ ಬಸಿ-
ರುಂಟೆನಿಪ ಸತಿಯಾಯಾಸಮಂ
ಕಂಟಕಿತಹರ ಶಿವತತ್ವಮಂಬೋಧಿಸಿ ಕಳೆದನು || ೪೦ ||

ಲಿಂಗಧಾರಣದಿಂದೆ ಗರ್ಭಸು-
ತಾಂಗದೋಳ್ ಶಿವಕಲೆಯು ಸ್ಫುಟಮಾ-
ಗಿಂಗಿತಜ್ಞರಿಗರಿವವೋಲ್ ಬೆಳಗಿಹುದು ತತ್ಪ್ರಭೆಯು |
ತುಂಗಶರಣೆಯ ತನುಶುಭ್ರತೆಯ
ಮಂಗಲದಶಿಶು ತೇಜಮೆಂದರಿ-
ದಂಗವಿಪ ತತ್ಕುಚಚೂಚುಕದ ಕರ್ಪನೀಕ್ಷಿಸುತೆ || ೪೧ ||

ತರುಣಿಯ ತವೋಗುಣವೆಂದಾಗ-
ಳರಿಯುತಾ ಸುಜನರ್ಸ್ವಭಕ್ತಿಯ
ನುರೆತಳೆದರಾ ಗರ್ಭದರ್ಶನದಿಂದೆ ತತ್ ಕ್ಷಣದೆ |
ಸರಸವೆನೆ ಸಾಧ್ವಿಯಕಾಣುತ್ತೆ
ಶರಣೆಯಿವಳೆಂದರಿದು ಕುಜನರ್
ಹರನಗಣವರ್ಯನ ಮಾತೆಯಹಳೆಂದು ನಮಿಸಿದರು || ೪೨ ||

ಶಿವಶರಣೆ ಪಾರ್ವತಿಗೆ ಬಯಕೆಗ-
ಳವನಿಯಂಗನೆಯರ ಬೆರೆಗುವಡೆ-
ಯುವ ತೆರದೊಳ್ಳೈದಿದವು ಸುತಯೋಗ್ಯತೆಯ ತಿಳಿಸಲ್ಕೆ |
ಆವುಗಳಂ ತಾನಾದರದಿಂದೆ
ತವೆ ಸರ್ವಜನರಹುದೆಂಬಂತೆ
ಶಿವಭಕ್ತಿಬಲದಿಂ ಪೂರೈಸಿದಂ ಪೇಳ್ವೆನದನೆ || ೪೩ ||

ಗುರು ಲಿಂಗ ಚರ ಪೂಜೆಯ ಬಯಕೆ
ವರ ತೀರ್ಥ ಪ್ರಸಾದದ ಬಯಕೆ
ಹರಭಕ್ತರಂ ಸತ್ಕರಿಪ ಬಯಕೆಯು ಮಹಾಸತಿಯೊಳ್ |
ಹರಕೀರ್ತನ ಪುರಾಣದ ಬಯಕೆ
ಶರಣರಂ ಸಲೆ ಸೇವಿಪ ಬಯಕೆ
ಪರಶಿವಾನುಭವದುರೆ ಬಯಕೆಯು ತೋಱಿದವಿವುಗಳು || ೪೪ ||

ಪರದೈವಗಳ ಬಯಕೆಯಿಲ್ಲಂ
ಪರವಸ್ತುಗಳ ಬಯಕೆಯಿಲ್ಲಂ
ಪರವಿಹಿಂಸೆಯ ಬಯಕೆಯಿಲ್ಲಂ ತನ್ಮಹಾಸತಿಯೊಳ್ |
ಪರಸಂಗತಿಯ ಬಯಕೆಯಿಲ್ಲಂ
ಪರವಿಷಯಗಳ ಬಯಕೆಯಿಲ್ಲಂ
ಪರತಾಮಸಾಹಾರದ ಬಯಕೆಯಿಲ್ಲವೆಂದೆಂದುಂ || ೪೫ ||

ಬಸುರಿಯಃರಾದ ಕೆಲವು ನಾರಿಯ
ರಸುರಹಿತ ನಾಟಕವನಾಟವ-
ನಸಮುರಾಗದೆ ನೋಡಿ ನಟಿಸುತಲಂತೆ ಗೆಳತಿಯರೋಳ್ |
ಕಸುವು ಕೆಡಿಪಾಹಾರಗಳನುಣು-
ತಸವಸದೆ ಮಕ್ಕಳ ಪೆತ್ತೊಡವು
ವಸುಧೆಯೋಳ್ ದುರ್ವ್ಯಸನಕೀಡಹರಿವಳಿದನರಿದಳು || ೪೬ ||

ಈ ಪರಿಯೊಳುರೆ ಸಂತಸದೆ ತ-
ನ್ನೋಪನಿಂ ಬಯಕೆಗಳನೆಲ್ಲವ
ಪಾಪರಹಿತಳ್ ಪೂರ್ಣಮಾಗಿಸಿಕೊಂಡು ಶಿವಕೃಪೆಯೋಳ್ |
ತಾಪವ ಕಳೆದು ಕೊಳುತುರೆ ಶರಣೆ-
ಯ್ಯಾಪವಿತ್ರತೆಯಾಂತ ಗರ್ಭಕೆ
ಲೋಪವಿಲ್ಲದೆ ನವಮಾಸಂಗಳಾಗ ಪೂರೈಸೆ || ೪೭ ||

ಕಂಡಳೊಂದು ದಿನದೆ ಕನಸಿನೋಳ್
ಕೆಂಡಗಣ್ಣೈ ಮೊಗವಡಗಿರ್ಪ
ಪುಂಡರೀಕಾನನದ ಚರನೋರ್ವನ ಶಿವಶರಣೆಯು |
ಕಂಡುವಂದಿಸಿ ನಿಲ್ಲಲಾಗಳ್
ಪಂಡಿತ ಜಂಗಮಂ ನುಡಿದನೌ
ಖಂಡಿತ ಪ್ರಮಥನವತರಿಸುತಿಹನವನೆಮ್ಮವನಹಂ || ೪೮ ||

ನಿನಗೆ ಮತ್ತೋರ್ವ ಸುತನುದಿಸುವ-
ನನಘೆ ಚಿಂತಿಸಬೇಡೆಂದೊರೆಯು-
ತನುಪಮಂ ಜಂಗಮನಡಂಗಲದೇ ಕ್ಷಣದೆ ಸುತನ |
ಘನ ಸುಂದರನನತಿಮುದದಿಂದೆ
ವಿನುತನಂ ಬ್ರಾಹ್ಮೀಮುಹೂರ್ತದೆ
ಜನರಚ್ಚರಿಸೆ ಪಡೆದಳೀ ಪಾರ್ವತಿಯು ಗುಹಸಮನಂ || ೪೯ ||

ಕ್ಷೀರ ನಿಧಿಯೊಳ್ ಪುಟ್ಟಿದಿಂದುವು
ಭೂರಿ ಜಲಧಿಯೊಳೊಗೆದ ರತ್ನಂ
ವಾರಿಯೊಳುದಿತಮಾದಕಮಲಂ ಶುಕ್ತಿಜಮೌಕ್ತಿಕಂ |
ಸಾರ ಸುರಭಿಯೊಳುದಿಸಿದ ಸುಧೆಯು-
ಪಾರ ಧರೆಯೊಳ್ ಜನಿಸಿದ ಮಿಸುನಿ
ಮೀರಿದಿವಳೊಡಲಿಂದೆಸೆವ ಬಾಲಕಂಗಿವು ಸಮವೆ || ೫೦ ||

ಎಂದು ಬಣ್ಣಿಪ ನಾರಿಯರ ನುಡಿ-
ಯಂದಮಂ ಕೇಳುತ್ತೆ ಮಾತೆಯು-
ಮಂದ ಮುದದಿಂದೆನ್ನ ಭಾಗ್ಯಮಿದೆನುತಲಾ ಶರಣೆ |
ಕಂದುಗೊರಲನ ರೂಪನಿಪನೆನು-
ತಂದೆಸೆದ ಸ್ವಪ್ನದ ವೃತ್ತಮಂ
ಸುಂದರಕಾಂತಗೊರೆದಳ್ ಕರೆಯಿಸುತೆ ತೋರಿ ಸುತನ || ೫೧ ||

ಮಗುವಿನ ಮುಖವ ವಿಧಿಯಿಂ ನೋಡಿ
ಸೊಗದಿಂದೆ ಮಾಹೇಶ್ವರರ ಕರೆ-
ದಗಣಿತರ ತಣಿಸುತ್ತೆವಸನಾನ್ನಾದಿಕ ದಾನದಿಂ |
ಸೊಗಯಿಸುವ ಲಿಂಗವನಾಶಿಸುವಿ-
ಗಗಲಗೊಡದಂತೊರೆದು ಪತ್ನಿಗೆ
ಮಿಗೆ ಗುರುವರನ ಕರೆಯಿಸಿ ಸಂಸ್ಕೃತಿಯನೆಸಗಿಸಿದನು || ೫೨ ||

ಉರು ಮುಹೂರ್ತಂ ಘಟಿಸೆ ಶಿವಾರ್ಚ-
ನುರೆ ಮುತ್ತೈದೆಯರ ಕರೆಯಿಸುತೆ
ಗುರುವಿನಪ್ಪಣೆಯಂತೆಯೆ ಶಂಭುಲಿಂಗ ನಾಮವನು |
ಸರಸದಿಂದೀ ಪರಿ ಜೋಗುಳವ
ನೆರೆ ಪಾಡಿಸುತಲಿಡಿಸಿದಂ ಶಿವ-
ಶರಣರ್ಕೆಳೆ ಸಮ್ಮತಿಸೆ ವಾದ್ಯಂಗಳ್ಘೋಷಿಸೆ || ೫೩ ||

ಕಂದ ಜೋ ಜಿತಬಂಧಜೋ ಸ್ವಾ-
ನಂದ ಜೋ ಸತ್ಸಂಧ ಜೋ ಸ್ವ-
ಚ್ಛಂದ ಜೋ ಚಿತ್ಸಿಂಧ ಜೋ ಷಟ್‌ಸ್ಥಲಸಿಂಧು ಜೋಜೋ |
ನಂದ ಜೋ ಸುಸ್ಕಂಧಜೋ ವಿದ-
ಮಂದ ಜೋ ಸದ್ಗಂಧಜೋ ಅರ-
ವಿಂದ ಜೋ ತುಷ್ಟಾಂಧಜೋ ಶಂಭುಲಿಂಗನೆ ಜೋಜೋ || ೫೪ ||

ಈ ಪರಿಯ ಜೋಗುಳವ ಪಾಡುತೆ
ದೀಪಿಪ ಶಂಭುಲಿಂಗ ನಾಮವ
ಲೋಪವಿಲ್ಲದಲಿಟ್ಟು ಕಾಂತೆಯರೈದಿ ಸತ್ಕೃತಿಯ |
ಆ ಪವಿತ್ರ ಸತೀಪತಿಗಳ ನಿ-
ರೂಪಮಂ ಪಡೆದೈದೆಯರ್ ಶಿವ
ರೂಪಿ ಶಿಸುವಂ ಬಣ್ಣಿಸುತ್ತೈದಿದರ್ ತಮ್ಮ ಗೃಹಕೆ || ೫೫ ||

ಗದುಗಿನೋಳ್ ಪಂಚಾಕ್ಷರನಗರ
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರಗುರುವಿ-
ನುದಿತ ಯೋಗಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳಗೆರಡನೆಯ ಸಂಧಿಯಿದು || ೫೬ ||

ಅಂತು ಸಂಧಿ ಎರಡಕ್ಕಂ ಪದಗಳು ಎಂಭತ್ತಕ್ಕಂ

ಮಂಗಲಂ



# ಮೂರನೆಯ ಸಂಧಿಯು

ವಿದ್ಯೆಯಂ ಕಲಿತಂ ಸರ್ವರನೆ
ವದ್ಯಚರಿತವ ಕಂಡು ಮುದದೊಳ
ನಾದ್ಯನಂತನ ರೂಪನಿವನಹುದೆಂದು ಬಣ್ಣಿಸಲು ॥ ಪಲ್ಲ ॥

ಜಗವೆ ರಂಗಂ ಪಾತ್ರಧಾರಿಯು
ಬಗೆಯಲಾನೆಯನಂತವಹ ಜ-
ನ್ಮಗಳೆನಿಪ್ಪರು ಪಾತ್ರಂಗಳಂ ಧರಿಸುತಭಿನಯಿಸಿ ।
ವಿ:ಗೆ ನಿನ್ನ ಸಂತೋಷಕಾಗಿಯೆ
ಬಗೆಬಗೆಯೊಳಾಂ ಯತ್ನಿಸುತಿರುವೆ
ನೊಗುಮಿಗೆಯೊಳೀಯಭವ ಮೋಕ್ಷದ ಪಾರಿತೋಷಕವ ॥ ೧ ॥

ಸೂತಿಕಾಗ್ರಹ ದೀಪಂಗಳವ
ದಾತ ಶಿಶುವಿನ ತೇಜಕಗೀಯು-
ತ್ತೋತು ನಿಸ್ತೇಜಂಗಳಾದವೊಯೆನೆ ಮಂದಮಾಗೆ |
ಆತಮಂ ದೀವಿಗೆಗಳ ತಳವ
ಭೀತಿಯಿಂದಾಶ್ರಯಿಸಿತೊ ಯೆನ-
ಲ್ರಾತುರಿಯ ಕಾಲದೆ ತೋರುತಿರ್ದತ್ತದೇನೊರೆವೇಂ || ೨ ||

ನಿನ್ನೊಳಗಿಲ್ಲ ಮಾಯೆಯಿದು ಮೇ-
ಣೆನ್ನೊಳಗಿಲ್ಲ ಮಾಯೆಯಿದು ಮೇ-
ಣಿನ್ನು ಜಗದೊಳಗೆಲ್ಲಿಂದ ಬರುತಿಹುದು ಮಾಯೆಯಿದು |
ಸನ್ನುತ ಶಿವನೆ ತವಶಕ್ತಿಯಿಂ-
ದುನ್ನತಮಿಲ್ಲವೀ ವಿಶ್ವದೋಳ್
ನನ್ನಿಯಿಂದಾ ಹರಗೊರೆವುದೆನೆ ಶಿಶು ಕಣ್ಮುಗಿವುದು || ೩ ||

ಶಿವನ ಶಕ್ತಿಯೊಳಿರ್ಪ ಮಾಯೆಯೆ
ತವೆ ಕಾಲ ಕರ್ಮಂಗಳ ಸೃಜಿಸಿ
ಕವಿವಂತೆಯೆಸಗಿಹುದು ಜಗಮಂ ತಿಳಿದಿದಂ ತಾನುಂ |
ಭುವನದೊಳಗಿಹ ತನ್ನ ಸನಿಹಕೆ
ಲವಲೇಶಮಾದಡುಮದುಸುಳಿಯೆ
ಜವದೊಳೊದೆವುದ ತೋರ್ಪಂತೆ ಕಾಲೊಗೆಯುವದಾ ಮಗು || ೪ ||

ಕಾಲ ಕರ್ಮಂಗಳ್ ತನ್ನ ಕ-
ಣ್ಣಾಲಿಯಿದಿರೋಳ್ ಸುಳಿದುದಾದಡೆ
ಮೇಲಯಿಸಿ ಗುದ್ದುವನೆಂಬಂತೆ ಕೈಮುಟಗಿಯೆಸಗಿ |
ಬಾಲನೊಸೆದಾಗಾಗಳೊಗೆಯಲ್
ಲೀಲೆಯಿಂದದನೀಕ್ಷಿಸಿದ ಜನ-
ರೋಲಯಿಸಿ ಭಾವಿಸುತೆ ಭಕ್ತಿಯ ಪರವಶರಾದರು || ೫ ||

ಶರ್ವಪುತ್ರ ಸಮಾನ ಸುತಂಗೆ
ಪಾರ್ವತೀ ದೇವಿಯು ಲಿಂಗವಂ
ಸರ್ವರಲೆಯುವ ತೆರದೆ ಸೂತ್ರವನಗಲಿಸದಿರ್ದಳು |
ಉರ್ವಿದಾನಂದದೊಳಂದು ಸಲೆ
ಯುರ್ವಿಯ ಜನರದೃಷ್ಟಿದೋಷವ
ಸರ್ವಕಾಲದೆ ತಪ್ಪಿಸಲ್ಕಂತದೆ ಬಂಧಿಸಿದಳು || ೬ ||

ತೈಲವಂ ಲೇಪಿಸುತೆ ನಯದಿಂ
ಬಾಲನಂಗವ ತಿಕ್ಕಿತೀಡುತೆ
ಶೀಲವತಿಯತ್ಯುಷ್ಣವಾಗದ ಜಲದಿಂದಲೆರೆದು |
ಲೋಲನೇಹದೊಳೊರಸಿ ವಸ್ತ್ರದೆ
ಮೂಲಮಂತ್ರದೆ ಭಸ್ಮವ ಧರಿಸಿ
ಲೀಲೆಯಿಂ ಕುಂಚಿಗೆಯ ಪೊದಿಸಿ ಮಲಂಗಿಸಿ ತೊಟ್ಟಿಲೊಳ್ || ೭ ||

ತೂಗುತಂ ಮೃದುವಾದ ಧ್ವನಿಯಿಂ
ಜೋಗುಳವ ಪಾಡುತಿರೆ ನಿದ್ರಿಪ
ರಾಗದಾಗರವಾದ ಮಗುವಂ ನಿರುಕಿಸುತೆ ಜವದೆ |
ಸಾಗಿಪಳ್ ಮನೆಗೆಲಸಗಳ ನೆನೆ-
ದಾಗಳೆಯೆಳ್ದು ರೋಧಿಸುತಿರ್ಪ
ಕೋಗಿಲೆಯ ದನಿಯಣುಗನನೆತ್ತಿ ಮುದ್ದಿಪಳ್ಮಾತೆ || ೮ ||

ಪೆಂಪ ಮುಕುರುದ ಗೆಲ್ದಗಲ್ಲದ
ಸಂಪುಗೆಯ ಗೆಲ್ದಿಹ ನಾಶಿಕದ
ಸೊಂಪಿನಿಂದೀ ವರವ ಗೆಲೆದ ವಿಲೋಚನದ ಸೊಗವ |
ಇಂಪನಬ್ಜದ ಜಯಿಸಿದಾಸ್ಯದ
ಕಂಪಿನ ಲತೆಯ ಜಯಿಸಿಪಂಗದ
ಲಂಪಿನ ಮಗುವನೆತ್ತಿ ಮುದ್ದಿಪನಾಶಿವಾರ್ಯನುರೆ || ೯ ||

ಎಲ್ಲರೀಕ್ಷಿಪರೆಲ್ಲರಿಚ್ಛಿಪ-
ರೆಲ್ಲರರಸುವರೆಲ್ಲರೊಲಿಸುವ-
ರೆಲ್ಲರೊಲೆಯುವರೆಲ್ಲರಲೆಯುವರೆಲ್ಲರೆತ್ತುವರು |
ಎಲ್ಲರಾಡಿಪರೆಲ್ಲರೀಡಿಪ-
ರೆಲ್ಲರೊಸೆಯಿಪರೆಲ್ಲರಿಸೆಯಿಪ-
ರೆಲ್ಲರಾಶಿಪರೆಲ್ಲರ್ಕೈಶಿಪರಾ ಸುತನ ಸೊಗದೆ || ೧೦ ||

ಹರನು ತನ್ನಯ ಬೆನ್ನ ಮೇಲೆಸ-
ದಿರುವವೋಲ್ ಕುಳ್ಳಿರಿಸಿಕೊಳ್ಳುತೆ
ಚರಿಸುವಾ ವೃಷಭೇಶ್ವರನ ಲೀಲೆಯ ತೋರ್ಪುದೆನಲು |
ಉರೆ ಶೋಭೆವೆತ್ತೆಸೆವುದಾ ಮಗು
ಕರಮಂಬಿಗಾಲೊಳ್ನಡೆವಾಗ-
ಳರಿದು ಸುಜನರ್ ಬಣ್ಣಿಸುತಿರ್ದ್ದರದನೀಕ್ಷಿಸುತಲೆ || ೧೧ ||

ನಿಬಗಲಿತನುರೆ ಗೋಡೆಯ ಪಿಡಿಯು-
ತಲೆಯಗಲಿತಂ ಪಿತೃಕರವಿಡಿದು
ಚಲಿಸುತಿರ್ದ್ದಂ ತಪ್ಪೆಜ್ಜೆಗಳನಿಡುತೆ ಬಾಲಕನು |
ಸಲೆ ಶಿವಕಲಾವಂತನಾದಡು-
ಮೊಲಿಸುತಿರ್ದ್ದಂ ಜನರ ಲೌಕಿಕ
ಕಲೆಯ ರೀತಿಯನವಲಂಬಿಸುತೆ ವರ್ಧಿಸುತಿರ್ದ್ದನು || ೧೨ ||

ಮೊಳೆವಲ್ಗಳುರೆ ಕಾಂತಿಯೆಸೆಯ-
ಲ್ತೊಳಗಲ್ ಮುಗುಳ್ನಗೆಯು ಬೆಳ್ದಿಂ-
ಗಳದಂತೆ ಚಂದಿರನ ಪಾಂಗಿಂ ಶೋಭಿಸಲ್ಮೊಗವು |
ಎಳೆಯುನ ತೊದಲ್ನುಡಿಯು ಹಬ್ಬದ
ಕಳೆಯನಾಂತಿರೆ ಕವಿಗಳ್ಗೆ ಸೊಗ-
ಮುಳಯುದುಳಿಯಿತು ಪಿತೃಗಳಾಪ್ತರ ಮನದ ಭೂಮಿಯೊಳೆ || ೧೩ ||

ಶಂಭುಲಿಂಗಾಹ್ವಯನ ಲೀಲೆಯು
ಕುಂಭಿನೀ ಜನಕಾಶ್ಚರ್ಯ ಮೆನೆ
ಸಂಭವಿಸುತಿರ್ದತ್ತದೆಂತೆನಲನ್ಯ ಬಾಲರಿಗೆ |
ಶಂಭುವಿನ ನುತಿಯಂ ಕಲಿಸುತಿ-
ರ್ದಂ, ಭವನದಂಗಳದೆ ಲಿಂಗವ
ಶುಂಭ ಬಾಲಕರಿಂ ನಿರ್ಮಿಸಿ ಪೂಜಿಸಕಲಿಸುವಂ || ೧೪ ||

ಗುಂಡು ಗಜಿಗವನಾಡಲಿಲ್ಲಂ
ಚಂಡು ಬೊಗರಿಯ ಬೇಡಲಿಲ್ಲಂ
ತಿಂಡಿ ತಿನಿಸಂ ತಿನಲಂಗಡಿಗೆ ಸುಳಿದಾಡಲಿಲ್ಲಂ |
ಪುಂಡಬಾಲರ ಕೂಡಲಿಲ್ಲಂ
ಕಂಡವರ ಮನೆಗೋಡಲಿಲ್ಲಂ
ಮುಂಡತನಮಂ ಪರರಣುಗರಂದದೆ ಮಾಡಲಿಲ್ಲಂ || ೧೫ ||

ತಾಯೆಯುರುಲಿಂಗಾರ್ಚನೆಯ ಕಂ-
ಡಾಯತ ಲಿಂಗವಂ ಪೂಜಿಪಂ
ಸ್ವೀಯ ಜನಕಂ ಕಲಿಸಿರ್ದ ಶಿವನುತಿ ಪದಂಗಳನೆ |
ಆಯಸವಿಲ್ಲದಲೆ ಗುರು ಚರಾ-
ರ್ಚಾಯತಿಯ ಕಾಲದೆ ಪಾಡುವಂ
ನ್ಯಾಯ ನೀತಿಯ ವಚನಮಂ ಕಲಿಯುತಿಹನತಿಮುದದೆ || ೧೬ ||

ತಂದೆತಾಯ್ಗಳ ಮೇಣ್ ಪಿರಿಯರಂ
ವಂದಿಪಂ ನಿಜದೈವ ಭಾವದಿ
ನಂದಮೆನೆ ಸದ್ಭಕ್ತಿಯಿಂ ಲಿಂಗವ ಪೂಜಿಸುವನು |
ಕುಂದದಲೆ ಗುರುಪಾದ ಪೂಜೆಯ
ಚಂದದಿಂ ಗೆಯ್ಯುತ್ತೆ ತೀರ್ಥವ
ಸುಂದರಂ ನಿತ್ಯದೆ ಸೇವಿಪಂ ಲಿಂಗಕರಿಸ್ಪತೆ || ೧೭ ||

ದೀನರನಂಗವಿಕಲರ ಡೇವ
ಮಾನದಿಂ ಗೌಸವಿಸುವಂ ಸು-
ಜ್ಞಾನಿಗಣದೊಡನಾಡುವನನಾಥರ ಪ್ರೀತಿಸುವನು |
ಸ್ನಾನವಂ ನಿತ್ಯದೆ ಮಾಳ್ಪಂತ-
ಧೀನ ಬಾಲರಿಗೊರೆಯುತಾಚಾ-
ರಾನುರಾಗವ ಪುಟ್ಟಿಸುವನಾ ಶಂಭುಲಿಂಗಾಖ್ಯಂ || ೧೮ ||

ಐದು ವರ್ಷಂಗಳ ತುಂಬುತಿರ-
ಲೈದೆ ನಿಜಗುರುವಂ ಕರೆತಂದು
ಮೋದದಿಂ ತಲ್ಲಿಂಗಾರ್ಚನೆಯ ಗೈಯ್ಯುತವರಿಂದೆ |
ಆದರದಿ ವಿದ್ಯಾಭ್ಯಾಸವ ವಿ-
ನೋದದಿಂ ಪ್ರಾರಂಭ ಗೆಯ್ಸಿದ-
ನಾದರಿಸಿ ಮಾಹೇಶ್ವರರ ತಣಿಸುತೆ ತಜ್ಜನಕನು || ೧೯ ||

ಸಚ್ಚಿದಾನಂದಾಖ್ಯಂ ಪಿತೃಗ-
ಳಿಚ್ಛೆಯಂತಾ ಶಂಭುಲಿಂಗನ
ಸಚ್ಚರಿತ್ರನ ಬಾಲಕನಕೊಂಡೈದಿದಂ ಮಠಕೆ |
ನಿಚ್ಚಮವಗೆ ಶಿವಾನುಭವಿಯು ತ-
ದುಚ್ಚತರ ಸುಗುಣಕ್ಕೆ ಗುರುವುರೆ
ಮೆಚ್ಚುತಂ ವಿದ್ಯೆಯ ಕಲಿಸಲಾದಂ ಶೃತಿಕೋವಿದಂ || ೨೦ ||

ಭಕ್ತಿಯಿಂ ಸೇವೆಯ ಮಾಡುತೆ ವಿ-
ರಕ್ತಿಯಂ ಬಲೆಯಿಸಿಕೊಳ್ಳುತೆ ಗು-
ರೂಕ್ತಿಯಂ ಮೀರದಲೆ ವಿದ್ಯೆಯ ಕಲಿಯಲಾಗಿಹನು |
ಸಕ್ತಿಯಿಂ ಕಲಿಸುತಿರ್ದನನು-
ರಕ್ತಿಯದೀರ್ವರೊಳ್ ಬೆಳೆಯುತಲೆ
ಯುಕ್ತಿಯಿಲ್ಲದೆ ಶ್ರದ್ಧೆ ಕೃಪೆಯೆಂಬಾಖ್ಯೆಯ ಪಡೆಯಿತು || ೨೧ ||

ಗುರುವಿನಿದಿರೋಳ್ ಕುಳ್ಳಿರಲಿಲ್ಲ
ಗುರುವಿನಿದಿರೋಳ್ ಮಲಗಲಿಲ್ಲಂ
ಗುರುವಿನಿದಿರೋಳ್ ನವ್ರುತಿಗೆಟ್ಟು ತಿರುಗಲಿಲ್ಲವನು ।
ಗುರುವಿನಿದಿರೋಳ್ ಮೇಲಿರಲಿಲ್ಲ
ಗುರುವಿನಿದಿರೋಳ್ ಗಳುಹಲಿಲ್ಲಂ
ಗುರುವಿನಿದಿರೋಳ್ ತೂಕಡಿಸಲಿಲ್ಲಾ ಕಳಿಸಲಿಲ್ಲಾ ॥ ೨೨ ॥

ಗುರುವಿನಪ್ಪಣೆಯಾಗುವನಿತರೊ-
ಳುರೆ ಮಠದ ಕಾರ್ಯಂಗಳೆಲ್ಲವ-
ನಂದೆಸಗುತಿರ್ದಂ ಶಂಭುಲಿಂಗಾರ್ಯನಕ್ಷ್ತಿಯೊಳೆ ।
ದೊರೆತ ಸಮಯದೆ ವಿದ್ಯೆಯ ಕಲಿತ-
ನರಿಯುತೆಲ್ಲರ್ ಬೆರಗುಗೊಂಡರ್
ಮೆರೆವವನ ಸಹಪಾಠಿಗಳ್ ಮತ್ತವನಿಂ ಕಲಿತರು ॥ ೨೩ ॥

ಈತನೆ ಪ್ರೇಮಮೂರ್ತಿಯಾಗಿಹ-
ನೀತನ ಕಂಡೊಡೆಲ್ಲರ ದ್ವೇಷ-
ಮೋತು ತೊಲಗುತ್ತಿರ್ಪತ್ತಖಿಲ ಜೀವರೊಳಾದಡುಂ ।
ಸಾತಿಶಯಮೆನಲೋಡುತಿರ್ದ-
ತ್ತೀತನಲ್ಲೀಯದ್ಭುತ ಶಕ್ತಿ
ಖ್ಯಾತಮೆನೆ ವರ್ಧಿಸುತಿರ್ದತ್ತಿದಕೊಂದು ಕಥೆಯು ॥ ೨೪ ॥

ಒರ್ಮೆ ಪತ್ತುರಿಯಂ ತರಲೆಂದು
ಕೂರ್ಮೆಯಿಂ ಸಹಪಾಠಿಗಳೊಡನೆ
ನೆರ್ಮೆ ಶಿವನಂ ಭಜಿಸುತೆ ಪೋದ ಸಮಯಕೆ ತೋಂಟದೆ ।
ಪೆರ್ಮೆಯಿಂ ಮುಂಗುಲಿಪಾವುಗಳ್
ದುರ್ಮದದೆ ಹೋರಾಡುತಿರ್ದವು
ಕರ್ಮಮಂ ತೊರೆದವು ತದ್ದರ್ಶನದೆ ಮುಟ್ಟಿಪದವ ॥ ೨೫ ॥

ನೋಡಿ ವಿಸ್ಮಯದಿಂದಲೆಲ್ಲರ್
ಪಾಡಿದರು ಸ್ತುತಿಸುತೆ ತದ್ಗುಣವ
ಮೂಡಿದಾನಂದದೊಳವರ್ಗೆ ಗುರುಲೀಲೆಯೆಂದೊರೆದು |
ಮಾಡುತಂ ಸದ್ಗುರು ಸನ್ನುತಿಯ
ಕೂಡಿ ಮಠಕ್ಕೈದಿದನವರೊಡನೆ
ನಾಡೆ ಪೇಳ್ದರ್ ಗುರುವಿಗೆ ಶಿಷ್ಯರವನಾ ಲೀಲೆಯ || ೨೬ ||

ಗುರುವವನ ಸಾಮಾನ್ಯನಲ್ಲೆಂ-
ದರಿದು ಸೇವೆಯ ಪೇಳದಲೆ ಸ-
ತ್ಕರಿಸುತಿರೆ ವಿದ್ಯೆಯು ಶ್ರಮವಿಲ್ಲದಲೆ ಪ್ರಾಪ್ತಮಾಯ್ತು |
ಗುರುವಿನ ಸುಪ್ರಸಾದಮೆಂದದ-
ನರಿಯುತಂ ಶುಶ್ರೂಷೆಯ ಗೆಯ್ಯು-
ತರಿವಿನೊಳಗಿರ್ದಂ ಶಂಭುಲಿಂಗಾರ್ಯನನುಪಮನು || ೨೭ ||

ಆಪ್ತಮಂಗಂ ಸ್ಥಾನಮದು ಮೇಣ್
ದೀಪ ಸದ್ಭಾವಂ ಚತುರ್ವಿಧ
ಗುಪ್ತ ಸೇವಗಳಿವನರಿದು ಮಾಡುತಲಿರ್ದನವನು |
ಸುಪ್ತಮಾದರುವಿನ ಚೇತನಂ
ದೀಪ್ತತೆಯನೈದಿತು ಗುರುವಿನುರೆ
ವ್ಯಾಪ್ತ ಸೇವೆಯ ಮಹಿಮೆಯಂ ಬಣ್ಣಿಸುವದಸದಳವು || ೨೮ ||

ಇವನ ಸೇವೆಗಚೇತನಂಗಳು-
ಮವನಿಯಲ್ಲಿ ಸಹಾಯಕಂಗಳ್
ತವೆಯೆನಿಸಿ ಬಾಳುತಲಿಹವೆನಲ್ ಸೇವಾಚರಣೆಯ |
ನವ ಪದ್ಧತಿಯಿಂದೆಂತುಟೊ ದೇವ-
ನಿಹಕಚ್ಚರಿಯೆನಿಸುವಂತಿಹು-
ದವಿರತಂ ನೆನಹಿನೊಳಗಿರುವಂ ತಾನೊರೆವೆನದನೆ || ೨೯ ||

ಒಂದು ದಿನಮೀತಂ ಕುಸುಮಗಳ-
ನಂದು ತಿರಿಯಲ್ಪೋಗಿ ತಲ್ಲತೆ-
ಗಂದಮೆನೆ ಜೋಳಿಗೆಯಂ ತೊಡಂಕಿಸಿ ಗುರು ನುತಿಯನೆ |
ಚಂದಮೆನೆ ಗೆಯ್ಯುತೆ ತದ್ವನದ
ಸುಂದರತೆಯಂ ನಿರುಕಿಸುತ್ತಂ
ನಿಂದಿಹನಾಗಳಾ ಸುಮಂಗಳಸ್ಸರಿಯುವವದರೊಳೆ || ೩೦ ||

ಇದನೀಕ್ಷಿಸಿದ ಜನರೀತನಂ
ಪದುಳ್ದು ನಮಿಸುತ್ತವರಿವನನತಿ
ಮುದದೆ ನುತಿಸುತ್ತಿಹರಾ ನುತಿಯಬಿಡಿಸಿ ಗುರುವರನ |
ಪದಪಿಂದೆ ನುತಿಪಂತೆ ಬೋಧಿಸಿ
ಸದಮಲಂ ಮತಕೈದಿದಂ ಶೃತಿ-
ವಿದನಾ ಗುರುವು ಜನರ ಮುಖದಿಂದರಿದು ಬೆರಗಾದಂ || ೩೧ ||

ಸ್ತುತಿಯಪೇಕ್ಷೆಯುದೆಲ್ಲರಿಗುಂಟು
ಮತಿಯುದೆಂತಿಹ.ದೀತನೋಳ್ ಗುಣ
ತತಿಗಿದೆ ಮುಖ್ಯಮೀತಂಗೆ ಸುಕೃತಾತಿಶಯದಿಂದೆ |
ಕ್ಷಿತಿ ಜನಕೆ ಸಾಧಿಪುದತಿ ವಿರಳ-
ಮತಿಶಯಿತಮೀ ಪಯದೆ ಘಟಿಸಿದು-
ದಿತಿಹಾಸದೊಳಿಕ್ಕಣದ ವಿಷಯಮೆಂದನಾ ಗುರುವು || ೩೨ ||

ಕರುಣಾಳುವಾಗಿರ್ದನಿವನುರೆ-
ಯೊರೆವೆಸಿದಕೊಂದುದಾಹರಣವ-
ನರಿಯಲೊಂದವಸರದೆ ಚೇಳೊಂದಿವನ ಕರ್ಚುತಿರೆ |
ಕರುಣೆಯಿಂ ಕಂಡಡುಮುದನಿವಂ
ನೆರೆ ಘಾತಿಸದೆ ಕೊಲ್ಲದಿರಿಯಂ-
ದೊರೆದನಲ್ಲಿಯ ಜನಕದೇಂ ಕರುಣಾಳುವೊ ಈತನು || ೩೩ ||

ಶಿವಶಿವನೆಂದು ನೋವುನಳಿಯುತೆ
ಶಿವನ ಪ್ರೇರಣೆಯಿಂದೆ ತುಳಿದೇಂ
ಶಿವನೆ ಶಿಕ್ಷೆಸುನೆನಗಿತ್ತಿಹಂ ಜೇಳ ಕೊಂದೊಡನೆ ।
ಶಿವನವ ಕೃಪೆಗೆ ಪಾತ್ರನಪ್ಪೇಂ
ಶಿವನಿಚ್ಛೆಯಿಂ ನಿಮಗೆ ಪೇಳ್ದೇಂ
ಶಿವನ ಲೀಲೆಯಿ:ದೆಂದಂ ಶಂಭು-ಲಿಂಗಾರ್ಯಂ ॥ ೩೪ ॥

ಹತ್ತು ವರ್ಷದ ಭಾಲಕರ್ಗೀ-
ಯುತ್ತಮ ಭಾವವೆಲ್ಲಿ ಬರುವುದು
ಸತ್ತಮರಿಂತು ಮಾತನಾಡುತಲಿರ್ಪರಿದನರಿದು ।
ಚಿತ್ತಜಾರಿ ಗಣಾಂಶಜಮಹುದೆ-
ನುತ್ತೆ ವಂದಿಸುತಿರ್ಪರ್ನುತಿಸಿ
ಮತ್ತ ಮನುಜರ್ಪಳಿವರವನಂ ಸೋಗಿನವನೆಂದುಂ ॥ ೩೫ ॥

ಗುರುವಿಗೊರ್ಮೆಯರಂಗಿ ಕೇಳ್ದಂ
ಕರಕಂಜವಂ ಮುಗಿದು ಬಾಲಂ
ಹರದೀಕ್ಷೆಯಂ ಕರುಣಿಪುದೆಂದು ನಯದೆ ಭಕ್ತಿಯೊಳ್ ।
ಗುರುವೆಂದನಾತನ ನೋಡುತ್ತೆ
ಪರಿಕಿಸಲ್ ಮನದೊಳ್ ಯೋಚಿಸುತೆ
ತರುಳನೆ ನಿನಗಿದೇಕುದಿಸಿತ್ತೈ ದೀಕ್ಷೆಯಪೇಕ್ಷೆಯು ॥ ೩೬ ॥

ಇದರಿಂದಲೇನಹುದು ಲಾಭಂ
ಸದಮಲನೆ ಲಿಂಗಂ ದೊರೆದಿಹುದು
ಪದುಳ್ದು ಪಂಚಾಕ್ಷರ ಮಂತ್ರವಿಹುದೈ ಪುಸ್ತಕದೊಳ್ ।
ವಿದಿತವಾಗಿ ಶಿವಾಕ್ಷಿ ದೊರೆದಿದೆ
ಪೊದೆದು ಪದತೀರ್ಥಂ ದೊರಕುವದು
ಪದಪಿಂ ಪ್ರಸಾದಂ ಲಿಂಗಕೆ ನಿವೇದಿಸಲಪ್ಪುದು ॥ ೩೭ ॥

ಈ ಮಾತನಾಲಿಸುತೆ ಬಾಲಂ
ಕಾಮಾರಿಯಂ ನೆನೆದು ಗುರುವಿಗೆ
ಪ್ರೇಮಾತಿಶಯಮಂ ಪೆರ್ಚಿಸುತಲಿಂತೊರೆದನೆರಗಿ |
ಸೋಮೇಶ ರೂಪನೆ ಎನಗೇನು
ನೇಮಾಧಿಕಂ ತಿಳಿಯಲಾರದು
ಭೂಮಂಡಲದೆ ನಿಶ್ಚಯ ಕೃತಿಯು ಲಗ್ನಮೆನಿಸುವದೆ || ೩೮ ||

ಅಂತೆಯೆ ಲಿಂಗಧಾರಣ ಕಾರ್ಯ-
ಮೆಂತು ದೀಕ್ಷೆಯೆನಿಪ್ಪುದೈ ತಿಳಿ-
ದಂತೆ ಪುಸ್ತಕದಲ್ಲಿ ಬರೆದುದು ಮಂತ್ರಮೆನಿಸುವದೆ |
ಕಾಂತ ಸಂಸ್ಕೃತಿಯಿರದೆನಗೆ ಲಿಂ-
ಗಾಂತರ ರಹಸ್ಯಂ ತಿಳಿಯುವದೆ
ಶಾಂತನೆ ಎನ್ನನೇಕೆ ಪರಿಕಿಸಿರೆಂದನಾ ಸುಕೃತಿ || ೩೯ ||

ದರಹಸಿತ ಮುಖನಾಗಿ ಗುರುವರ-
ನೊರೆದನೀ ಪರಿಯಮಲನೆ ನಿನ್ನ
ಸರಿದೊರೆಯಿಲ್ಲ ನಿನಗಲ್ಲದಲೆ ದೀಕ್ಷೆಯಾರಿಗಿದು |
ಪರಿಕಿಪುದೆಮ್ಮ ಕರ್ತವ್ಯಮಿಹು-
ದರಿದೆ ನೀನಹುದಹುದು ನೀ-
ನರಿಯಲೆಮ್ಮಯ ಜಸವ ಪೆರ್ಚಿಪೆ ಇದೆ ದಿಟಮೆಂದನು || ೪೦ ||

ನಯದಿಂ ಶಂಭುಲಿಂಗಾರ್ಯನತಿ
ಭಯದಿಂದಲೆರಗಿಂತೆಂದನುರೆ
ದಯೆಯ ತೋರ್ಪೈ ಕರುಣಾಕರನೆ ಎನ್ನ ಬಣ್ಣಿಸದೆ |
ಜಯಿಸಲೊರೆಯೈ ಷಡ್‌ರಿಪುಗಳಂ
ನಿಯತವಾದ ಮಲತ್ರಯದ ಸಂ-
ಚಯವ ಕಳೆಯೈ ಕೃಪೆಯಿಂದೆ ದೀಕ್ಷೆಯನೆ ಗೈದೆನಗೆ || ೪೧ ||

ಎಂದು ಪದಕಾನತನಹ ಸುತನ
ಮಂಪ ಭಕ್ತಿಯ ಕುರುಹನರಿದಾ-
ನಂದದಿಂ ಪಿಡಿದೆತ್ತಿ ವೈದಡವುತ್ತೆ ಸದ್ಗುರುವು |
ನಂದನನೆ ನಿನಗಪುಲ ದೀಕ್ಷೆಯು-
ನಿಂದು ಮಾಳ್ಪೆವು ಸುಖವಿಹುದೆನುತ-
ಲಿಂದುಧರ ರೂಪಂ ಸಂತೈಸಿ ಪರಸಿದನಾತನಂ || ೬೨ ||

ಗದುಗಿನೋಳ್ ಪಂಚಾಕ್ಷರನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತ ಯೋಗಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೋಳ್ ಮೂರನೆಯ ಸಂಧಿಯಿದು || ೬೩ ||

**ಅಂತು ಸಂಧಿ ಮೂರಕ್ಕಂ ಪದಗಳು ಒಂದುನೂರದಿಪ್ಪತ್ತಕ್ಕಂ**

**ಮಂಗಲಂ**

॥ ಶ್ರೀ ಗುರು ಬಸವಲಿಂಗಾಯನಮಃ ॥



# ನಾಲ್ಕನೆಯ ಸಂಧಿಯು

ದೀಕ್ಷೆ ಗೈದಷ್ಟಾವರಣಗಳ-
ನೀಕ್ಷಿಸುತೆ ಬಾಲಂಗೆ ಬೋಧಿಸಿ
ಪಕ್ಷ ಪಾತವ ಗೆಯ್ಯದಲವಕೆ ಕಥೆಗಳ ಪೇಳ್ದನು ॥ ಪಲ್ಲ ॥

ಶಿವ ಶರ್ವ ಶಂಕರ ಕಾಮಹರ
ಭವ ಭೀಮ ಭೂತ ಪತೀಶಾನ
ಭುವನೇಕ ಭಾರ್ಗವ ಭವನಾಶ ಗೌರೀವಲ್ಲಭ ।
ನವಲಿಂಗ ರೂಪ ವಿರೂಪಾಕ್ಷ
ರವಿ ಕೋಟಿ ತೇಜಸ್ಕ ನಾಯಕ
ಕವಿವರ್ಯನುತಪಾಲಯ ಭೋ ಸದೈವ ಮಹೇಶ್ವರ ॥ ೧ ॥

ಸಚ್ಚಿದಾನಂದ ಚರಮೂರ್ತಿಗ-
ಳುಚ್ಚವಹ ಪ್ರೇಮದೆ ತದಾಪ್ತರ-
ನೊಚ್ಚತಂ ಕರೆಯಿಸುತೆ ತತ್ಪಿತೃವಿಂದೆ ಸುಭಕ್ತರ |
ಇಚ್ಛೆಯಿಂ ಕೀರ್ತನಕಾರರಂ
ಸಚ್ಚರಿತರ ಶಿವಾನುಭವಿಗಳ-
ನಚ್ಚರಿಪಂತೆ ಬರಿಸಿದರಗ್ಗರುವರರು ನಿಜಮಠಕೆ ‖ ೨ ‖

ಚರಪಟ್ಟದಾರ್ಯರನುಜ್ಞೆಯಂ-
ತುರು ಮಂಟಪದ ರಚನೆಯಾದುದು
ಸರಸ ಕೋವಿದರಿಂದಲನುಭವಿಗಳ್ಮೆಚ್ಚುವಂತೆ |
ಕರಮೆಸೆಯೆ ಸಾರಣೆ ಕಾರಣೆಯು
ಪರಮ ತತ್ವಂಗಳ ಶುದ್ಧಿಗಾ-
ಗುರೆ ಕಲಶಂಗಳಂ ಸ್ಥಾಪಿಸಿರೆ ವೈದಿಕವರ್ಯರು ‖ ೩ ‖

ಗುರುಗಳಾಕ್ಷಣದಲ್ಲಿ ಸ್ನಾನವ
ನೆರೆ ತೀರ್ಚಿ ಮಂಟಪದೊಳಗೈದಿ
ವರಪಂಚ ಸೂತ್ರಾಕಲಿತ ಶಿವಲಿಂಗಮಂ ನೋಡಿ |
ಸುರುಚಿರಾಸನದಲ್ಲಿ ಮಂಡಿಸು-
ತುರೆ ನೈಜ ಲಿಂಗಾರ್ಚೆಯ ಮುಗಿಸು-
ತುರು ವಿಧಿಯೊಳಾ ಲಿಂಗಕೆ ಸಂಸ್ಕೃತಿಯನೆಸಗಿದರು ‖ ೪ ‖

ವರ ಶಂಭುಲಿಂಗಾರ್ಯನ ನೋಡಿ
ಕರೆದಿದಿರಲ್ಲಿ ಕುಳ್ಳಿರಿಸಿ ಕೊಂ-
ಡುರೆ ಸುಸಂಸ್ಕೃತಮಾದ ಕಲಶೋದಕವ ತದಂಗಕೆ |
ಎರಚುತ್ತೆ ದರ್ಭಾಗ್ರದಿಂದುರು-
ತರ ಮಂತ್ರಗಳನುಚ್ಚರಿಸುತಂ-
ತುರು ಭಸ್ಮಮಂ ಪ್ರೋಕ್ಷಿಸುತಲುದ್ಧೂಳಿಸುತೆ ಧರಿಸಿ ‖ ೫ ‖

ಪರಮ ರುದ್ರಾಕ್ಷಿಯ ಧರಿಸುತ್ತ-
ಲುರೆ ಮಂತ್ರದಿಂ ನ್ಯಾಸವಗೈದು-
ಸರಸವೆನಲಿಂತೀ ಕ್ರಿಯಾದೀಕ್ಷೆಯ ಮುಗಿಸಿ ಬಳಿಕ |
ನೆರೆನೈಜ ಹಸ್ತವ ಶಿಷ್ಯನುರು-
ತರ ಮಸ್ತಕದೊಳಿರಿಸಿ ದೃಷ್ಟಿಯ-
ನರಿದು ದೃಷ್ಟಿಗೆ ಮನವಂ ಮನಕೆ ಭಾವವ ಭಾವಕೆ || ೬ ||

ಬೆರಿಸುತಂ ಶಿಷ್ಯನ ಭಾವಗತ
ಪರಶಿವಕಲೆಯ ಯೋಗ ಶಕ್ತಿಯ-
ನರಿದಾಕರಿಸುತೆ ಭಾವದಿನಾ ಮನಕೆ ಮನದಿಂ |
ಕರವೆಸೆವ ದೃಷ್ಟಿಗೆ ತಂದು ಪರ-
ತರ ಕಲೆಯ ದೃಷ್ಟಿಯ ದ್ವಾರದಿಂ-
ದುರು ಶಿಲಾಲಿಂಗದೊಳಿರಿಸಿ ಗುರುವರರಾ ಲಿಂಗವ || ೭ ||

ಪರಮ ಶಿಷ್ಯನ ಹಸ್ತದೊಳಿಟ್ಟ-
ನರಿದಿಂತು ವೇಧಾದೀಕ್ಷೆಯಂ
ನೆರೆ ನಿರ್ಮಿರ್ಚ್ಚಿ ಷಡಕ್ಷರ ಮಂತ್ರದುಪದೇಶವೆಸಗಿ |
ಆರುಪಿ ತದರ್ಥಮಂ ಜಪವಿಧಿಯ-
ನರುಹಿ ಮನುಧೀಕ್ಷೆಯ ಗೆಯ್ದರೀ
ತೆರನಾಗೆಸಗುತಾಣವಾದಿ ತ್ರಿಮಲವ ಕಳೆದರು || ೮ ||

ಈ ಪರಿಯೊಳಾ ಗುರುಗಳಾತಂ-
ಗಾ,ಪವಿತ್ರಾಷ್ಟಾವರಣಗಳ
ಲೋಪವಿಲ್ಲದೆ ಬೋಧಿಸ ತೊಡಂಗಿದರದನೊರೆವೆನು |
ಪಾಪ ರಹಿತರ ಚರಿತಂಗಳ ನಿ-
ರೂಪಿಸುವ ಪರಿಯಂ ತಿಳಿಸುವೇಂ
ವೈಪರೀತ್ಯವವೊರೆದು ಬೆರೆವುದು ಕೇಳಿ ಧರ್ಮದೊಳಿ || ೯ ||

ನೋಡಿ ಗುರುಗಳ್ ಪೇಳ್ದರೆಂತೆನೆ
ನೋಡು ವತ್ಸನೆ ಈ ಲಿಂಗಮಂ
ನಾಡೆ ನಿತ್ಯದಿ ಬಿಡದೆ ಧರಿಸೈ ಪ್ರಾಣದಂತಿಹುದು |
ಮಾಡು ಪೂಜೆಯ ಶಿವನೆಂದರಿದು
ಮಾಡಿ ನೈವೇದ್ಯವ ಭುಂಜಿಪುದು
ಕೂಡಿರುವದಷ್ಟಾವರಣಗಳೊಳೆರಡನೆಯದಾಗಿ || ೧೦ ||

ಗುರುವು ಲಿಂಗಂ ಜಂಗಮಂ ಮೇಣ್
ವರಭೂತಿ ರುದ್ರಾಕ್ಷಿ ಮಂತ್ರಂ
ಚರಣೋದಕಂ ಸುಪ್ರಸಾದಂ ತಿಳಿಯೆಂಟಿವುಗಳೆ |
ಪರತರಾಷ್ಟಾವರಣಂಗಳಿಹ-
ವರಿಯುವಂ ಶಿವಮತವರಾಂಗವ-
ನರಿಯೆ ಪ್ರಾಣಂ ಪಂಚಾಚಾರಮಾತ್ಮ ಷಟ್‌ಸ್ಥಲಂ || ೧೧ ||

ಶಿವನೆ ಗುರುವಾಗೆಯ್ದುವಂ ಮೇ-
ಣಿವನೆ ಮಾಹೇಶ್ವರನೆಂಟನೆಯ
ತವೆ ತಿಂಗಳದ ಗರ್ಭದೊಳಿರುವ ಮಗುವಿಗಾಗಿಯಿವಂ |
ಶಿವಲಿಂಗಮಂ ಸಂಸ್ಕರಿಸುತೀ-
ಯುವನದಂ ಗರ್ಭಿಣಿಯ ಕರದೊಳ್
ತವ ಲಿಂಗದಂತಿದನೆ ಪಾಲಿಪುದೆಂದಾಜ್ಞಾಪಿಸಿ || ೧೨ ||

ಹರನೆ ಚರ ಪಟ್ಟದ ದೇವನೆಂ-
ಬುರು ನಾಮದಿಂ ಗುರುವಾಗೆಯ್ದಿ
ಮೆರೆವೆಂಟನೆಯ ಬರಿಸದೊಳ್ ಬಾಲಂಗೆ ದೀಕ್ಷೆಯನು |
ನೆರೆ ಗೆಯ್ಯುತಾ ಲಿಂಗಕಂ ಸಂ-
ಸ್ಕರಣಮನೆಸಗಿ ಕರುಣಿಪನದರ
ಮಿರಗುವ ಕಳೆಯ ಸರಿಯಾಗಿ ಬೋಧಿಪನಿವನಸಮನು || ೧೩ ||

ಸಂಚ ವರ್ಣದ ಮನುವ ಬೋಧಿಸಿ
ವಂಚಿಸದಲಾ ಮಂತ್ರದರ್ಥವ
ಸಂಚಯಿಸಿ ಬೋಧಿಸುತಲೋಂಕಾರದ ಮಹತ್ವವನು |
ಕೊಂಚ ಪೇಳುತೆ ಬಾಲಮತಿಗೆ ವಿ
ರಿಂಚಿ ಪ್ರಮುಖ ನುತ ಸುಖವ ನಿ-
ರ್ವಂಚನೆಯಿಂದೆ ಶಿಷ್ಯಗೀಯುವ ಗುರುವಿಗಾರ್ಸಮರು || ೧೪ ||

ಇದಕೊಂದು ಕಥೆಯುಂಟು ಕೇಳ್ಸತ
ಸದಮಲಂ ಶಿವಜಾತನೆಂಬುವ
ವಿದಿತ ಶಿವಯೋಗಿವರನವಂಗೆ ಶಿಷ್ಯಶ್ರೇಷ್ಠನು |
ಚದುರನಾಗೆಂಟನೆಯ ಬರಿಸದೆ
ಪದುಳ್ದು ಸೇವಕನಾಗಿ ಕಲಿತಂ
ಪದಪಿಂದಖಿಲ ವಿದ್ಯೆಯ ಕಲೆಯ ಯೋಗಶಾಸ್ತ್ರವನು || ೧೫ ||

ಹರದೀಕ್ಷೆಯಂ ಗೆಯ್ಯದಿರ್ದಂ
ಪರಿಪಕ್ವ ಹೃದಯದ ಸಿದ್ಧಿಗಾ-
ಗರಿದುಪೇಕ್ಷಿಸದಂತೆ ಕಲಿಸಿದನೆಲ್ಲ ಶಾಸ್ತ್ರಗಳ |
ಅರಿಯೆ ಶಿಷ್ಯೋದ್ಧಾರಕಾಗಿಯೆ
ಚರಿಪ ಸಮಯದಳೊಂದು ದಿವಸದೆ
ಗುರುವಂ ವನದೆ ಕುಳ್ಳಿರಿಸುತಲಪ್ಪಣೆಯ ಪಡೆದು || ೧೬ ||

ಆ ಮಂತ್ರಜಾತಾಖ್ಯ ಶಿಷ್ಯಂ
ಕಾಮಾರಿಯಂ ನೆನೆದು ಗುರು ಪೂ-
ಜಾ ಮಾತ್ರಕಾಗಿಯೆ ಪತ್ರಿಪುಷ್ಪವ ತರಲು ಪೋಗೆ |
ಸೋಮೇಶನಂ ಧ್ಯಾನಿಪ ಸಲ್ಲ-
ಲಾಮೋತ್ತಮನ ಪದಕೆ ಸರ್ಪಂ
ಭೀಮಾತಿಶಯ ವಿಷವನುಗುಳುತೆ ಕರ್ಚುತೈದಿತದು || ೧೭ ||

ಕಾಯದೊಳ್ತಾಪಂ ಪೆರ್ಚಲ್ಕೆ
ಧ್ಯೇಯವಹ ಧ್ಯಾನಂ ಕೆಡುತಿರಲ-
ಮೇಯ ಶಿವಜಾತಾಖ್ಯ ಶಿವಯೋಗಿಯು ನಿಜಶಿಷ್ಯನ |
ರಾಯನುರೆ ಕರೆಯಲ್ ಬಾರದಿರೆ
ಜ್ಞೇಯ ಮಂತ್ರವ ನೆಲದೆ ಬರೆಯುತ-
ಪಾಯಮಿಲ್ಲದೆ ಲಿಂಗದೆ ಬೆರೆದನಾ ಮಹೌಜಸನು || ೧೮ ||

ಅನಿತರೊಳಗಲ್ಲಿಗೆ ಡೊಂಬರುರು
ವನಿತೆ ಚನ್ನಮ್ಮಾಖ್ಯೆಯೈದುತೆ-
ಯನಘ ಲಿಂಗೈಕ್ಯಂಗೆ ನಮಿಸುತೆ ಮರಗುತಾ ಸಾಧ್ವೀ |
ಘನಮಹಾತ್ಮಂ ಬರೆದಾ ಮನುವ-
ನಿನಿತುಂ ಬರೆದುಕೊಳ್ಳುತೆ ಪೋದ-
ಳನುನಯದೆ ವಂದಿಸಲಳುಕಿತರ್ಧಂ ಲಿಪಿಯು ಕ್ಷಣದೆ || ೧೯ ||

ಮಂತ್ರಜಾತಂ ಲಿಂಗದೆ ಬೆರೆದ
ಮಂತ್ರಮಯ ನಿಜಗುರುವನಳುಕಿದ
ಮಂತ್ರದ ಲಿಪಿಯ ನೋಡಿ ದುಃಖಿಸಿ ಮಡಿಯ ತೊಡಂಗಿರೆ |
ಮಂತ್ರಪತಿ ವನಚರನಾಗುತಾ-
ಮಂತ್ರಿತನಾಗದಲ್ಲಿಗೆ ಬಂದು
ಮಂತ್ರಯೋಗ್ಯನ ಗೆಯ್ದಂ ತಡೆದು ಸರ್ವವ ಪೇಳುತೆ || ೨೦ ||

ಗುರುವಿನಂತ್ಯದ ವಿಧಿಯ ಮುಗಿಸುತ-
ಲುರು ಕಿರಾತನ ಹೇಳಿಕೆಯಂತೆ
ಬರುತೆ ಡೊಂಬರ ಚನ್ನಮ್ಮನಂ ಕಂಡು ವಿನಯದೊಳೆ |
ನೆರೆಮಂತ್ರಜಾತಂ ಬೇಡಿಕೊಂ-
ಡುರು ಹರುಷದಿಂದವಳ ಸೇವೆಯ-
ನುರೆಗೆಯ್ಯಲಾದಂ ಮಹಾಮಂತ್ರದ ಪ್ರಾಪ್ತಿಗಾಗಿ || ೨೧ ||

ಅನ್ನ ವಸ್ತ್ರಂಗಳನೇನುವಂ
ನನ್ನೆಯಿಂದವಳಿಂದಿಚ್ಛಿಸದೆ
ಸನ್ನುತಂ ನಿತ್ಯಂ ಕತ್ತೆಗಳ ಕಾಯುತಲಿರ್ದನು ।
ತನ್ನ ಲಿಂಗಾರ್ಚನೆಯನಡವಿಯೊ-
ಳುನ್ನತಂ ತೀರ್ಚುತ್ತೆ ಭಿಕ್ಷೆಯ
ಮನ್ನಿಸುವ ಭಕ್ತರೊಳ್ ಬೇಡಿ ಪ್ರಸಾದವ ಗೆಯ್ವನು ॥ ೨೨ ॥

ಇವನ ಸೇವೆಗೆ ಚನ್ನಮ್ಮನುರೆ
ತವೆ ಮೆಚ್ಚಿರ್ದು ತಿಳಿದಿರ್ದಡುಂ
ಸುವಿವೇಕಿಯುವಳಿಗೆ ತಿಳುಹಲಿಲ್ಲಂ ತನ್ನಿಚ್ಛೆಯ ।
ಅವನಿಯೊಳ್ ಗುರು ಬರೆದಿಟ್ಟ ಮಂ-
ತ್ರವ ಲಲನೆ ತಾಂ ಬರೆದು ತಂದಿಹ-
ಳವಳ್ ತಾನಾಗಿಯೆ ಕೊಡಲೆಂದು ನೆನೆದಿರ್ದನವನು ॥ ೨೩ ॥

ಗುರುವಿಂದೆ ಮಂತ್ರವ ಪಡೆಯಲೆಂ-
ದುರೆಯಾಕಳವ ಕಾಯ್ದವರುಂಟು
ನೆರೆಗಾರ್ಧಪಂಗಳ ಕಾಯ್ದವರ ಕಥೆಯಿಲ್ಲೆಲ್ಲಿಯಿಂ ।
ಅರಿದವರೆಲ್ಲರಿಂತು ನುಡಿಯುವ
ತೆರದೊಳೀ ಶುಭಮಂತ್ರಜಾತನ
ಚರಿತಮಿರ್ದುದದಂ ಬಣ್ಣಿಸುವಡೆನ್ನಳವೆ ತಿಳಿಯೆ ॥ ೨೪ ॥

ಹರ ಮತೋದಿತ ನುರುಕಲಾಶ್ರಿತ
ವರಜನೇಡಿತ ಕರುಣಾಕಲಿತ
ಸುರಗುಣಭರಿತ ಚಿರಮುದಸಹಿತ ಪರಮ ವಿದ್ಯಾಪ್ತಂ ।
ನಿರಘಮಾನಿತ ಪರಿಜನೇಚ್ಛಿತ
ಕರ ಮಹೋನ್ನತ ಸರಸಭಾಷಿತ
ವಿರತನವಿರತಮುರುತರ ಚರಿತ ಗುರುವಿರಲೀತನಂ ॥ ೨೫ ॥

ಭಕ್ತಿಯಿಂ ಸೇವಿಸಿ ಮಂತ್ರಮಂ
ಸಕ್ತಿಯಿಂ ಪಡೆವರತಿ ವಿರಳರ್
ರಕ್ತಿಯಿಂ ಗುರುವುರೆ ಬರೆದಿಟ್ಟ ಮನುವ ಕೊಂಡೆಸೆವ |
ವ್ಯಕ್ತಿಯಿಂ ಬೇಡಿಸಿದು ಕೊಳ್ಳದೆ
ಸೊಕ್ತಿಯನಾಡುತಂ ಸೇವಿಸ ವಿ-
ರಕ್ತವರ ಸನ್ಮಂತ್ರಜಾತಂಗಾರ್ಸಮರ್ಜ್ಜಗದೆ || ೨೬ ||

ಪನ್ನೆರಡು ಬರಿಸಂಗಳೆಂಬರ-
ಮುನ್ನತಂ ಡೊಂಬರ್ಕಳೊಳಿರ್ದು
ಸನ್ನುತಂ ಕತ್ತೆಗಳ ಕಾಯ್ದಂ ಬೇಸರಿಯದವನು |
ಮುನ್ನವೆ ಶಂಭುವಿವನ ನಿಷ್ಠೆಗೆ
ಚನ್ನವೇನೆ ಮೆಚ್ಚುತ್ತೆ ಲೀಲೆಯ
ನನ್ನಿಯಿಂದೊಂದಂ ಗೆಯ್ದನೆಂತೆನೆ ಪೇಳ್ವೆನದನೆ || ೨೭ ||

ಕುಸುಮ ಪುರದೊಳ್ ಧನಪಾಲನೆಂ-
ಬಸಮ ಧನವಂತನಿವನ ಸತಿಯು
ವಸುಮತೀ ನಾಮಕಳಾಸ್ತಿಯಾಶೆಯು ತೋರಿ ಪತಿಗೆ |
ನಿಶೆಯೊಳಾತ್ಮ ಸಹೋದರನ ತಾಂ
ನಶಿಸಲ್ ತೊಡಗಿ ಸುತನ ಕೊಲುತಂ
ಶಶಿಮುಖಿಯು ಪಾತಕದ ದುಃಖವ ಭೋಗಿಸುತಿರ್ದಳು || ೨೮ ||

ಶಿವಯೋಗದ ಮಹತ್ವವ ಧರೆಗೆ
ಶಿವನೆ ತೋರಲ್ ಬಂದವಳ್ಗಾಗ
ಶಿವಯೋಗಿಯಾಗಿತ್ತು ದರ್ಶನಮಂ ಸುಶಾಂತಿಯೊಳೆ |
ತವೆ ಮಂತ್ರಜಾತನ ಮಹಿಮೆಯನು-
ಮವಳ್ಗುಸುರಿ ಡೊಂಬರೊಳಿರ್ಪುದನು-
ಮವನಲ್ಲಿ ಗೈದುವತಿಥಿಯನುಂ ತತ್ತೃಪ್ತಿಯನುರೆ || ೨೯ ||

ನಿಮ್ಮ ಸುತಹತ್ಯೆಯ ದೋಷವಿಃದು
ನೆಮ್ಮಿಗೆಯ್ವುದು ಪತಿಸಹಿತವೆಂ-
ದೊಮ್ಮೆಗಲ್ಲಿಂದಾದನದೃಶ್ಯನಾ ಶಿವಾಧವನು |
ಬಿಮ್ಮಳಿಯುತಾ ದೃಶ್ಯವ ಕಾಣು-
ತುಮ್ಮಳವ ಬಿಡುತೆಲ್ಲವ ಪತಿಯ
ಸಮ್ಮತಿಗೊರೆದು ನಿರೀಕ್ಷಿಸಿದಳ್ ಡೊಂಬರ ಬರುವಸೆ || ೩೦ ||

ಡೊಂಬರಾಟದ ಬರುವಂ ತಿಳಿದು
ಸಾಂಬನ ನೆನೆದು ಸತಿಯಿಃಚ್ಛೆಯಿಂ
ತುಂಬಿದ ಮುದದೆ ಧನಪಾಲಶೆಟ್ಟಿಯು ಶಿವಯೋಗಿಯ |
ಪಂಬಲಿಸುತಂ ಪುಡುಕಿ ಕಾಣದೆ
ತಾಂ ಬಿಡದಲಾ ಡೊಂಬರೆಲ್ಲರ
ನಂಬಿ ಶಿವನಂ ಭೋಜನಕೆ ಕರೆಯುತೆ ಪರೀಕ್ಷಿಸಿದಂ || ೩೧ ||

ಭೋಜನವ ಮುಗಿಸುತೆ ಚನ್ನಮನ
ನೋಜದಿಂ ಕೇಳಿದನೆಲೆಯವ್ವ
ನೈಜವಾಗಿಯೆ ಪೇಳಿರಾರಾದಡುಂ ನಿಮ್ಮೊಳಗೆ |
ಸೋಜಿಗಮದೇನುಳಿದಿರಲಹುದು
ಮೋಜಿದಲ್ಲಂ ಜನವಿದಃ ಘನಂ
ತೇಜದೆ ಪೇಳ್ವೆನೊಬ್ಬನಾದಡು ಬಂದಿಲ್ಲಮಿಲ್ಲಿ || ೩೨ ||

ಧನಪಾಲಶೆಟ್ಟಿಯ ಮಾತ ಕೇ-
ಳ್ದನಘಳಂ ಡೊಂಬರ ಮುಖ್ಯಸ್ಥ-
ರಿನಿಯಳಂ ನೋಡುತಲಿಂತೊರೆದನೆಲೆ ತಾಯೆ ಕೇಳು |
ಅನಿಶವೆಮ್ಮರೆ ಕತ್ತೆಯ ಕಾಯು-
ತಿನಿತು ದಿನವಿರ್ದಪನೆಲ್ಲಿಯುಣು-
ವನೊ ತಿಳಿದಿಲ್ಲಮಿಲ್ಲಿಯಾದಡುಮುಣಲಿ ಕಳುಹಿಸಿರಿ || ೩೩ ||

ಇವರಲ್ಲಿ ಭೋಜನವಿಲ್ಲದಿರ-
ಲವನೆ ಶಿವಯೋಗಿಯನುತ್ತೆ ಬಗೆ-
ದವರೊಡನೆ ತನ್ನಯ ಮನೆಯಿಂದೆ ಪೋಗಿ ಧನಪಾಲಂ |
ಸುವಿನಯದೆ ಸ್ವಾಚಾರವನರುಪಿ
ತವೆ ಮಂತ್ರಜಾತನ ಕರೆತಂದು
ಶಿವಯೋಗಿಯ ಶಿವಾರ್ಚನೆಗೆ ಕುಳ್ಳಿರಿಸಿದಂ ಮುದದೆ || ೩೪ ||

ಕಾಡ ಪತ್ತುರಿಯಂ ಪುಷ್ಪಮಂ
ನಾಡೆಕೊಳ್ಳುತೆ ಲಿಂಗಾರ್ಚನೆಯ
ಮಾಡುವ ಮಂತ್ರಜಾತಾಖ್ಯ ಶಿವಯೋಗಿಗಾ ದಿನದೆ |
ಕೂಡಿದೊರೆದಾ ಸೂಪಚಾರಂ
ಕೂಡೆ ಬೆಳೆಸಿತು ತನ್ಮೋದಮಂ
ನೋಡಿ ಜನರಚ್ಚರೆ ಪಡುವಂತೆ ಪೂಜೆ ಜರುಗಿಹುದು || ೩೫ ||

ಧನಪಾಲಶೆಟ್ಟಿಯು ತದ್ವನಿತೆ
ಘನಮೋದದಿಂ ನಿಂದು ನೋಡುತೆ
ವಿನುತ ಶಿವಕೃಪೆಯಿಂ ತಾವೆ ಸುಕೃತಿಗಳೆಂದೀರ್ವರು |
ಅನಘರವರರಿಯುತ್ತೆ ತಮಗೀ
ಜನುಮದ ಪವಿತ್ರತೆಯ ಗತಿಯಂ
ನೆನೆದು ಕಲ್ಪಿಸಿಕೊಟ್ಟಾ ಪರಮಯೋಗಿಯ ನೆನೆದರು || ೩೬ ||

ವರಮಂತ್ರಜಾತ ಶಿವಯೋಗಿಯ
ಪರಮಲಿಂಗಾರ್ಚೆಯ ವಾರ್ತೆಯಂ
ನೆರೆ ತಿಳಿಯುತ್ತೆ ಡೊಂಬರ ಚನ್ನೆಯೆಚ್ಚರಗೊಳ್ಳುತೆ |
ಪರಮನಿಂ ಸೇವೆಯ ಕೊಂಡೆನೆಂ-
ದುರೆಬಿನ್ನಳಾಗುತ್ತೆ ಪಾಪಕೆ
ತರಹರಸಿ ಯೋಗಿಯ ಕಂಡು ಚರಣದೆ ಬೀಳ್ದತ್ತಳು || ೩೭ ||

ತಾಯೆ ದುಃಖಿಸಬೇಡೌ ತಿಳಿಯೆ
ನ್ಯಾಯಮೆನೆ ನಿನ್ನಂ ಸೇವಿಸಿದ
ಧ್ಯೇಯಮೇನೆನಲಿಂದಿಂಗೆ ಪದಿಮೂರನೆಯ ಬರಿಸಂ।
ರಾಯನಹ ಮುದ್ಗುರುವು ಶಿವನಂ
ಸಾಯುಸದೆ ಪೊಂದಿದ ಸಮಯಮುದು
ಗೇಯದಿಂದವರಿದ್ದ ತಾಣಕೆ ಬಂದು ನೀನಾಗ ॥ ೩೮ ॥

ಎನಗಾಗಿ ಬರೆದಕ್ಷರಂಗಳ
ಜನನಿ ನೀಂ ಬರೆದುಕೊಂಡೈದಿಹೆ
ಘನತೆಯುಳ್ಳ ತದಕ್ಷರಂಗಳಿಗಾಗಿ ಸೇವಿಪೆನು।
ಘನಗುರುವರನ ಕರುಣೆಯ ಬರಹ-
ಮನಘೆಯೂನಲ್ಲೈದುತೀಕ್ಷಿಸು-
ವನಿತಕರೆಯುಳುಕಿರ್ದುದರಿಂದೆ ನಿಮ್ಮನೈದಿದೆನು ॥ ೩೯ ॥

ಶಿವಯೋಗಿಯೀ ನುಡಿಯನಾಲಿಸಿ
ತವೆನುಡಿದಳೆಂತೆನೆ ದೇವತಾ-
ವವುಗಳಂ ಕೇಳಿರ್ದಡಂದಿಗೆ ಕೊಡುತಲಿರ್ದಪೆನು।
ಕವಿದ ಮಣ್ಣೊಳ್ ಬರೆದಕ್ಕರಗ-
ಳವನೆ ಬಿನದದೆ ಬರೆದು ತಂದಿಹೆ-
ನವಿನಯವ ಮನ್ನಿಪುದೆಂದೆರಗಿ ಕೊಟ್ಟಳ್ ಶೋಧಿಸಿ ॥ ೪೦ ॥

ಆ ಮಂತ್ರಮಂ ಮಂತ್ರಜಾತಂ
ಸೋಮೇಶ್ವರನ ನೆನೆದು ಗುರುವನ-
ಸಾಮಾನ್ಯ ಭಕ್ತಿಯೊಳೆ ಧ್ಯಾನಿಸುತೋದಿದಾಕ್ಷಣದೆ।
ಧೀಮಂತನುರು ಮನುರೂಪತೆಯ
ಕಾಮಾದಿ ಗುಣವಳಿದು ತಳೆಯಲ್
ಕಾಮಾರಿ ಲೋಕಕೆ ತೆರಳ್ದಂ ಡೊಂಬರ ಸಹಿತಮೆ ॥ ೪೧ ॥

ಧನಪಾಲಶೆಟ್ಟಿಯು ತತ್ಸತಿಯು–
ಮನಘರಾಗುತೆ ಗಣರಾಗಿಹರ್
ಘನಯೋಗಿಯರ್ಚ್ಚನೆಯ ಮಾಡಿಸಿ ತೃಪ್ತಿಯ ಪಡಿಸಲು |
ವಿನುತನ ಕರಂ ಮುಟ್ಟೆ ಕತ್ತಿಗ–
ಳನಿತು ಕೈಲಾಸವ ಕಂಡಿಹವು
ತನಯ ಗುರು ಕರುಣೆಯ ಮಹಿಮೆಯಿದು ನೀನದನೆ ಪಡೆಯೈ || ೭೨ ||

ಇನ್ನು ಕೇಳ್ ಲಿಂಗದ ಮಹತಿಯಂ
ನಿನ್ನ ಕೊರಳೊಳಗಿರ್ಪ ಲಿಂಗಂ
ನನ್ನಿಯಿಂ ಸಾಮಾನ್ಯಮಲ್ಲಂ ಬಯಕೆಯ ಕೊಡುವುದು |
ಚಿನ್ನಿಧಿಯೆ ನೀನಪ್ಪೆ ನಿತ್ಯಂ
ಮನ್ನಿಸುತೆ ಕಂಠದೆ ಧರಿಸಿದೊಡೆ
ಚನ್ನಮೆನಲೀಕ್ಷಿಸೆ ನಿನ್ನನರಿಯುವೆ ಜಗವ ಮತ್ತೆ || ೭೩ ||

ಭಕ್ತಿಯಿಂ ಪೂಜಿಸಲು ಬಯಸದೆ
ಯುಕ್ತ ಭೋಗವ ಮೋಕ್ಷವ ಪಡೆವೆ
ಸಕ್ತಿಯಿಂ ಧ್ಯಾನಿಸಲು ಸಿದ್ಧಿಯನೇಕವ ಪೊಂದುವೆ |
ಸೂಕ್ತಿಯೊರೆವುದು ಸೂತಕಮಿಲ್ಲ
ಯುಕ್ತಿಯಲ್ಲಿದು ಶುಚಿಯಶುಚಿಯೊಳ್
ರಕ್ತಿಯಿಂದಗಲದೆ ಧರಿಸಿದೊಡೆ ಪಾಪ ಭಯಮಿಲ್ಲ || ೭೪ ||

ಸಿದ್ಧಿಗಳ ಪಡೆದವನಾದಡುಂ
ಬದ್ಧಲಿಂಗವ ತ್ಯಜಿಸಲಾಗದು
ಬುದ್ಧರೊಪ್ಪರ್ ತ್ಯಜಿಸಿದೊಡೆ ಕೇಳಿದಕೊಂದು ಕಥೆಯ |
ಸಿದ್ಧನೋರ್ವಂ ನುಲಿಯ ಚಂದಯ–
ನುದ್ಧರಿಸುವ ಸಮರ್ಥನಿರ್ದಂ
ಶುದ್ಧ ಕಲ್ಯಾಣದೊಳೆ ಬಸವೇಶ್ವರನ ಕಾಲದಲಿ || ೭೫ ||

ತ್ರೈಕಾಲಲಿಂಗಾರ್ಚಕನಿವಂ
ಶ್ರೀಕಂಠನೊಲೆದಿರ್ದನೀತಗೆ
ಲೋಕಕ್ಕೆ ಮಿಗಿಲೆನಿಸಲೀತನ ದಿವ್ಯ ಕಥೆಯನವಂ |
ನಾಕಾಧಿಪಂ ಮೆಚ್ಚುವಂದದೆ
ಲೋಕೇಶ್ವರಂ ಲೀಲೆಯಿನಿಂತು
ಶೋಕಸ್ಥಿತಿಯ ಕಳೆಯಲ್ಕಡೆಯಿಸಿದನದನೊರೆವೆನು || ೪೬ ||

ಗುರು ಜಂಗಮರ ತೃಪ್ತಿಗಾಗಿಯೆ
ನೆರೆಧನವ ಸಂಪಾದಿಸುತಿರ್ದ-
ನುರೆ ಕಣ್ಣಿಯಂ ರಚಿಸಿ ಮಾರುತಲಿರ್ದನದಕಾಗಿ |
ಪೆರವೆಸರ್ಕಂಣಿಗೆ ಸುಲಿಯೆಂದು
ಕರಮೆಸೆವುದದರಿಂದಲೀತಗೆ
ಮೆರೆವುದು ಸುಲಿಯ ಚಂದಯನೆಂಬ ನಾಮಂ ಲೋಕದೆ || ೪೭ ||

ಮೇದೆಯ ಪುಲ್ಲಂ ತಂದು ಪೊಸೆಯುತೆ
ಮುದದೆ ಕಣ್ಣಿಯ ಮಾಡಿ ಶರಣಂ
ವಿದಿತ ಮೇನಲೊಂದೆಯೆ ಹಾಗಕ್ಕೆ ಮಾರುತಿರ್ದಪನು |
ಸದಮಲಂ ದೊರೆದುದರಲ್ಲಿ ಸ-
ಮ್ಮುದಿತನಾಗುತೆ ಪೆರ್ಚಿನಾಶೆಗೆ
ಕುದಿಯದಿಂದಿನದುರೆ ನಾಳಿಂಗೆ ತಂಗೂಳೆನುವವನು || ೪೮ ||

ಇಂತಹುದರಿಂದೀತನುಜ್ಜುಗ-
ಮೂಂತಿಹುದು ಕಾಯಕದ ಪೆಸರಂ
ಶಾಂತನೊಂದು ದಿನದೆ ಕಾಯಕಕೆ ಪುಲ್ಲ ಕೊಯ್ಯುತಿರೆ |
ಕಾಂತ ತದಿಷ್ಟ ಲಿಂಗಮಲ್ಲಿಯ
ಮುಂತಣ ಮಡುವಿನೋಳ್ ಬೀಳುತಿರೆ
ಭ್ರಾಂತನಾಗದೆ ಸುಲಿಯ ಚಂದಾರ್ಯಂ ವಿಚಾರಿಸುತೆ || ೪೯ ||

ನೋಡಿ ನುಡಿದನದೆಂತನಲಹೋ
ನಾಡೆಯನ್ನಿಂದಗಲಿ ಎನ್ನೊಳ್
ಮೂಡಿದ ವೃತದ ನಿಷ್ಠೆಯಂ ಕೆಡಿಸಿದಿರಿ ಲಿಂಗಯ್ಯಾ |
ಮಾಡಿರುವೆ ನಾನೇನು ತಪ್ಪಂ
ಮಾಡಿದಿರಿ ತಿಳಿಸದೆ ಲೀಲೆಯಂ
ಮಾಡುವೇಂ ನಿಮ್ಮಿಯ ವರ್ತನಕೆ ತಕ್ಕ ವ್ಯವಹೃತಿಯ || ೫೦ ||

ಎಂದೆನುತೆ ಲಿಂಗವ ಕೊಳ್ಳದಲೆ
ಚಂದಯಂ ನಡೆಯುತಿರೆ ಲಿಂಗಮು-
ದಂದವಹ ಭಕ್ತನ ವೇಷಮಂ ಸ್ವೀಕರಿಸುತಾಗ |
ಚಂದಮೆನಲೀ ಪರಿಯ ನುಡಿಗಳ-
ನಂದು ನುಡಿಯುತ್ತೆಂತೆನಲ್ ಭೋ
ಚಂದಯನೆ ನಿಲ್ಲಯ್ಯ ಎನ್ನೀ ತಪ್ಪಂ ಮನ್ನಿಸು || ೫೧ ||

ಈ ನುಡಿಯನಾಲಿಸಿ ಚಂದಯಂ
ಮಾನಿತಂಗಿಂತೆಂದನಾರ್ಯನೆ
ಏನಿದೈ ನಿಮ್ಮಿಯ ಮಾತು ತಪ್ಪಿಂಗೆ ಕಾರಣವ |
ಸ್ವಾನುರಾಗದೊಳೆನಗೆ ತಿಳಿಸದೆ
ಮಾನವಿಲ್ಲದೆ ತಪ್ಪೆಂದೊಡಾಂ
ದೀನನಂದದೆ ಬಾಗಿ ಸ್ವೀಕರಿಸಲ್ಮೂರ್ಖನಲ್ಲ || ೫೨ ||

ಎಂದು ಪೋಗುತಿರಲ್ಕೆ ಲಿಂಗಯ-
ನಂದು ಮಾಚಾರ್ಯನ ಕಂಡು ನಡೆ-
ದಂದವಮಂ ಪೇಳುತ್ತೆ ಚಂದಯನಂ ಕರೆಯಿಸಿದನು |
ವಂದಿಸುತೆ ಶರಣಂ ನಿಲ್ಲಲಭಿ-
ವಂದಿಸುತೆ ಮಡಿವಾಳಯ್ಯನವ-
ಗೆಂದನಯ್ಯ ಬಿಡೇತಕೀ ಛಲವೊಲೆದು ಸ್ವೀಕರಿಸು || ೫೩ ||

ಲಿಂಗವಿಲ್ಲದಿರಲ್ಕೆ ಸೇವೆಯ
ಜಂಗಮಂ ಕೈಕೊಳ್ಳನದರಿಂ
ಪಿಂಗದಿರಬೇಕೈ ಸ್ವಲಿಂಗಮೆ ಸಕಲ ಸೌಭಾಗ್ಯಂ ।
ಸಂಗಳಿಸಿ ಸುಖಕಂ ಸುಖವೊದಗೆ
ಪಿಂಗಲೆಂದವರುಂಟೆ ಚಂದಯ
ತುಂಗ ಕಲಿದೇವಯ್ಯ ಬರುತಿರೆ ಬೇಡವೆನಬೇಕೆ ॥ ೫೪ ॥

ಮಡಿವಳಯನೀ ಮಾತನಾಲಿಸಿ
ನುಡಿದನಿಂತಾ ಚಂದಯ್ಯನೊಲ್-
ವೆಡಬಿಡದಲಿರ್ದಾಗ ಪೋಗುತಲೀಗ ಬಹುದೇಕೆ ।
ಮೃಡಚರ ಸೇವೆಯುಂಟೆನಗದಂ
ಬಿಡದೆ ಮಾಡಲ್ಕೊಪ್ಪಿದೊಡನಾಂ
ಸಡಗರದೆ ಸ್ವೀಕರಿಪೆನೊಲ್ಲದೊಡಿಲ್ಲವೆಂದೆನಲು ॥ ೫೫ ॥

ಆಗಲೆಂದದಕೊಪ್ಪಿ ಲಿಂಗಯ
ನಾಗಳೆ ತೊಡಂಗಿದನು ನುಲಿಯಂ
ಹಾಗಕೊಂದಕೆ ಮಾರುವ ವಿಧಿಯೊಳೊಂದು ದಿನದಲ್ಲಿ ।
ವೇಗದಿಂ ಬಸವೇಶ ನಿಲಯಕೆ
ಸಾಗಿ ಬರುತಿರೆ ಲಿಂಗದೆ ತಿಳಿದು
ರಾಗದಿಂದವನಿತ್ತಂ ವರಸಹಸ್ರವ ಕಣ್ಣಿಗೆ ॥ ೫೬ ॥

ಭರದೆಲಿಂಗಯ್ಯಂ ಬಂದು ತ-
ನ್ನುರು ಭಕ್ತನಹ ಚಂದಯ್ಯಂಗೆ
ವರ ಸಹಸ್ರವನೀಯುತಿರಲತಿ ಕೋಪದಿಂದವನು ।
ಒರೆದನೆಂತೆನಲಯ್ಯ ನೀನಾ-
ರುರೆ ಮನೆಗೆ ಕಳವಿಗೆ ಪೋಗಿರ್ದೆ
ಸರಿಯಲ್ಲ ಕಾಯಕಮಲ್ಲವಿದು ಸಲ್ಲದು ಚರರಿಗೆ ॥ ೫೭ ॥

ಆಶೆಯುಂಬುದು ವೇಶ್ಯಯದಾಸಿ
ನಾಶದಾಗರವಹ ದ್ರವ್ಯಮಂ
ಲೇಶಮಾದಡುಮಿಲ್ಲುಳಿಸದಲೆ ಕೊಂಡೊಯ್ವುವೆನುತೆ |
ಕೇಶವ ಪಿಡಿದು ಮಾಚಾರ್ಯನೋಳ್
ದೇಶಿಕನೆಳೆದು ತಂದನಾ ಧನ
ರಾಶಿಯುಂ ಪೊಯಿಸಿಕೊಂಡು ಧಾವಿಸುತೆ ರೋಷದೊಳೆ || ೫೮ ||

ಮಡಿವಳಯ್ಯಂ ಸರ್ವವನರಿದು
ನುಡಿದನೆಂತೆನೆ ಚಂದಾರ್ಯಕೇಳ್
ಮೃಡನಿವಂ ಸೇವೆಯು ಮಾಡಿದವನಲ್ಲಿವೆಂದೆಂದುಂ |
ನಡೆವ ಕುದುರೆಯು ಮುಗ್ಗರಿಸಿದೊಡ-
ನೊಡೆಯಂ ಕಾಲಕತ್ತರಿಸುವನೆ
ಬಿಡದೆ ಕೊಳ್ಳಿ ತಿಗುಣಿಗಾಗಿಯೆ ಮನೆಯ ಸುಡಲಹುದೆ || ೫೯ ||

ಕಲಿದೇವಯ್ಯನಂ ಮನ್ನಿಸೆನೆ
ಸಲೆ ನುಡಿದನಾ ಚಂದಯ್ಯ ನಿಂ-
ತೆಲೆಯಯ್ಯ ಎನಗುಂಟು ಕಾಯಕಮುರಿ ಲಿಂಗವೇಕೆ |
ನೆಲೆಸಿರೆ ಕಾಯಕದೆ ಗುರುವಿನ
ಸಲುವ ಲಿಂಗದ ಜಂಗಮಾರ್ಯನ
ನಿಲದೆ ಹಂಗಂ ಮರೆಯುವದು ಚಂದೇಶ್ವರ ಲಿಂಗವೆ || ೬೦ ||

ಕಾಯಕಮೆಂದೆನಲ್ಕೆ ಮಡಿವಳ-
ನಾಯಸಮಿಲ್ಲದಿಂತು ನುಡಿದಂ
ಜೀಯ ಶರಣರ ಸಮ್ಯಜ್ಞಾನದಿಂದಿದನರಿವುದು |
ನ್ಯಾಯಮಿದು ನಡೆಯಿರಿ ನೀವೆನಲು-
ಪಾಯಮಿರದನುಭವ ಮಂಟಪಕ-
ಪಾಯವ ನಿವಾರಿಸಿಕೊಳ್ಳಲ್ಕೈದಿದರನುರಾಗದೆ || ೬೧ ||

ಮಡಿವಳ ಮಾಚಿದೇವ ನಿಂದರಿ-
ದೊಡನಲ್ಲಮ ಪ್ರಭುರಾಯನಾ
ವೃಡ ಚನ್ನ ಬಸವಯ್ಯಂಗನುಜ್ಞಾಯನಿತ್ತನೊರೆಯೆ |
ಶಡಗರದೊಳಿಂತೊರೆದನಾತಂ
ನಿಡು ಮುಗಿಲೊಳಾಡುವ ಪಟಕ್ಕಾ-
ದಡುಮಾಧಾರಮಿರಲೇ ವೇಳ್ಕು ಲಿಂಗಮಂತೆಮಗೆ || ೬೨ ||

ಪರಮಾಧಾರಮಾಗಿರುವದೈ
ನೆರೆ ಮಿಸುನಿಯಾದರು ಕುಂದಣದೊ-
ಳುರೆ ಸಂದಿರಲ್ವೇಳ್ಕು ಗುರುಚರರ್ಗ್ಗಂ ಬೇಕು ಲಿಂಗಂ |
ಉರು ಶಶಿಯಲ್ಲಿ ಚಂದ್ರಿಕೆಯಂತೆ
ವರ ಸಸ್ಯದೊಳ್ ಮೇಣ್ ರಸದಂತೆ
ಕರಲಿಂಗದೊಳ್ ತನ್ನವೊಲೆಸೆಪ ಶಕ್ತಿಯುಂಟರಿಯೈ || ೬೩ ||

ಎಂದೆನಲ್ಕೊಪ್ಪುತ್ತೆ ನಮಿಸುತೆ
ದಂಡಗವ ಕಳೆವಾ ಲಿಂಗಮಂ
ಚಂದದಿಂ ಕರೆಯುತ್ತೆ ಕೊರಳೊಳ್ ಧರಿಸಿದನಾಗಳೆ |
ಚಂದಯಾಖ್ಯನ ಶರಣನೀ ಕಥೆ-
ಯಿಂದಲಾವರಿಯುವದು ಲಿಂಗಂ
ಸುಂದರ ತತ್ವಮಿದನಗಲಿರಲ್ ಬಾರದು ಶಿಷ್ಯನೆ || ೬೪ ||

ನಂಬಿದಂ ನೀಂ ಶಂಭುಲಿಂಗನೆ
ನಂಬಿ ಜಂಗಮದಿರವ ಕೇಳೈ
ಸಾಂಬನಾತ್ಮ ಸ್ವರೂಪಕನೆವ್ಮಾತ್ಮನೆ ಶಿವನಿಹಂ |
ತುಂಬಿದ ಹರನ ದೇಹಂ ಲಿಂಗ-
ಮಿಂಬೆನಿಸಿಲ್ಲಿ ಮೆರೆವ ಚಿತ್ಕಳೆ-
ಯುಂ ಬಿಡದೆ ಜಂಗಮನಾಗಿ ಬಂದಿಹುದೆಂದು ತಿಳಿಯೈ || ೬೫ ||

ವರ ಚಿತ್ಕಳೆಗೆ ಚೈತನ್ಯವೆಂ-
ದುರುನಾಮವೊಂದಿಹುದು ತಿಳಿಯದೆ-
ಯರಿವಿಗಾಶ್ರಯವಹುದು ಚಿತ್ತದು ಮೂಬಗೆಯಹುದರಿ |
ಗುರುಲಿಂಗ ಜಂಗಮರದರಿಂದೆ
ಮೆರೆಯುತಿಹರಾಕೃತಿಯ ಧರಿಸುತೆ-
ಲೊರೆವೆನದರುರೆ ನಾಮವ ಸ್ಥೂಲ ಸೂಕ್ಷ್ಮ ಕಾರಣವು || ೬೬ ||

ಶಿಕ್ಷಕ ರಕ್ಷಕ ಪರೀಕ್ಷಕರ್
ಲಕ್ಷಿಸಲ್ ಗುರುಲಿಂಗ ಜಂಗಮ-
ರೀಕ್ಷಿಸಲ್ ಲಿಂಗಾಯತ ಧರ್ಮಕಿವರಧಿದೇವರು |
ಪಕ್ಷ ಪಾತವ ಮಾಡದಿವರನ-
ಲಕ್ಷಿಸದೆ ಪೂಜಿಸವೇಳ್ಕು ತಿಳಿ
ತ್ರ್ಯಕ್ಷನೆಂದಿವರಂ ತಿಳಿಯದೊಡೆ ದುಃಖಂ ತಪ್ಪದು || ೬೭ ||

ಚರ ಪಟ್ಟದಾರ್ಯರ ಮಠಂಗಳ್
ಗುರುವಿನ ಸ್ಥಲಂಗಳ್ ಸುವಿರಕ್ತ
ವರ ಮಠಂಗಳ್ ಜಂಗಮರ ಸ್ಥಲಗಳ್ತೋರುತಿಹವು |
ಗುರುವಾತ್ಮ ಗೋತ್ರಜರ ಪೊರೆವಂ
ಧರಿಪರಂ ಪೊರೆಯುವದು ಲಿಂಗಂ
ಪೊರೆವಂ ಜಂಗಮಂ ಸರ್ವರಂ ನಿಖಿಲ ಸಾಕ್ಷಿಯಿವಂ || ೬೮ ||

ಇದಕೊಂದು ದೃಷ್ಟಾಂತವನೊರೆವೆ-
ನದುವಾವುದೆನೆ ಯಡೆಯೂರಲ್ಲಿ
ಪದಪಿಂದಲಿರುತಿರ್ದಂ ಸಿದ್ಧಲಿಂಗಯತಿವರನು |
ಸದಮಲನ ದರ್ಶನಕಾಗಿ ಬಂ-
ದೊದವಿದ ಜನಂಗಳಳೊರ್ವ ಸ-
ತ್ಸದತಿಯ ಕೊರಳ ಕನಕದ ಸರಂ ಕಳವಾಗಿರ್ದುದು || ೬೯ ||

ಅರಿವದನೋರ್ವ ಭಕ್ತಂ ಬಂದು
ಕರೆದೆಲ್ಲರಂ ತತ್ಸಮ್ಮುಖದೆ
ನೆರೆಕೇಳಿ ಕೈಮುಗಿಯಿಸುತ್ತಿರೆ ಕಳವು ಗೆಯ್ದವಳ |
ಸರಿಯಾಗಿ ಮುಗಿದಿಹ ಕರಂಗಳ
ವುರೆ ಮುಗಿದಂತೆ ಬಿರ್ಚದಿರಲ–
ಚ್ಚರೆಗೊಳಲ್ ಜನರವಳಾಸರವನಿತ್ತು ಬದುಕಿದಳು ॥ ೭೦ ॥

ಈ ಶಿವಯೋಗಿಯೊಳ್ ಸುಭಕ್ತಿಯ–
ನಾಶೆಯೇನಿಲ್ಲದಲವಳಿಟ್ಟು
ನಾಶ ರಹಿತ ಸುಖವ ಪಡೆಯುತ್ತೆ ಬಾಳಿದಳಾಕೆಯು |
ಈಶ ಸಮನಾದಾ ಯತಿಯಿಂದೆ
ದೇಶದೊಳ್ ಶಿವಭಕ್ತಿ ವೃದ್ಧಿ ಸಿ–
ರಾಶಿಯ ವೃತ್ತಿಯಂ ಬೆಳೆಸುತ್ತ ವರ್ಧಿಸಿತು ಸುತನೆ ॥ ೭೧ ॥

ಜ್ಞಾನವಂ ಬೆಳೆಸಿದ ಕಥೆಯಿಂತ–
ನೂನವಾಗಿ ಪ್ರಶಿದ್ಧವಾಗಿದೆ
ಸಾನುರಾಗದೆ ಪೇಳ್ವೆನದನಾಲಿಸು ಭಕ್ತಿಯಿಂದೆ |
ಏನು ವಿದ್ಯೆಯು ಕಲಿಯದವನಾ
ಮೂನನಿಧಿಯುರು ಶಿಷ್ಯನಿರ್ದಂ
ಮೌನದಿಂದುರೆ ಸೇವಿಸುತಿಹಂ ಬೋಳಬಸವಾಖ್ಯಂ ॥ ೭೨ ॥

ಸಿದ್ಧಲಿಂಗೇಶ್ವರನ ಸೇವೆಯ
ಶುದ್ಧಿಯಿಂ ಮಾಡುತ್ತಲಿವನ ಸ–
ವೃದ್ಧ ಕೃಪೆಯಿಂ ಸಕಲ ಶಾಸ್ತ್ರ ವಿಶಾರದನಾಗುತೆ |
ಉದ್ಧರಣಕರ ಚಿದ್ದೀಕ್ಷೆಯಂ
ಸಿದ್ಧನಾದಂ ಪಡೆದೀತನ ಪ್ರ–
ಶಿದ್ಧರಹ ಶಿಷ್ಯರಿಂ ಜ್ಞಾನದ ಪ್ರಸಾರವಾಯಿತು ॥ ೭೩ ॥

ಇದುವೆ ಜಂಗಮ ಕರ್ತವ್ಯಮರಿ-
ದಿದನೆ ಮರೆಯದೆ ನಂಬುವದೆಂದು
ಸದಮಲಂ ಶಿಷ್ಯಂಗೊರೆಯುತ್ತೆ ಮತ್ತಿಂತೆಂದನು |
ಹೃದಯಪೂರ್ವಕವಾಗಿ ಕೇಳ್ಳೈ
ಪದಪಿಂದೆ ಭಸ್ಮದ ಮಹಿಮೆಯಂ
ಮುದದೆ ಪೇಳ್ವೆಂ ನಿನಗೆ ಜಗದುದ್ಧಾರಾರ್ಥವಾಗಿ || ೭೪ ||

ಚರಪಟ್ಟದಾರ್ಯರಿಗೆ ಪ್ರಮುಖರ್
ಹರಪಂಚಮುಖಜಾತರೆನಿಪರ್
ಧರೆಗಿಳಿದು ಪಂಚ ಸೋಮೇಶಾದಿ ಲಿಂಗಂಗಳಿಂದೆ |
ಗುರು ರೇಣುಕಾಚಾರ್ಯ ಮುಖ್ಯರ್
ಸರಸಮೆನೆ ಪ್ರತಿಪಾದಿಸಿರ್ಪರ್
ಪರಮ ಸಿದ್ಧಾಂತಶಿಖಾಮಣಿ ಮುಖಗ್ರಂಥಗಳೊಳ್ || ೭೫ ||

ಶಿವನಿರಂಜನ ಕಲೆಯಂಶಜರ್
ತವೆ ತಮ್ಮ ಗ್ರಂಥದೆ ಬರೆದಿಹರ್
ಸವಿನುಡಿಯಿಂದೆ ವರ್ಣಿಸುತೆ ಕನ್ನಡ ಭಾಷೆಯಲ್ಲಿ |
ಲವಲೇಶವಾದರು ಮರೆಯದಿರ್
ಭವದಂಗಕ್ಕೆ ಧರಿಸುತಿರ್ದರ್
ನವಮೆನಲ್ ಸಂಗ್ರಹಿಸಿ ಪೇಳ್ವೆಂ ಧರಿಸಿ ಪಡೆ ಸುಖವ || ೭೬ ||

ಹರನ ಪಂಚಾನನದೊಳುದಿಸುತೆ
ಮೆರೆವೈದು ಗೋವುಗಳ ಪುರೀಷ
ಮೂರು ಭಸ್ಮದುದಯಕ್ಕೆ ಕಾರಣಮಪ್ಪುದು ತಿಳಿ ಮಗನೆ |
ಮೀರುಗುವ ಕಲ್ಪ ನಾಮಮಿದಕ್ಕೆ
ಸರಸಮೆನೆ ಕಾಕುಳ್ಳು ಬೂದಿಯ-
ದಿರಲುಪಕಲ್ಪ ಭಸಿತಮೆನಿಪುದು ಮುಂದೆ ಕೇಳ್ನಲೆದು || ೭೭ ||

ಬೂದಿಗಾಕಳ ಮೂತ್ರವ ಕಲಿಸಿ
ಗೈದ ವಿಭೂತಿಯನುಕಲ್ಪವಿದು
ವೋದದೊಳರಿಯುಲುಳಿದ ಬೂದಿಯೆ ಕಲ್ಪವೆನಿಸುವದು, |
ಸಾದರದೆ ಸರ್ವಕೆ ಗುರು ಚರ ಪ-
ದೋದಕವ ಬೆರೆಸುತೆ ಸಂಸ್ಕರಿಸಿ
ಮೇದಿನೀ ಶಿವಭಕ್ತರೆಲ್ಲರ್ ಮುದದೆ ಧರಿಸುವರು || ೭೮ ||

ಐದು ಬಣ್ಣದ ಗೋವುಗಳ್ ಶಿವ-
ನೈದು ಮೊಗದಿಂದುದಯಿಸಿದ ಗೋ-
ವೈದನುರೆ ಪ್ರತಿನಿಧಿಸುವವು ಗೋವೆಂದಡೆ ದೇವತೆ |
ಐದೆ ಗೋವಿನೊಳಖಿಲ ದೈವಗ-
ಳೈದಿರುತಿಹವು ಪೂಜಿಸುತಿರ್ಪ-
ರೈದುವರ್ ಕಾಮಿತಮನದರಿಂ ಸರ್ವ ಪೂಜ್ಯಮಿದು || ೭೯ ||

ಗೋಮಯದಿಂದೆ ಕುರುಳಂ ತಟ್ಟಿ
ನೇಮದಿಂ ಒಣಗಿಸಿ ಬೂದಿಯಂ
ಪ್ರೇಮದಿಂ ಗೆಯ್ಯುತೆ ಕುಟ್ಟಿ ಸೋಸುತೆ ಶುಭ್ರಗೊಳಿಸಿ |
ಕಾಮಿತದ ಘಟ್ಟಿಗಳನೆಸಗಲ್
ನಾಮಗಳ ಪಡೆಯುವದಾ ಭೂತಿ
ಭೂಮಿಯೋಳ್ ಕ್ಷಾರಂ ರಕ್ಷೆ ಭಸಿತಂ ಭಸ್ಮವೆಂದು || ೮೦ ||

ಇದಕೆ ಸಮಾನಮಾವುದುಮಿಲ್ಲ-
ಮಿದುವೆ ಭೂತಿಯುಮೈಶ್ವರ್ಯಮೆಂ-
ಬುದುಮರ್ಥಮೈಶ್ವರ್ಯಮೆಂದೊಡದೀಶ್ವರತ್ವಮರಿ |
ವಿದಿತಮೆನೆ ಪೇಳ್ವೆಂ ಭೂತಿ ಶ-
ಬ್ದದ ತದ್ಭವಂ ಬೂದಿಯುಂಬುವ-
ದಿದನರಿದು ಧರಿಸುವದು ಬೂದಿಯೆ ನಿಶ್ಚಿತಾರ್ಥಮಿದು || ೮೧ ||

ಶ್ರೀಜಗದ್ಗುರು ದಾರುಕಾರ್ಯಂ
ಮೋಜಿನಿಂ ಶಿವತತ್ವಮಂನೊಲಿಯು-
ತೋಜದಿಂ ಭಕ್ತರ್ಗೆ ಬೋಧಿಸುತಿರ್ಪ ಸಮಯದೊಳೆ ।
ಸೋಜಿಗವೆ-ನಲ್ ಶಿಷ್ಯನೋರ್ವಂ
ರಾಜಿಸುವ ತತ್ಪಾದ ವನಜಕೆ
ನೈಜ ಭಕ್ತಿಯೊಳೈದಿ ವಂದಿಸುತಿರಲಾಚಾರ್ಯನು ॥ ೮೨ ॥

ನೋಡಿ ನುಡಿದಂ ನಿನ್ನ ಪತ್ನಿಯು
ಕಾಡೊಳೆ ಸರ್ಪದಷ್ಟಳಾಗುತೆ
ನೋಡುತಿರೆ ಮಡಿವಳ್ ಶಿವನಿಚ್ಛೆಯನ್ನಿಮ್ಮೀರ್ಗ್ವರಾರು ।
ನಾಡೆ ಈ ನ ಡಿ ಕೇಳಿಸುತ್ತಿರೆ
ಮಾಡಿ ಪ್ರಣಾಮಂ ಕಂಣೀರು
ಕೋಡಿಗಟ್ಟುತೆ ಪರಿದು ಪದಕಭಿಷೇಕ ಜಲವಾಯ್ತು । ॥ ೮೩ ॥

ಪಿಡಿದೆಬ್ಬಿಸುತೆ ಗುರುವಿಂತೊರೆದ-
ನೆಡವಿಡದೆ ಶಾಂತಿಯೊಳಿರುವದೈ
ಪಿಡಿ ವಿಭೂತಿಯ ಕೊಡ.ವೆವಿದನಾ ಶಿವನ ನುತಿಸುತಲೆ ।
ಪುಡಿಗೈದು ನೀರ್ಬೆರಸುತೆ ಕುಡಿಸಿ-
ದೊಡೆ ವಿಷಬಾಧೆ ನಷ್ಟಮಹುದೈ
ಮೃಡನ ಮರೆಯದಿರೆಂದು ಭಸಿತದ ಘಟಿಕೆಯನಿತ್ತನು ॥ ೮೪ ॥

ಒಯ್ದು ಸತಿಗೆಲ್ಲವನರುಪುತದ-
ನೈದೆ ಕರದೊಳಗೀಯಲಾ ಸತಿ-
ಯೈದೆ ಕೊಳ್ಳುತಲಿರ್ದ್ದಳನುದಿನಮಾ ಗುರುವ ನೆನೆದು ।
ಐದುತವಳ್ಗಹಿಯುರೆ ಕಚ್ಚಿದುದು
ಮೋದದಿಂ ವಿಷಬಾಧೆಯನೀಗಿ
ವೇದ ವೇದ್ಯನ ನೆನೆಯುತಂ ಸುಖವಿರ್ದ್ದಳಾ ಸುದತಿ ॥ ೮೫ ॥

ಮತ್ತಮೋರ್ವಂ ಸರ್ಪಂ ಕಚ್ಚಿ
ತತ್ತರಿಸುತಳಿದಿರ್ದ್ದ ನಡನೂರು
ಸತ್ತಮಂ ದಾರುಕ ಗುರುವರಿದು ತತ್ಪಿತಗೊರೆದಸು ।
ಮತ್ತೆ ಬದುಕುವನೈ ತವಸುತಂ
ಚಿತ್ತರದ ಭಸಿತದೆ ಪೊಳ್ವುದೈ
ಚಿತ್ತಜಾರಿಯ ಕೃಪೆಯುಹುದು ತಲೆಯಂ ಮುಚ್ಚಬೇಡ ॥ ೮೬ ॥

ಇಂತೊರೆದ ಶಿವಯೋಗಿಯುಕ್ತಿಯ-
ನಂತರಿದು ತಜ್ಜನಕನಾಗಳೆ
ಸಂತಸದೊಳಾ ತೆರದೆ ಗೆಯ್ಯುತಲೇಳು ಘಳಿಗೆಯೊಳ್ ।
ಚಿಂತಿಸದೆ ಸುತಜೀವವ ಪಡೆದ-
ನೆಂತು ಬಣ್ಣಿಸಲೊಡಮಿದಲ್ಲಂ
ಶಾಂತನುರೆ ಭಸ್ಮವ ಧರಿಸೆ ಮತ್ತೋರ್ವಂ ಬದುಕಿದಂ ॥ ೮೭ ॥

ಈ ಪರಿಯೊಳುರೆ ದಾರುಕಾರ್ಯಂ
ಲೋಪಮಿಲ್ಲದೆ ಬಸಿತ ಮಹಿಮೆಯ
ತಾಪ ರಹಿತಂ ಜಗಕೆ ತೋರುತೆ ಭಕ್ತಿಯ ಬೆಳೆಸಿದಂ ।
ವೈಪರೀತ್ಯಮುದಿಲ್ಲದೆಸೆದರ
ಕೋಪಿಗಳ್ ಬಸವಾದಿ ಶರಣರ್
ಪಾಪ ವಿರಹಿತನಾಗು ಭಸ್ಮವನಂಬಿ ಭಕ್ತಿಯೊಳೆ ॥ ೮೮ ॥

ಇನ್ನು ಕೇಳ್ ರುದ್ರಾಕ್ಷಿಯ ಘನವ
ಸನ್ನುತನೆ ಇದಕೆ ಶಿವಾಕ್ಷಿಯಂ-
ದುನ್ನತ ನಾಮಮುಂಟು ಮತ್ತೊಲೆದಿದನೆ ಧರಿಸಿದೊಡೆ ।
ಮನ್ನಣೆಯ ಶಿದ್ಧಿಗಳಹೌ ಮೇಣ್
ಚಿನ್ನಿಧಿಯೆ ನೀನಪ್ಪೆ ನಿನಗ-
ತ್ಯುನ್ನತಿಯ ಪದಮಹುದು ಸಕಲ ಭಯಂಗಳಿಲ್ಲವು ॥ ೮೯ ॥

ಪೂರ್ವಕಾಲದೆ ತ್ರಿಪುರ ದಹನದ
ಪೂರ್ವ ಲೀಲೆಯು ನಡೆದ ಸಮಯದೆ
ಶರ್ವನ ನೇತ್ರದಿಂದುದಿರ್ದಶ್ರು ಬಿಂದುಗಳೀ ಧರೆಯೊಳ್ |
ಸರ್ವ ಘನ ರುದ್ರಾಕ್ಷಿ ತರುವೆಂ-
ದುರ್ವರೆಯು ಜನರಿಂ ಪೆಸರಾಂತ
ಖರ್ವ ಪಾಪವ ಕಳೆಯಲಾದೌ ಧರಿಸುತಿರೆ ಜನತೆ || ೯೦ ||

ಒಂದು ಮುಖದಿಂ ಪದಿನಾಲ್ಕು ಮುಖ-
ದಂದಮುಂ ತಳೆದಿರ್ಪುವಿವು ಮೇಣ್
ಛಂದದೊಳ್ ಕಾಳಾಮುಖೀ ನಾಮವನಾಂತಿರುವವು |
ಒಂದು ರುದ್ರಾಕ್ಷಿಯನಾದಡುಂ
ಕುಂದದಲೆ ಧರಿಸಲ್ವೇಳ್ಕು ತಿಳಿ
ಪೊಂದಿದಘಮಂ ನೀಗಿರ್ಪರೈ ಧಾರಕರ ನೋಡಿ || ೯೧ ||

ಇದಕೊಂದು ಕಥೆಯುಂಟು ಕೇಳ್ವೈ
ಸದಮಳನ ರೇಣುಕ ಜಗದ್ಗುರು
ಮುದದೆ ಸೋಮೇಶ್ವರ ಲಿಂಗದಿಂದವತರಿಸುತವನು |
ಪದಪಿಂದೆ ರುದ್ರಾಕ್ಷಿ ಭೂಷಿತ-
ನುದಿತ ಮನುಜರನೀಕ್ಷಿಸುತೆ ಸ-
ತ್ಪದ ಜ್ಞಾನಮಂ ಮಾಡಿಕೊಡುತುದ್ಧರಿಸುತಿರ್ದಪನು || ೯೨ ||

ಒಂದು ತಾಣದೊಳೀರ್ವರಸುರರ್
ಮಂದರಿರುತಂ ತಿಗುಣಿಯಾಗುತ-
ಳಂದದಿ ವೃಕ್ಷದೊಳಡಂಗುತಂ ಪಗಲೊಳ್ ರಾತ್ರಿಯೊಳ್ |
ಪೊಂದಿ ನಿಜ ರೂಪವನಾ ಪ್ರಾಂತ
ಸುಂದರ ಜನಂಗಳ ಪಿಡಿಯುತ್ತೆ
ತಿಂದು ತೇಗುತಲಿರ್ದ ರಿದನರಿಯುತ್ತೆ ತದ್ಗುರುವು || ೯೩ ||

ಮುದದೊಳೊರ್ಮೆಯದೇ ವೃಕ್ಷದೆಡೆ-
ಗೊದವಿದ ಶಿವಧ್ಯಾನದಿಂದ್ಯೆ-
ದಿದನಾ ಪರಮ ಸರ್ವಜ್ಞನಾತನ ರಾಕ್ಷಸರುರೆ |
ಪೊದೆದು ಪಿಡಿಯಲ್ ಧಾವಿಸಿ ಬರಲ್
ತದಮಳಿನ ದರ್ಶನ ಮಾತ್ರದಿಂ
ಪುದಿದ ರಾಕ್ಷಸ ವೃತ್ತಿಯಡಗಲ್ ವಂದಿಸಿದರವಗೆ || ೧೪ ||

ಅವರನೀಕ್ಷಿಸಿ ರೇಣುಕಾರ್ಯಂ
ತವೆಯವಗ್ಗೆ ಪೇಳಿದನೆಂತೆನಲ್
ಸುವಿನಯರೆ ನಿಮ್ಮೊಳಗೋರ್ವನಾ ಮಾಸನೂರ್ಕೆರೆಯೊಳ್ |
ಜವದೊಳಸಿಯಾಗುತೆ ನೆಲೆಸುವದು
ನವ ಖಡ್ಗವಾಗುತೆ ಮತ್ತೋರ್ವ-
ನವಿರತವೆಮ್ಮ ಹಸ್ತದೊಳಿರ್ಪುದೆಂದಾಜ್ಞಾಪಿಸೆ || ೧೫ ||

ಅಪ್ಪಣೆಯಂತೆ ವಂದಿಸುತೋರ್ವ-
ನಪ್ಪಿದ ಮುದದೆ ಕೆರೆಗೈದಿದಂ
ತಪ್ಪದಲೆ ಮತ್ತೋರ್ವನಿಹನಶಿಯಾಗಿ ತತ್ಕರದೆ |
ಒಪ್ಪುವ ಗಗನ ಮಾರ್ಗದೆ ಪೋಗು-
ತೊಪ್ಪಿರುವ ಉಜ್ಜಯನಿಯ ರಾಜ-
ಗೊಪ್ಪಿಸಿದನವನಾಗ್ರಹಕಾಗಿ ಖಡ್ಗವಂ ಗುರುವು || ೧೬ ||

ಒಲಿದು ರುದ್ರಾಕ್ಷಿಗಳ ಧರಿಪರ-
ನೆಲೆಯರಿಯದೆ ಪ್ರಯೋಗಿಸಲೊಡನೆ
ತೊಲಗಿ ಗಂಧರ್ವಂ ತಾನಾಗುತಸಿ ಪೋಪುದೆಂದು |
ಕಲಿಯಹ ವಿಕ್ರಮಾರ್ಕ ನೃಪಂಗೆ
ನಲಿದೊರೆದು ರೇಣುಕ ಜಗದ್ಗುರು
ವೊಲವಿಂ ಭಕ್ತರುದ್ಧಾರವಮಂ ಗೆಯ್ಯುತೆ ನಡೆದನು || ೧೭ ||

ಪೂರ್ವಕಾಲದೆ ತ್ರಿಪುರ ದಹನದ
ಪೂರ್ವ ಲೀಲೆಯು ನಡೆದ ಸಮಯದೆ
ಶರ್ವನ ನೇತ್ರದಿಂದುದಿರ್ದ ಅಶ್ರು ಬಿಂದುಗಳೀ ಧರೆಯೊಳ್ ।
ಸರ್ವ ಘನ ರುದ್ರಾಕ್ಷಿ ತರುವೆಂ-
ದುರ್ವರೆಯು ಜನರಿಂ ಪೆಸರಾಂತ
ಖರ್ವ ಪಾಪವ ಕಳೆಯಲಾದೌ ಧರಿಸುತಿರೆ ಜನತೆ ॥ ೯೦ ॥

ಒಂದು ಮುಖದಿಂ ಪದಿನಾಲ್ಕು ಮುಖ-
ದಂದಮಂ ತಳೆದಿರ್ಪವಿವು ಮೇಣ್
ಛಂದದೊಳ್ ಕಾಳಾಮುಖೀ ನಾಮವನಾಂತಿರುವವು ।
ಒಂದು ರುದ್ರಾಕ್ಷಿಯನಾದಡುಂ
ಕುಂದದಲೆ ಧರಿಸಲ್ವೇಳ್ಕು ತಿಳಿ
ಪೊಂದಿದಘಮಂ ನೀಗಿರ್ಪರೈ ಧಾರಕರ ನೋಡಿ ॥ ೯೧ ॥

ಇದಕೊಂದು ಕಥೆಯುಂಟು ಕೇಳ್ವೈ
ಸದಮಳಿನ ರೇಣುಕ ಜಗದ್ಗುರು
ಮುದದೆ ಸೋಮೇಶ್ವರ ಲಿಂಗದಿಂದವತರಿಸುತವನು ।
ಪದಪಿಂದೆ ರುದ್ರಾಕ್ಷಿ ಭೂಷಿತ-
ನುದಿತ ಮನುಜರನೀಕ್ಷಿಸುತೆ ಸ-
ತ್ಯದ ಜ್ಞಾನಮಂ ಮಾಡಿಕೊಡುತುದ್ಧರಿಸುತಿರ್ದಪನು ॥ ೯೨ ॥

ಒಂದು ತಾಣದೊಳೀರ್ವರಸುರರ್
ಮಂದರಿರುತಂ ತಿಗುಣಿಯಾಗುತ-
ಳಂದದಿ ವೃಕ್ಷದೊಳಡಂಗುತಂ ಪಗಲೋಳ್ ರಾತ್ರಿಯೊಳ್ ।
ಪೊಂದಿ ನಿಜ ರೂಪವನಾ ಪ್ರಾಂತ
ಸುಂದರ ಜನಂಗಳ ಪಿಡಿಯುತ್ತೆ
ತಿಂದು ತೇಗುತಲಿರ್ದರಿದನರಿಯುತ್ತೆ ತದ್ಗುರುವು ॥ ೯೩ ॥

ಮುದದೊಳೊರ್ಮೆಯದೇ ವೃಕ್ಷದೆಡೆ-
ಗೊದವಿದ ಶಿವಧ್ಯಾನದಿಂದ್ಯೈ-
ದಿದನಾ ಪರಮ ಸರ್ವಜ್ಞನಾತನ ರಾಕ್ಷಸರುರೆ |
ಪೊದೆದು ಪಿಡಿಯಲ್ ಧಾವಿಸಿ ಬರಲ್
ತದಮಳಿನ ದರ್ಶನ ಮಾತ್ರದಿಂ
ಪುದಿದ ರಾಕ್ಷಸ ವೃತ್ತಿಯಡಗಲ್ ವಂದಿಸಿದರವಗೆ ॥ ೯೪ ॥

ಅವರನೀಕ್ಷಿಸಿ ರೇಣುಕಾರ್ಯಂ
ತವೆಯವಗ್ಗೆ ಪೇಳಿದನೆಂತೆನಲ್
ಸುವಿನಯರೆ ನಿಮ್ಮೊಳಗೋರ್ವನಾ ಮಾಸನೂರ್ಕೆರೆಯೊಳ್ |
ಜವದೊಳಸಿಯಾಗುತೆ ನೆಲೆಸುವದು
ನವ ಖಡ್ಗವಾಗುತೆ ಮತ್ತೋರ್ವ-
ನವಿರತಮೆಮ್ಮ ಹಸ್ತದೊಳಿರ್ಪುದೆಂದಾಜ್ಞಾಪಿಸೆ ॥ ೯೫ ॥

ಅಪ್ಪಣೆಯಂತೆ ವಂದಿಸುತೋರ್ವ-
ನಪ್ಪಿದ ಮುದದೆ ಕೆರೆಗೈದಿದಂ
ತಪ್ಪದಲೆ ಮತ್ತೋರ್ವನಿಹನಶಿಯಾಗಿ ತತ್ಕರದೆ |
ಒಪ್ಪುವ ಗಗನ ಮಾರ್ಗದೆ ಪೋಗು-
ತೊಪ್ಪಿರುವ ಉಜ್ಜಯನಿಯ ರಾಜ-
ಗೊಪ್ಪಿಸಿದನವನಾಗ್ರಹಕಾಗಿ ಖಡ್ಗಮಂ ಗುರುವು ॥ ೯೬ ॥

ಒಲೆದು ರುದ್ರಾಕ್ಷಿಗಳ ಧಃಪರ-
ನೆಲೆಯರಿಯದೆ ಪ್ರಯೋಗಿಸಲೊಡನೆ
ತೊಲಗಿ ಗಂಧರ್ವಂ ತಾನಾಗುತಸಿ ಪೋಪುದೆಂದು |
ಕಲಿಯಹ ವಿಕ್ರಮಾರ್ಕ ನೃಪಂಗೆ
ನಲಿದೊರೆದು ರೇಣುಕ ಜಗದ್ಗುರು
ವೊಲವಿಂ ಭಕ್ತರುದ್ಧಾರಮಂ ಗೆಯ್ಯುತೆ ನಡೆದನು ॥ ೯೭ ॥

ಗುರುವಿಂದೆ ದೊರೆದುದಾ ಖಡ್ಗದಿಂ-
ದುರು ಎಶವ ಪಡೆದಿಪನಾ ನೃಪಂ
ಪರಿಕಿಸದೆ ರುದ್ರಾಕ್ಷಿಯ ಧರಿಪರ ಮೇಲೆ ಮರೆದು |
ನೆರೆ ಪ್ರಯೋಗಿಸಲೆಂದು ಪಿಡಿಯ-
ಲ್ಪರವ ನಪ್ಪಣೆಯಂತೆ ತದಸಿಯು
ತೆರಳ್ವುದು ತನ್ನ ಚರಿತವ ಪೇಳ್ದು ಗಂಧರ್ವನಾಗಿ || ೯೮ ||

ಮೂಸನೂರ್ಕೆರೆಯಲ್ಲಿಸೆದಿರುವ
ಭಾಸುರ ಖಡ್ಗ ಕೀರ್ತ್ತಿಯ ಕೇಳಿ
ಘಾಸಿಯಾದರನೇಕ ರಾಜರ್ ತದ್ವಶ ಯತ್ನದೆ |
ಏಸು ಮಂದಿಯುಸಿರ್ದಡುಂ ಹ-
ವ್ಯಾಸಮಂ ಬಿಡಲದಕೋರ್ವಂ
ಬೇಸರಿಯದುರೆ ಯತ್ನಿಸುತಿಹಂ ವೀರ ಬಿಜ್ಜಳನು || ೯೯ ||

ಖರ್ಪರನೆಂಬುವೋರ್ವ ಜೋಗಿಯು
ಕಾರ್ಪಣ್ಯದಿಂ ಪೇಳಿದನಿಂತು
ಕರ್ಪಿರದ ಪನ್ನೊಂದು ಸಹಸ್ರ ಕನ್ಯೆಯರ ಬಲಿಯ |
ತರ್ಪಣಕೆ ನೀಂ ಕೊಟ್ಟೊಡಿದನಾ-
ನರ್ಪಿಪೆಂ ನಿನಗೆಂದೆನೆ ನೃಪಂ
ಕೂರ್ಪಿನಿಂದುರೆ ಸಿದ್ಧನಹನಾಡಂಬರವ ನೋಡಿ || ೧೦೦ ||

ಕೂಡಿಸಲ್ ತೊಡಗಿದಂ ಪೆಣ್ಗಳ
ನೋಡುತೇಕಾದಶ ಸಹಸ್ರದ
ನಾಡೆ ಸಂಖ್ಯೆಗನೋರ್ವ ಕನ್ಯೆಯುವಶ್ಯಕತೆಯಿರಲು |
ಮಾಡಿ ಶೋಧವನೆಳೆದು ತಂದರ್
ಕೂಡಿದ ಚರರೊಬ್ಬ ಕನ್ನಿಕೆಯ
ಕೂಡಿಹುದವಳ್ಗೆ ರೇವಣಾಂಬಿಕೆಯೆಂಬ ಗುರುನಾಮಂ || ೧೦೧ ||

ಗುರುಭಕ್ತಿಯುವಳ್ಗೀ ಪೆಸರಿಂದೆ
ನೆರೆ ಸಹಜವೆುನೆ ಮಾಡಲೆಂದುರು-
ತರಯುಕ್ತಿಯಿಂ ನಾಮುವಿದನಿಟ್ಟೆಹಳ್ ತಜ್ಜನನಿ |
ಪರತರ ಜಗದ್ಗುರುವಿನ ಕಥೆಯು-
ನರಿದಿರ್ದಳಾ ಬಾಲೆ ಮಾತೆಯು-
ಮರಿವು ಮಾಡಲ್ ಮಾಡಲಾದಳ್ ಗುರುವರ ಭಜನೆಯು ॥ ೧೦೨ ॥

ರೇವಣಾಂಬೆಯು ನೋಡುತೆಲ್ಲರ್
ರೇವಣಸಿದ್ಧ ನಾಮ ಭಜನೆಯು-
ನೋವಿ ಮಾಡ ತೊಡಂಗಿದರ್ ತನ್ಮಾತೃ ಪಿತೃಗಳುಂ |
ಭಾವ ಭಕ್ತಿಯ ನುತಿಗೆ ಮೆಚ್ಚುತೆ
ಧಾವಿಸುತಲಲ್ಲಿಗೆ ಬಂದು ತ-
ದ್ದೇವ ವಂದಿತ ರೇಣುಕನವರ್ಗೆ ದರ್ಶನವಿತ್ತನು ॥ ೧೦೩ ॥

ತತ್ಸಮಾಗಮದಿಂ ಖರ್ಪರನ
ಮತ್ಸರವೀಮಹಂಕಾರಮಳಿ-
ದುತ್ಸಾಹಮಳಿಯಿತ್ತು ನರನಾಡಿಗಳು ಸೇದಿದವು |
ಚಿತ್ಸುಧಾರಕ ರೇಣುಕಾರ್ಯನ
ಪತ್ಸರೋಜಕೆ ಮಣಿಯುತಲವಂ
ಸತ್ಸಹಾಯನ ನುತಿಸಿ ತನ್ನಯ ತಾಪವ ನೀಗಿದಂ ॥ ೧೦೪ ॥

ರಾಜನರಿಯುತೆ ತತ್ಸಮಸ್ತವ
ನ್ನೈಜ ಭಕ್ತಿಯೊಳೈದಿ ಗುರುವಿನ
ತೇಜವ ಕಂಡು ನಮಿಸಿ ನುತಿಸುತೆ ಕ್ಷಮೆಯ ಯಾಚಿಸುತೆ
ರಾಜಿಪ ಕನ್ಯೆಯರ ತದ್ಗೃಹಕೆ
ಮೋಜಿನಿಂ ಕಳುಹಿಸಿ ಗುರುಪದ ಸ-
ರೋಜಕೆ ಮಣಿದು ವಿನಯದಿಂ ತತ್ಪಡ್ಗವ ಬೇಡಿದಂ ॥ ೧೦೫ ॥

ರೇವಣಸಿದ್ಧ ಗುರುವದನರಿದು
ಭಾವುಕ ವೀರ ಬಜ್ಜಳ ನೃಪಂ-
ಗೋವಿ ನುಡಿದಂ ಜನಪ ನೀನಾ ಚಿಂತೆಯ ಮರೆವುದು |
ಶೀವಿದುತ್ಸಾಹವ ಬಿಡು ನಿನಗೆ
ಕೋವಿದನೆ ಪಿಡಿಯುವ ಯೋಗ್ಯತೆಯು
ಭಾವಿಸಲ್ಕಿಲ್ಲಂ ನಡೆ ತೋರ್ಪೆನೆಂದು ಕೆರೆಗೈದಿ || ೧೦೬ ||

ದಡ ದಡನೆ ನೀರೊಳ್ ಪೋಗುತಂ
ಕಡುಗಮಂ ಸೆಳೆತಂದು ನೃಪಂಗೆ
ಮೃಡರೂಪನೀಯಲ್ಕೆ ರಾಜಂ ಮುಟ್ಟಲಾ ಖಡ್ಗಂ |
ಕಡುಹಿನ ಸರ್ಪವಾಗಿ ಭುಸ್ಸೆನ-
ಲೊಡನೆ ಧಾವಿಸಲಾದನಾತಂ
ತಡೆಯದೆ ಪಾವು ಬೆಂಬತ್ತಿದುದು ನೃಪತಿಯು ಬೆದರುತೆ || ೧೦೭ ||

ರೇಣುಕ ಜಗದ್ಗುರುವರನಡಿಗೆ
ಜಾಣತನದಿಂ ಬಂದೆರಗಿದಂ
ಕಾಣುತಂ ತನ್ನಿರಹಂಕೃತಿಯ ಶಿವಾಕ್ಷಿಯು ಸರ್ಪಕೆ |
ಪಾಣಿಯಿಂ ಮುಟ್ಟಿಸಲೊಡನದುಂ
ವಾಣಿಯಿಂ ನುತಿಸಲ್ಕರಿದೆನಿಸು-
ತೂಣೆ ಇಲ್ಲದ ಗಂಧರ್ವ ತನುವಂ ಧರಿಸೆರಗಿತು || ೧೦೮ ||

ಈ ಮಹತ್ವವ ಕಂಡಚ್ಚರಿಸಿ
ಸೋಮಧರ ರೂಪಂಗೆ ನಮಿಸುತೆ
ರಾಮಣೀಯಕವಾದ ಚರಿತವಿದೇನೆಂದು ಕೇಳೆ |
ಕಾಮಿತವನರಿದಿಂತು ಪೇಳ್ದಂ
ನೇಮದಿಂ ಕೇಳ್ ನೃಪತಿಯೀರ್ವ-
ರ್ವಾಮದೇವ ಮುನೀಪ ಶಾಪದಿನಪಕೃತಿಯು ಫಲದೆ || ೧೦೯ ||

ರಕ್ಕಸರಾಗಿ ಬಾಳುತಿರ್ದರ್
ವಿ ಕ್ಕಿ ಜನರಂ ಪೀಡಿಸುತಿಹರ್
ಸೊಕ್ಕಿ ಪಗಲೋಳ್ ತಿಗುಣಿಗಳಾಗಿ ಗಿಡವೊಳಿಪರಡಗಿ |
ಮುಕ್ಕಣ್ಣನುರು ಕರುಣೆಯಿಂದಾ-
ನಕ್ಕರೆಯೊಳಿವರಂ ಕಾಣುತ್ತೆ
ತಕ್ಕೆರಡು ಖಡ್ಗಗಳ ಮಾಡಿಲ್ಲಿರಿಸಿರ್ದೆನೊಂದಂ || ೧೧೦ ||

ರುದ್ರಾಕ್ಷ ಮಹಿಮಾ ವಿಶೇಷದೆ
ಕ್ಷುದ್ರಾಘಮಂ ನೀಗುತಲದುರೆ
ಭದ್ರಾಕೃತಿಯು ತಳೆದು ಗಂಧರ್ವೋರ್ವಿಯನ್ನೈದಿತು |
ರುದ್ರ ಪ್ರಮಥನೀ ನುಡಿಯರಿದು
ತಂದ್ರಾಜನುರು ಭಕ್ತಿಯಿಂ ಶಿವಂ
ಮುದ್ರಾಂಕಿತಂ ತಾನಾಗಿಹಂ ದೀಕ್ಷೆಯುಂ ಪಡೆದು || ೧೧೧ ||

ಶಂಭುಲಿಂಗಾರ್ಯಂ ವಂದಿಸುತೆ
ಶಂಭು ರೂಪವನಿಂತು ಕೇಳ್ದಂ
ಕುಂಭಜಂಗಾ ರೇಣುಕ ಗುರುವು ಪೇಳ್ದ ಮಂತ್ರದುರೆ |
ಶುಂಭನಾದೆನಗೊರೆ ಮಹತ್ವವ-
ನಾಂ, ಭವವ ನೀಗುವೆನರಿದು ಸಲೆ
ಶಾಂಭವ ಷಡಕ್ಷರ ಮನು ಜಪವ ಮಾಡಿ ಗುರುವರನೆ || ೧೧೨ ||

ಗುರುವೊರೆದನಿಂತಯ್ಯ ಶಿಷ್ಯನೆ
ಸರಸವಾದುಚಿತ ಪ್ರಶ್ನಮಂ
ನೆರೆ ಗೈದಿರುವೆ ನೀನೆನಗೀಗಳೊರೆವೆನ್ನೈ ಕೇಳು |
ನಿರುತವೀ ಮಂತ್ರಂ ಜಗಕಮಿತ-
ತರ ಬೀಜವಾಗಿಹುದು ತಿಳಿದಿದ-
ನುರೆ ಜಪಿಸಬೇಕೈ ನೂರೆಂಟನಾದಡುಂ ದಿನದೆ || ೧೧೩ ||

ಮಾನಸ ವಾಚಕೋಪಾಂಶುಗಳ
ನೂನ ವಿಧಿಗಳ್ಮೂರಾಗಿಹವು
ನೀನರಿಯಯ್ಯ ಕ್ರಮದೆ ಪೇಳ್ವೆಂ ಶಂಭುಲಿಂಗಾರ್ಯ |
ಸ್ವಾನುರಾಗದೆ ಮನದೆ ನುಡಿವುದು
ಮಾನಸ ಜಪಂ ನಿನಗೆ ಕೇಳ್ವಂ-
ತೂನವಿಲ್ಲದ ನುಡಿ ವಾಚಕವುಪಾಂಶು ತುಟಿಮಿಸುಗೆ || ೧೧೪ ||

ಇವುಗಳೊಳ್ ಮಾನಸ ಜಪವುರಿಯೆ
ತವೆ ಶ್ರೇಷ್ಠವಾಗಿಹುದು ಜಗದೊಳ್
ಸುವಿವೇಕಿಗಳ್ ಪೇಳ್ವರಿದಕುರು ಮೋಕ್ಷ ಫಲವೆಂದು |
ತವಿಪ ಭೋಗಂ ವಾಚಕ ಜಪದೆ
ನವ ಭೋಗ ಮೋಕ್ಷಗಳ ಶಿದ್ಧಿಯು
ಭುವನದೊಳುಪಾಂಶುವಿನಿಂದಹುದು ನೀಂ ಚರಿಪುದರಿದು || ೧೧೫ ||

ಹಸ್ತ ಸಾಧನದಿಂ ಶಿವಾಕ್ಷಿಯ
ವಿಸ್ತರ ಕರಣದಿಂ ಸಂಖ್ಯೆಯಂ
ವಾಸ್ತವಿಕವಾಗಿಯೆ ಜೋಡಿಸುತೆ ಮಂತ್ರದರ್ಥವನೆ |
ವಾಸ್ತವವಾಗಿ ಧ್ಯಾನಿಸುತ್ತಲಿ
ವಸ್ತುಗಳನೇನೊಂದು ನೆನೆಯದೆ
ನಿಸ್ತುಲ ಸರಳಕಾಯದಿಂ ಕುಳ್ಳಿರ್ದು ಜಪಿಸುವದು || ೧೧೬ ||

ಚರಿಸಿ ಸ್ನಾನವ ಮತ್ತೆ ಭಸಿತವ
ಧರಿಸಿ ಸ್ನಾನೋದ್ಧೂಲನವೆಸಗು-
ತುರು ರುದ್ರಾಕ್ಷಗಳ ಧರಿಸುತ್ತೆ ನ್ಯಾಸವಂ ಗೆಯ್ದು |
ನೆರೆ ದಿಗ್ಬಂಧನವ ಚರಿಸುತ್ತೆ
ಕರಪೂಜೆಯಂ ಮಾಡಿಕೊಳ್ಳುತೆ
ವರಲಿಂಗಮಂ ಪಿಡಿದುಕೊಳ್ಳುತೆ ಜಪಿಪುದು ಮಂತ್ರವ || ೧೧೭ ||

ಧ್ಯಾನಕಿಲ್ಲಮಿವಾವು ವಿಧಿಗಳ್
ಸೂನುವೆ ಲಿಂಗವೊಂದಿರೆ ಸಾಲ್ಗ-
ನೂನ ಮಂತ್ರಂ ಸಿದ್ಧಿಪುದು ಕೇಳಿದಕೊಂದು ಕಥೆಯು |
ಜ್ಞಾನಿಗಳರಸನೇಕೋರಾಮು-
ನಾನತ ಶಿಷ್ಯರಿವನ ಕೃಪೆಯಿಂ
ಮಾನಿತರಾಗುತಿರ್ದರದನಾನಿಲ್ಲಿ ಬಣ್ಣಿಪೆನು || ೧೧೮ ||

ಭಕ್ತರಾಗದ ಜನತೆಯನವಂ
ಯುಕ್ತರಂ ಗೆಯ್ಯುತಲಿರ್ದಪಂ
ಶಕ್ತನಾಗಿರ್ದಡು ಮಾವುಹಾ ಮನುವ ಧ್ಯಾನಿಪನು |
ಯುಕ್ತಿಯಿಂದವನೊರೆಯುತಿರ್ದಂ
ರಕ್ತಿಯಿಂ ಮಂತ್ರಾದಿ ದೈವದ
ಶಕ್ತಿಯಂ ತನ್ಮಂತ್ರ ಮೂರ್ತಿಯು ಮಹಿಮೆಯ ತೋರುತೆ || ೧೧೯ ||

ಗುರುವರ್ಯನೀತಂ ಕೇದಾರ
ವರಲಿಂಗದಿಂದುದ್ಭವಿಸುತುರು-
ತರ ಪೀಠಮಂ ಸ್ಥಾಪಿಸುತ್ತಂ ಮೆರೆದಿಹನೀತನು |
ಪುರಕಲ್ಯಾಣದೊಳಿರ್ಪಾಗ-
ಳುರೆ ಮಹೇಶಾಲಯದೊಳಗಿರುವ
ನೆರೆಸಮಯದೊಳಗೋರ್ವ ಮನುಜಂ ವಂದಿಸದಿರ್ದನು || ೧೨೦ ||

ಜಗದಾಚಾರ್ಯನದನೀಕ್ಷಿಸುತೆ
ಬಗೆಬಗೆಯಲ್ಲಿ ಶಿವನಧಿಕತೆಯ-
ಮಿಗೆ ಪೇಳ್ದಡುಂ ಸಮ್ಮತಿಸದಿರಲಿಂತು ಬೆಸಸಿದನು |
ಸೊಗವಾಗದೈ ನಿನಗೆ ಶಿವನೀ
ಮಿಗಿಲಾದ ಗುಡಿಗೈದೆರಗದಿರೆ
ಸುಗುಣಮಂ ಕಲಿಸುವನೆಲ್ಲಂಗೆ ತವಶಿರವ ತರೆದು || ೧೨೧ ||

ಎನಲಾ ಮನುಜನಿಂತೆಂದನೈ-
ಯನಘ ನಿನ್ನ ಶಿರವಂ ಮೊದಲು
ಜನರೊಪ್ಪುವಂದದೆ ಕಡಿದುಕೊಂಡದನಿರ್ದಂತೆಯೆೞ ।
ಬಿನದದಿಂದಂಟಿಸಿ ಕೊಂಡೊಡಾಂ
ವಿನುತನೆಂದುರೆ ತವ ಮತಕೆನ್ನ
ಜನತೆಯೊಂದಿಗೆ ಸೇರುವೆನನಲ್ಕೇಕೋರಾಮನು ॥ ೧೨೨ ॥

ಪದ್ಧತಿಯಂತೆ ಪಂಚಾಕ್ಷರಿಯ
ಸಿದ್ಧಗುರುವಾಗಳೆ ಜಪಿಸುತ್ತೆ
ಸಿದ್ಧತೆಯಿಂದೆ ತನ್ನ ಶಿರವಂ ಕಡಿದು ಕೈಯೊಳಗೆ ।
ಶುದ್ಧನಲ್ಲಿಂದೂರೊಳಗಲೆದು
ಶುದ್ಧ ಶಿವಧರ್ಮವ ಭೋಧಿಸುತೆ
ಶುದ್ಧಿಯಿಂದಾ ಗುಡಿಗೈದಿ ತಲೆಯಂ ಜೋಡಿಸಿದನು । ॥ ೧೨೩ ॥

ಈ ಚರಿತಮಂ ಕಂಡು ಮನುಜಂ
ನೀಚತನವಂ ತೊರೆದು ಲಜ್ಜೆಯ
ಸೂಚಿಸುವ ಮಾತುಗಳಿಂದೆ ನುತಿಸುತ್ತೆ ಭಕ್ತಿಯೊಳೆ ।
ಖೇಚರರ್ ನುತಿಸುತಿರೆ ದುರ್ಭವ-
ಮೋಚನದ ಶಿವದೀಕ್ಷೆಯಂ ಕಾ-
ಲೋಚಿತೋಕ್ತಿಯನಾಡಿ ಬಂಧುಗಳೊಡನೆ ಪೊಂದಿದನು ॥ ೧೨೪ ॥

ಇದುವೆ ಮಂತ್ರದ ಮಹಿಮೆಯೀಗಳ್
ಪದತೀರ್ಥ ಮಾಹಾತ್ಮ್ಯವ ಸುತಗೆ
ಸದಮಲಂ ಸದ್ಗುರುವೊರೆಯಲ್ ತೊಡಂಗಿದನೆಂತೆನೆ ।
ಪದಪಿಂದೆ ಕಾರುಣ್ಯರಸಮುರೆ
ಪುದಿದ ನೇತ್ರಂಗಳ್ ಮಿನುಗುತಿರೆ
ಪೊಡೆದು ನೋಡುತೆ ನಿಗಮಾಗಮಜ್ಞರ್ ಸಮ್ಮತಿಸಲು ॥ ೧೨೫ ॥

ಕೇಳೈ ಮಗನೆ ಜಲಮವಶ್ಯಂ
ಬಾಳುವದಕಾದುದರಿಂದೆ ತಿಳಿ
ಬಾಳು ಬೇಕೈ ಮನುಜಂಗೆ ಪ್ರಾಣಿಯು ಬಾಳು ಬೇಡ ।
ತಾಳಿ ಭಕ್ತಿಯು ಕುಡಿವ ನೀರಂ
ಭಾಳಲೋಚನನೆಂದು ಲಿಂಗವ
ಮೇಳೈಸಿಕೊಳ್ಳುವದರ್ಪಿಸುತೆ ಗುರುಚರರಿರದಿರೆ ॥ ೧೬ ॥

ಗುರುವಿರಲಿ ಜಂಗಮನಿರಲವರ
ಚರಣಮಂ ಪೂಜಿಸುತೆ ವಾರಿಯು-
ನೆರೆಯುತ್ತೆ ಲಿಂಗಕೆ ಮುಟ್ಟಿಸುತೆಕೊಳ್ವುದು ಭಕ್ತಿಯೋಳ್ ।
ನೆರೆ ತೀರ್ಥವಿದು ಪಾದೋದಕಂ
ವರ ಕೋಟಿ ತೀರ್ಥಂಗಳಿಗೆ ಮಿಗಿ-
ಲರಿದಿದಕೆ ಸಮನಿಲ್ಲೆಂದು ಸೇವಿಪುದು ಶ್ರದ್ಧೆಯೊಳೆ ॥ ೧೭ ॥

ಇದಕೊಂದು ಚರಿತವನಾಂ ಪೇಳ್ವೆ-
ನದನಾಲಿಸೈ ಕಾಶೀಪುರದೆ
ಮುದದೊಳಿರುತಿರ್ದಂ ಪಂಡಿತಾರಾಧ್ಯ ಜಗದ್ಗುರು ।
ಸದಯನಾತಂ ಹರನಘೋರ ಮು-
ಖದೊಳುದಿಸಿ ಶ್ರೀಶೈಲ ಲಿಂಗದ
ವದನದಿಂದಿಹಕಿಳಿದು ಪೀಠವ ರಚಿಸಿ ಶ್ರೀಗಿರಿಯೋಳ್ ॥ ೧೮ ॥

ಲೀಲೆಗಳನಲ್ಲಲ್ಲಿ ಗೆಯ್ಯುತೆ
ಫಾಲ ನೇತ್ರ ಸಮಾನನಿಲ್ಲಿಗೆ
ಕಾಲ ಕಾಲನ ಮಹಿಮೆಯುಂ ಬಿತ್ತರಿಸಲೈದಿರ್ದಂ ।
ಕಾಲಮಂ ಮೀರದಲೆ ಸಭೆಗಳ-
ನೋಲಯಿಸಿ ನಡೆಯಿಸುತೆ ಶಿವ ಮಹಿ-
ಮಾಲಿಯ ಬಣ್ಣಿಸುತೆ ಶಿವನಾಧಿಕ್ಯವ ಸ್ಥಾಪಿಸಿ ॥ ೧೯ ॥

ಒಂದು ದಿನವೋರ್ವಂ ಸುಭಕ್ತಂ
ಬಂದು ಧೂಳಪದೋದಕವ ಕೊಂ-
ಡಂದದಿಂ ಮುಡಿಯಿಂದೆ ಪೋಗುವ ಕಾಲದೆ ನಿಂದಕಂ |
ಮಂದ ಮನುಜಂ ಮುಟ್ಟಿ ಕಸಿದಿದ-
ನಂದು ಚಲ್ಲಿದನೇನೊರೆದೊಡಂ
ನಿಂದಿಸುತಿರ್ದನಾ ಕ್ಷಣದೊಳಾತನ ನೇತ್ರಂಗಳು || ೧೩೦ ||

ಸಿಂಗಿದವು ತತ್‌ಕ್ಷಣದಲ್ಲಿ ತ-
ತ್ತುಂಗ ಬಂಧುಗಳಾ ಗುರುವರನ-
ನಿಂಗಿತಜ್ಞರ್ ಪೊಂದುತವನೊಡನುರೆ ಪ್ರಾರ್ಥಿಸಿದರು |
ಸಿಂಗರದೊಳಾ ಪಂಡಿತಾರ್ಯಂ
ಭಂಗರಹಿತ ಪದೋದಕವ ಸಲೆ
ಸಿಂಗಿದಕ್ಷಿಗಳೊಳ್ ಸಿಂಚಿಸಲ್ಕಾಣಲಾದವವು || ೧೩೧ ||

ಎಲ್ಲರಚ್ಚರಿಗೊಂಡು ನುತಿಸುತೆ
ಬಲ್ಲವರಾಗಿ ಶಿವತತ್ವಮಂ
ಸಲ್ಲಲಿತ ಶಿವದೀಕ್ಷೆಯಂ ಪೊಂದುತ್ತಲವನಿಂದೆ |
ಉಲ್ಲಸಿತ ಶಿವಭಕ್ತರಾದರ್
ನಿಲ್ಲದಲೆ ತದ್ವಾರ್ತೆಯ ಕೇಳ್ದು
ಕ್ಷುಲ್ಲಕರ್ ಸಭೆಯಲ್ಲಿ ಹರನಂ ನಿಂದಿಸತೊಡಗಿದರ್ || ೧೩೨ ||

ಹರಿಯು ಹರನಂ ಯಜಿಸಿದ ಕಥೆಯು
ಗುರುವರಂ ಸಭೆಯಲ್ಲಿ ಪೇಳಲ್
ಸರಸದಿಂದವರೆಂದರಾ ಪಂಡಿತ ಗುರೂತ್ತಮಗೆ |
ವಿರಸಮೇತಕೆ ಸತ್ಯಮಾಗಿಪ
ನೆರೆ ಯೋಗ್ಯತೆಯು ನಿಮಗಿರ್ದೊಡಿದ-
ನೊರೆವುದೆನುತಿರೆ ಶಿವನ ಪೂಜೆಯ ಗೆಯ್ಸಿದಂ ಹರಿಯಿಂ || ೧೩೩ ||

ಎಲ್ಲರದನೀಕ್ಷಿಸುತೆ ಭಕ್ತಿಯು–
ಸುಲ್ಲಸದೆ ತಳೆಯುತ್ತೆ ದೀಕ್ಷೆಯು–
ಸುಲ್ಲಸಿತ ಮನದಿಂದೆ ಪೊಂದಿದರಾ ಗುರುವಿಂದಲೆ |
ಸೊಲ್ಲಿಸುತೆ ತೀರ್ಥದ ಮಹಿಮೆಯಂ
ಸಲ್ಲಲಿತವಾಗಿಹ ಪ್ರಸಾದವ–
ನಲ್ಲಿ ಬೋಧಿಸಿದಂ ಶಂಭುಲಿಂಗಾರ್ಯಗಾ ಗುರುವು || ೧೩೪ ||

ಲಿಂಗಕೆ ನಿವೇದಿಸುತೆ ಕೊಂಡೊಡೆ
ಭಂಗವಿರಹಿತ ಸುಪ್ರಸಾದಂ
ತುಂಗವಿುದನರಿಯುತ್ತೆ ಕೊಳ್ವನೆ ಶಿವಯೋಗಿಯುಹಸು |
ಅಂಗ ಭಾವಂ ತೊಲಗುವದು ಸಲೆ
ಮಂಗಲದ ಸಿದ್ಧ ಪ್ರಸಾದಂ
ಜಂಗಮದಿಂದೆ ದೊರೆದೊಡೆ ಪ್ರಸಿದ್ಧ ಪ್ರಸಾದಮದು || ೧೩೫ ||

ಗುರುವಿಂದದುಂ ದೊರಕೊಳಲಾಗ–
ಳುರೆ ಶುದ್ಧ ಪ್ರಸಾದವೆನಿಪುದು
ಗುರುಚರರ ಹಸ್ತಾತ್ಕ್ಷಿ ವಾಕ್ಪಾದದೊಳದೊದಗುವದು |
ಅರಿಯಲಿದು ಸಾಮಾನ್ಯಮೆನಿಸುವ–
ದುರು ವಿಶೇಷಂ ಚಿದ್ದೀಕ್ಷೆಯಂ
ಸರಸದಿಂ ಪಡೆಪವರಿಗಿದು ಲಭಿಸುವದು ಕೇಳ್ಮಗನೆ || ೧೩೬ ||

ಇದಕೊಂದು ಚರಿತವನೊರೆವೆನಾಂ
ಸದಮಳಿನ ಭಾವದಿನಾಲಿಸೈ
ಸದಯುಮನನೀಶ್ವರನೀಶಾನ ವದನೋದ್ಭೂತನು |
ಮುದಿತ ವಿಶ್ವಾರಾಧ್ಯಾಂಭಿಧಂ
ಪದಪಿನ ಜಗದ್ಗುರುವರನಿವಂ
ಪದುಳ್ದು ಕಾಶೀ ವಿಶ್ವನಾಥ ಸುಲಿಂಗಾವತಾರಿ || ೧೩೭ ||

ಇವನ ಪಾದಂ ಸೋಂಕಿದುದೆಲ್ಲ-
ಮಿವನ ವಾಣಿಯು ಮುಟ್ಟಿದುದೆಲ್ಲ-
ಮಿವನ ನೇತ್ರಂ ನೋಡಿದುದೆಲ್ಲಮರಿದು ವಿಚಾರಿಸೆ |
ಇವನ ಮನಂ ವಿಚಾರಿಪುದೆಲ್ಲ-
ಮಿವನ ಬುದ್ಧಿಯು ತಿಳಿಯುವದೆಲ್ಲ-
ಮಿವನ ಚಿತ್ತಂ ನೆನೆಯುವದೆಲ್ಲಂ ಸುಪ್ರಸಾದಮದು ‖ ೧೩೮ ‖

ಕಾಶಿಯೋಳ್ ಪೀಠವ ನೆಲೆಗೊಳಿಸಿ
ನಾಶ ವಿರಹಿತ ಲಿಂಗಿ ಧರ್ಮಮ-
ನೀಶನಪ್ಪಣೆಯಂತೆ ಸ್ಥಾಪಿಸುತಲ್ಲಿ ಮೆರೆದಿಹನು |
ಆಶಿಸುತಲೀತನ ದರ್ಶನವ
ಪಾಶಮಂ ನೀಗುವರ್ಕೊಳ್ಳುತೆ
ಕೇಶವಾದಿಗಳಿವನ ಕೃಪಾಪ್ರಸಾದವ ಬಯಸುತೆ ‖ ೧೩೯ ‖

ಪರಮ ವಿಶ್ವಾರಾಧ್ಯ ಶಿಷ್ಯಂ
ನರಪ ಕಾಶೀ ರಾಜನಾಗಳ್
ಸುರಪತಿಗೆ ಮಿಗಿಲಾದ ಶೌರ್ಯದ ಸುಗುಣಮಂ ಮತ್ತೆ |
ಶಿರಿಯು ಪಡೆಯುತೆ ರಾಜಿಸಿರ್ದಂ
ಸರಸದಿಂ ತನ್ಮೂರ್ರ್ತಿಯ ಮಾಡಿ-
ಸಿಂಸಿ ಕನಕದ ಪೀಠದ ಮೇಲೆಯುದರ ದರ್ಶನವ ‖ ೧೪೦ ‖

ಕೊಳ್ಳುತಿರ್ದಂ ಲಿಂಗಾಂಗಿಯಿವ-
ನೊಳ್ಪಿದಂ ಗುರುಭಕ್ತಿಯಿಂದಲೆ
ತಳ್ಳಿದಂ ಮದಮಾತ್ಸರ್ಯಾದಿ ಸರ್ವ ದುರ್ಗುಣವ |
ಸುಳ್ಳಲ್ಲಮೀತನ ವೈಭವಮ-
ನೆಳ್ಳನಿತು ಸೈರಿಸಲಾಗದಲೆ
ಕಳ್ಳತನದಿಂದಿಂದ್ರನವಮಾನಂಗೊಳಿಸಲಿವಗೆ ‖ ೧೪೧ ‖

ಪತ್ರವಮಂ ಬರೆಯುತ್ತೆ ತನ್ನ ಪ-
ವಿತ್ರ ಸಾರಥಿ ಕರದೊಳಿತ್ತ ಪ-
ವಿತ್ರ ಮಾನಸ ಶಕ್ರನರಸನ ಕರೆಯ ಕಳುಹಿದನು |
ಕರ್ತೃ ವಿಶ್ವಾರಾಧ್ಯನ ನೆನೆದು
ಸತ್ರದಿಂ ಸ್ವಗುರು ಪ್ರಸಾದವ
ವಿಚಿತ್ರನಿಹ ಸ್ವರ್ಗದ ರಾಜಧಾನಿಗೆ ಕೊಂಡು ತೆರಳ್ದಂ || ೧೪೨ ||

ಸುರಪುರ ಮಹಾದ್ವಾರದೊಳ್ ಕ-
ಟ್ಟಿರುವ ಚಮ್ಮಾವುಗೆಯ ಕಾಣುತೆ
ಗುರುವಿನ ಪ್ರಸಾದಕ್ಕೆ ನಮಿಸುತೆ ಸಾರಥಿಯನಿಳಿಸಿ |
ಸುರಥದಶ್ವಂಗಳ ಬೆನ್ನ ಚ-
ಪ್ಪರಿಸಲಾ ಕ್ಷಣದಲ್ಲಿ ಮೇಲಕೆ
ತುರುಗಂಗಳಾ ಶಂಧನವ ಕೊಂಡಾಗ ಪಾರಿದವು || ೧೪೩ ||

ದೇವತೆಗಳಚ್ಚರಿಯ ಪಡುತಿರೆ
ಭಾವಿಕಂ ಕಾಶೀ ನೃಪಾಲಂ
ಪಾವನ ಸುಪ್ರಸಾದ ಬಲದೊಳಪಾಯವಿಲ್ಲದಲೆ |
ಧಾವತೆಯಿಲ್ಲದಾ ಬಾಗಿಲದ
ಗೋಪುರದ ಮೇಲೇರಿಸಿಳಿಸುತೆ
ಭಾವುಕಾಶ್ವಂಗಳ ರಾಜ ಸದನವ ಪೊಂದಿಸಿದನು | || ೧೪೪ ||

ಇಂದಿರಂ ನಿರಹಂಭಾವದಿಂ-
ದಂದು ನಿರ್ಮತ್ಸರನಾಗಿ ಸಲೆ
ಸಂದಿದ ಪ್ರೇಮ ಭರದಿಂದೆ ಬಂದಪ್ಪಿಕೊಳ್ಳುತಲೆ |
ಅಂದದಿಂ ವೈಭವದಿಂದೆ ಕರೆ-
ತಂದು ತನ್ನರ್ಧಾಸನದಲ್ಲಿ
ಛಂದದಿಂ ಕುಳ್ಳಿರಿಸಿಕೊಳ್ಳುತೆ ಸ್ನೇಹ ಭಾವದೊಳೆ || ೧೪೫ ||

ಮಾತನಾಡಿದನಿಂತು ನೃಪವರ
ಸಾತಿಶಯ ಮೆನಲೆನಗೆ ನೀವುರೆ
ಖ್ಯಾತ ವಿ.ತ್ರರ್ ನಿಮ್ಮ ಸ್ನೇಹವ ಕಾಯ್ದು ಕೊಳಪನಿತು |
ಓತು ಪ್ರಮೂಥನಾನಾದೆಸೈ
ಈ ತೆರದೆ ವಿಕ್ರಮುವ ತೋರ್ದು ಮ-
ದಾತುರವ ಕಳೆದೆನ್ನ ಜ್ಞಾನಾಕ್ಷಿಯ ತೆರೆಯಿಸಿದಿರಿ || ೧೪೬ ||

ದೇವೇಂದ್ರ ನೀ ಭಾಷಣವ ಕೇ-
ಳ್ವಾ, ವೈವಿದ್ಯ ಕಲೆಯ ಬಲ್ಲ ಮ-
ಹಾ ವಿದ್ಯೆಗಳನರಿದ ಕಾಶಿಯ ನೃಪತಿಯಿಂತೆಂದಂ |
ದೇವಾಧಿಪನೆ ಬಲಮಿಲ್ಲೆನಗೆ
ಭಾವಾತೀತ ಗುರುಕರುಣೆಯಿದು
ಶೈವೌಜಸಮನೊಳಕೊಂಡಿರುವಷ್ಯೆ ಪ್ರಸಾದವಿದೆ || ೧೪೭ ||

ಎಂದು ಕಾಶೀಶಂ ನೆಲದ ಮೇ-
ಲೊಂಡಗಳಂ ಪ್ರಸಾದದಿಂ ತೆಗೆ-
ದಂದಿಡಲ್ ಚಿಂತಾಮಣಿಯಾಗಿ ಕಂಗೊಳಿಸಿತದುವೆ |
ಅಂದದಿಂದದನೀಕ್ಷಿಸುತೆ ಸುರ
ವೃಂದಮುಘೆಯನುತಾಗ ಪೂಮಳೆ-
ಯಿಂದೆ ಸತ್ಕರಿಸುತೆ ನುತಿಸುತಿರೆ ನಮಿಸಿದನಿಂದ್ರನು || ೧೪೮ ||

ಇಂತಿದು ಸುಪ್ರಸಾದ ಘನವೇ-
ಕಾಂತದೊಳ್ ಮನನಗೆಯ್ಯುತಿದ-
ನಂತದವರೆಗುಮಗಲದೆ ಒಡಿವುದರಿದು ನಿತ್ಯದೊಳೆ |
ಶಾಂತನೆಯಿಮಷ್ಟಾವರಣಂಗಗ-
ಳಂತರಿವುದಿವೆ ಧರ್ಮದಂಗಗ-
ಳಂತರಿಸದಿಮಕಾಚಾರ ಪಂಚಕವ ತಿಳಿಯುವದು || ೧೪೯ ||

ಸುಸದಾಚಾರ ಭೃತ್ಯಾಚಾರ
ಸುಶಿವಾಚಾರ ಲಿಂಗಾಚಾರ
ಸುಸುಖಪ್ರದ ಗಣಾಚಾರಮಾಚಾರವೈದುಮಿವೆ |
ಅಸಮರೊಪ್ಪುವ ಲಿಂಗಮತೀಯ
ರಸಮು ನೀತಿಯು ಪಂಚಾಚಾರ-
ಮುಸಮಾಕ್ಷ ಸ್ವರೂಪರೆನಿಸರಿವೈದಿಲ್ಲದಿರಲು || ೧೫೦ ||

ಹರಧರ್ಮವೆ ಸದಾಚಾರಮುದ-
ರುರು ಸೇವೆ ಭೃತ್ಯಾಚಾರಮಾ
ಪರಮನರಿವೆ ಶಿವಾಚಾರಮಿದು ಲಿಂಗವೆಂಬರಿವು |
ದೊರೆಯೆ ಲಿಂಗಾಚಾರಮುರೆ ಗುರು
ಚರಲಿಂಗ ಭಕ್ತರ ನಿಂದೆಯಂ
ನೆರೆ ಸಹಿಸದಿರ್ಪುದೆ ಗಣಾಚಾರಂ ತಿಳಿದು ನಡೆಸೈ | || ೧೫೧ ||

ವೇಮನಾರ್ಯಂ ಸದಾಚಾರದೆ
ರೇಮಯಂ ಭೃತ್ಯಾಚಾರದಿಂ
ಸೋಮನಾರ್ಯಂ ಶಿವಾಚಾರದೆ ಶಂಭುಲಿಂಗಾರ್ಯ |
ರಾಮಯಂ ಲಿಂಗಾಚಾರದಿಂ
ಭೀಮಾರ್ಯಂ ಗಣಾಚಾರದಿಂ
ಭೂಮಿಯೊಳ್ ಬಾಳ್ದಿಹರುಳಿದವಂ ಬಿಟ್ಟರೆನಬೇಡ || ೧೫೨ ||

ಅಷ್ಟಾವರಣಮಂಗಮೀ ಪಂ-
ಚೇಷ್ಟಾಚಾರಮಸುವಾಗಿರಲು
ಶಿಷ್ಟ ಪ್ರಿಯನೆ ನಿನಗೆಲ್ಲಿಹುದು ಕಾಮಾದಿ ಭಯವು |
ಸ್ಪಷ್ಟಂ ತಿಳಿದೊಡಿದಕ್ಕಾದಿಯು
ಕಷ್ಟಾತಿಶಯಹಾರಿ ಭಕ್ತಿಯು
ಭ್ರಷ್ಟತ್ವದಿಂ [illegible] ಭಕ್ತಿಯುತನೆ || ೧೫೩ ||

ಭಕ್ತಿಯಿಂದಲೆ ಭುಕ್ತಿಯಹುದೈ
ಭಕ್ತಿಯಿಂದಲೆ ಮುಕ್ತಿಯಹುದೈ
ಭಕ್ತಿಯಿಂದಲೆ ಶಕ್ತಿಯಹುದೈ ಸರ್ವ ಜೀವರ್ಗೆ ।
ಭಕ್ತಿಯಿಂದಲೆ ಸಕ್ತಿಯಹುದೈ
ಭಕ್ತಿಯಿಂದಲೆ ಯುಕ್ತಿಯಹುದೈ
ಭಕ್ತಿಗಸದಳವಾವುದಿಲ್ಲಂ ನಂಬು ಭಕ್ತಿಯನೆ । ॥ ೧೫೪ ॥

ಎಂದು ಮೌನವ ತಳೆಯೆ ಗುರುವರ-
ನಂದದಿಂದಾತಂಗೆ ಶಿಷ್ಯನ
ಮಂದ ಮುದದಿಂ ಗುರುವಿಂಗೆ ನಮಿಸುತ್ತೆ ಕೈಮುಗಿದು ।
ಛಂದದಿಂ ರೋಮಾಂಚಮುಣ್ಮಿರೆ
ಸಂದಿದುರುತರ ಭಕ್ತಿಯುತ್ಕಟ-
ದಿಂದೆ ನುತಿಸತೊಡಂಗಿದಂ ನೆರೆ ಶಂಭುಲಿಂಗಾಖ್ಯಂ ॥ ೧೫೫ ॥

ಪರಮ ಗುರುವರ ಚಿತ್ಸುಧಾಕರ
ಚಿರದಯಾಕರ ಸತ್ಸುಧಾಕರ
ಸ್ಥಿರ ಪರಾತ್ಪರ ನಿತ್ಯ ಭಾಸ್ವರ ಜಯಮಧೀಶ್ವರ ಭೋ ।
ಶರಣ ಶುಭಕರ ಭಕ್ತ ಹಿತಕರ
ದುರಿತ ಸಂಹರ ಶಿಷ್ಯ ಭವಹರ
ನರರೂಪಧರ ಶಿವಸಾಕಾರ ನತಮಂದಾರ ಭೋ ॥ ೧೫೬ ॥

ಶ್ರುತಿವಿತಾನಕೆ ಮೂಲವಾಗಿಹ
ವಿತತ ಷಡಕ್ಷರ ಮಂತ್ರದರ್ಥವ
ಮತಿಯೊಳುಳಿವಂದದಿ ಬೋಧಿಸುತೆ ಮಂತ್ರರೂಪತೆಯ ।
ಕ್ಷಿತಿಯೊಳುದಿಸಿರುವೆನಗೆ ನೀನಿ-
ತ್ತತಿಶಯುವೆನಲ್ ಲಿಂಗಾತ್ಮತೆಯ
ಸತತಮುಳಿಸದೆ ಗುರುವೆ ನಿನ್ನಿಂದಧಿಕರಾರೆನಗೆ ॥ ೧೫೭ ॥

ಎಂದು ನುತಿಸುತೆ ಚರಣದೆ ಬೀಳ್ದ
ಕಂದನನಪ್ಪಿ ಶಿರದೆ ಹಸ್ತವ
ಪೊಂದಿಸುತೆ ಮೊಗಮಂ ನೋಡಿ ಮಾತಾಡಿದನೆಂತೆನೆ |
ಇಂದುಧರನೀವಂ ಸುಖವ ಸುತ
ಕಂದುಗೊರಲನ ನುತಿಪುದನಿಶಂ
ಛಂದದಿಂ ಪೂಜ್ಯತೆಯಧಿಕೃತಿಯ ಕೊಟ್ಟನಿಂತೊರೆದು || ೧೫೮ ||

ಗುರುಶುಶ್ರೂಷೆಯಂ ಗೆಯ್ಯುತ್ತೆ
ಗುರುವಿನೋಳ್ ವಿದ್ಯೆಯ ಕಲಿಯುತ್ತೆ
ಗುರುಪಾದಪೂಜೆಯಃನೆಸಗುತ್ತೆ ಸುಶಿವಾನುಭವವ |
ಗುರುವಾಣಿಯಿಂದುರೆ ಕೇಳುತ್ತೆ
ಗುರುಭೋಧೆಯಂತಾಚರಿಸುತ್ತೆ
ಗುರುಲಿಂಗಾರ್ಚನೆಯ ನೋಡುತ್ತೆ ಸುಖದಿಂದಿರ್ದನು || ೧೫೯ ||

ಗದುಗಿನೋಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯಃದಲ್ಲಿ
ಮುದದೆ ಬರೆದ ಪುರಾಣದೋಳ್ ನಾಲ್ಕನೆಯ ಸಂಧಿಯಿದು|| || ೧೬೦ ||

ಅಂತು
ಸಂಧಿ ನಾಲ್ಕಕ್ಕಂ ಪದಗಳು ಎರಡುನೂರದೆಂಭತ್ಮೂರಕ್ಕಂ
ಮಂಗಲಂ

॥ ಶ್ರೀ ಗುರು ಬಸವಲಿಂಗಾಯನಮಃ ॥



# ಐದನೆಯ ಸಂಧಿಯು

ಗುರುವಿನಾಜ್ಞೆಯ ಪಡೆದಲ್ಲಲ್ಲಿ
ಮೆರೆವ ಸಂಸ್ಕೃತ ಶಾಲೆಗಳಲ್ಲಿ
ಮೆರೆದಭ್ಯಸಿಸುತಹೊರಿಗೈದುತೆ ತೊರೆದಂ ಲಗ್ನವ ॥ ಪಲ್ಲ ॥

ಧರೆಯ ಸಹನತೆಯಂ ಸ್ವಬುದ್ಧಿಯೊ-
ಳುರು ಜಲದ ವಿಮಲತೆಯ ಮಾನಸ-
ಕುರೆಯಗ್ನಿ ತೇಜವ ದೇಹದೊಳ್ ಶಿವ ದೇವದೇವ ।
ಮರುತದನುಕೂಲತೆಯನಾತ್ಮದೊ-
ಳರಿದು ಗಗನದ ಸ್ಥಿತಿಯ ಹೃದಯದೆ
ಹರನೆ ನೀನೆನ್ನನಿತ್ತು ಕರುಣಿಸಿ ಸತತಂ ರಕ್ಷಿಸು ॥ ೧ ॥

ಧರೆಯು ಕಂಪಿಪುದುಂಟೋರೋರ್ಮೆ-
ದುರೆ ಜಲಂ ಕದಡುವದೋರೋರ್ಮೆ
ಬಿರಿತು ಬೀಸುವದುಂಟೋರೋರ್ಮೆ ಗಾಳಿಯರಿಯಲ್ಕೆ |
ಚರಿತನಾಯಕ ಶಂಭುಲಿಂಗಂ
ಗುರುಸೇವೆಯೋಳ್ ಬೇಸರಿಯಲಿ-
ಲ್ಲರಿದೊರ್ಮೆಯಾದಡುಮಿವನಿಂದಲಧಿಕರಾರ್ ಕ್ಷಿತಿಯೋಳ್ || ೨ ||

ಸೇವೆಯಂ ಕ್ರಮದಿಂದೆ ಮಾಡುವ
ಭಾವಿಕನಾದ ಶಿಷ್ಯಂಗೆ ಗುರು-
ವೋವಿ ಶಿವ ಪೂಜೆಯ ವಿಧಾನವ ತಿಳುಹಿಸುತಲೊರೆದು |
ಭಾವುಕ ಮಂತ್ರ ಜಪದ ರೀತಿಯ
ಸಾವಧಾನದೆ ಮನುವಿನರ್ಥವ
ತೀವಿದ ಮುದದೊಳರುಹಿದಂ ಸಚ್ಚಿದಾನಂದಾಖ್ಯಂ || ೩ ||

ಲಿಂಗವನೋಲ್ವ ಕ್ರಮವನರುಹುತೆ
ಲಿಂಗದ ನೆಲೆಯ ಕಲೆಯ ತಿಳಿಸುತೆ
ಲಿಂಗಮಂ ಧ್ಯಾನಿಸುವ ವಿಧಿಯಂ ತಿಳಿಹಿಸುತೆ ಗುರುವು |
ಲಿಂಗ ರಚನೆಯ ಸ್ಥಿತಿಯನರುಪುತೆ
ಲಿಂಗ ಸಂಸ್ಕೃತಿ ಪರಿಯ ತಿಳುಪುತೆ
ಲಿಂಗ ಸಿದ್ಧನ ಮಾಡಿದಂ ತನ್ನಂತೆ ಸದ್ಗುರುವು || ೪ ||

ವೈದಿಕವ ಜ್ಯೋತಿಷವ ಕಲಿಸುತೆ
ವೇದ ವೇದಾಂತವನೋದಿಸುತೆ
ವಾದಕತೀತವಾದ ತತ್ವವ ಭೋಧಿಸುತೆ ಗುರುವು |
ಮೋದವ ಶಿವಾರ್ಚ್ಚೆಯೊಳೆ ತೋರುತೆ
ಖೇದವ ಶಿಷ್ಯನಿಂದೆ ಕಳೆಯುತೆ
ಮೇದಿನೀ ಜನ ಭವವ ಕಳೆಯುವ ರೀತಿಯ ತೋರ್ದನು || ೫ ||

ಇಂತು ತನ್ನೊಳಗಿದ್ದ ವಿದ್ಯೆಯು
ಶಾಂತಿಯಿಂ ಶಿಷ್ಯಂಗೊಲಿದಿತ್ತು
ಸ್ವಾಂತರಂಗಮ್ಮುದಿಸಲಪ್ಪಣೆಯಿತ್ತನೀ ತೆರದೆ |
ಶಾಂತನೆ ಚರಿಸುತಲ್ಲಲ್ಲಿ ನೀಂ
ಭ್ರಾಂತಿಯಿಲ್ಲದೆ ದೇವ ಭಾಷೆಯ-
ನಂತುಮಿನ್ನುಂ ಕಲಿಯ್ಯೆ ಶಾಲೆಗಳೊಳ್ ಪ್ರವೇಶಿಸಿ || ೬ ||

ಎಂಬ ಗುರುವಿನ ಮಾತನಾಲಿಸಿ
ತುಂಬಲಶ್ರುವು ನಯನಂಗಳೊಳ್
ಕುಂಬಿಡುತಲಾಚಾರ್ಯ ಪಾದದೆ ಶಂಭುಲಿಂಗಾರ್ಯಂ |
ತುಂಬಿದ ದುಃಖದಿಂದಿಂತೆಂದ-
ನಿಂಬುಗೊಳುತಿಹ ತಾಪವ ತಡೆಯೆ-
ನಂಬುಜಾಕ್ಷಪ್ರಿಯ ಸಮನೆ ನೀನೇಕೀಯಾಜ್ಞೆಯ || ೭ ||

ಮಾಡಿದ್ಯೆ ಪೇಳಾನೇನಿಂದು
ನಾಡೆಯುಪರಾಧವನೆಸಗಿದೇಂ
ಮೂಡಿಸಿಕೊಂಡು ದಯೆಯರೂಪವ ಕರುಣಾಸಾಗರಾ |
ಬೇಡ ತಂದೆಯೇ ಹೊರಹಾಕದಿ-
ರ್ನ್ನೋಡು ಕೃಪೆಯಿಂ ಸೇವೆಯ ಬಿಡಿಸಿ
ದೂಡದಿರಿವಿದ್ಯೆಯಕಾಂಕ್ಷೆಯನಗಿಲ್ಲ ಸದ್ಗುರುವೆ || ೮ ||

ಎಂದು ವಂದಿಸಿ ಕಂಣೀರ್ಗರೆವ
ನಂದನನ ಪಿಡಿದೆತ್ತಿ ಸದ್ಗುರು-
ವಂದದಿಂದೀ ನುಡಿಯನೊರೆದಂ ಮಗನೆ ಛಲವ ಬಿಡು |
ಕಂದನೆಯನ್ನನುಜ್ಞೆಯಂತಾ-
ನಂದದಿಂ ನೀಂ ನಡೆದುದಾದಡೆ
ಕಂದುಗೊರಲನ ಸಮನಪ್ಪೆಯ್ಯೆ ಮೀರದಿರಾಜ್ಞೆಯಾ || ೯ ||

ಗುರುವಿನೀ ವಚನವನಾಲಿಸುತೆ
ಸರಸರನೆ ಕಣ್ಣೀರ ವರೆಸುತೆ
ಚಿರ ದುಃಖಮುಂ ಸಹಿಸಿಕೊಳ್ಳುತಲಿಂತೊರೆದನವನು |
ಮರೆದೆನ್ನೈ ಪ್ರಭುವರ ದುಃಖಮುಂ
ನೆರೆ ನಿನ್ನಾಜ್ಞೆಯುಂ ಪಾಲಿಪುದೆ
ಪರಮ ಕರ್ತ್ತವ್ಯಮಿದೆನಗಹುದು ಕರವೆ-ಜ್ಚೈತ್ತಿನು || ೧೦ ||

ಎನುವ ಶಿಷ್ಯನನಪ್ಪಿಕೊಳ್ಳುತೆ
ಘನ ಮುದದೆ ಶಿರದೋಳ್ ಕರವಿರಿಸಿ
ಮನಸೊಳಾ ಶಿಷ್ಯನ ಹಿತವ ಸ್ಮರಿಸುತಲಿಂತೆಂದನು |
ಅನಘನೆ ಬ್ರಹ್ಮಚರ್ಯವ ಪಾಲಿ-
ಪನವರತ ವೋಜಂ ಬೆಳೆಯುವದು
ಪನಕಾದಿಗಳ್ ನಡಿಸಿದರಿದಂ ಬಸವಾಧ್ಯರೊಲೆದು || ೧೧ ||

ವೀರ್ಯವೆಂಬುದನರ್ಘ್ಯ ರತ್ನಂ
ಕಾರ್ಯಮನುದಿನಮಿದರ ಸಂಗ್ರಹ-
ಮಾರ್ಯರೆಲ್ಲರ್ ಪಡೆದಿಹರಿದಂ ನಿನಗೆ ಕರ್ತ್ತವ್ಯಂ- |
ತಾರ್ಯಮಪ್ಪುದು ಭವಮಿದರಿನಾ-
ಚಾರ್ಯರಖಿಲರಗಾಧ ಕೃತಿಗಳ
ಸೂರ್ಯನಂದದೆ ಬೆಳಗುತ್ತಿಹರ್ ಗೆಯ್ದಿದರ ಬಲದಿಂ || ೧೨ ||

ಇದು ಬ್ರಹ್ಮಚರ್ಯವೆಂದೆನಿಸುವ-
ದಿದೆಯೆರಡು ತೆರನಾಗಿಹುದು ತಿಳಿ-
ದಿದನಾಚರಿಪರವರವರ್ ಸ್ವೇಚ್ಛಾನುಸಾರದೊಳೆ |
ಪದುಳ್ದು ಸನ್ಯಾಸ ಬ್ರಹ್ಮಚ-
ರ್ಯದ ಮಾರ್ಗಮುಂದುಂಟು ಮತ್ತೊಂ-
ದದು ಗೃಹಸ್ಥ ಬ್ರಹ್ಮಚರ್ಯಂ ಸ್ವೇಚ್ಛೆಯೊಳೆಸಪುದು || ೧೩ ||

ಕನಸಿನೊಳಗಾವಡಂ ನಾರಿಯ
ನೆನೆಯದಿಹುದುರು ಸನ್ಯಾಸವಿದು
ಘನಗಾರ್ಹಸ್ಥ್ಯಮಾಚರಿಸಲದು ಗಹನಮಾಗಿಹುದು ।
ಆನಘ ಪತ್ನಿಯ ರುತು ಕಾಲಮಂ
ಬಿನದದಿಂ ತಿಳಿಯುತ್ತೆ ಭೋಗಿಸು-
ತನುವರಿದು ಸಂತತಿಯ ಪಡೆವುದೆ ಪತ್ನೀವ್ರತಮಿದು ॥ ೧೪ ॥

ಈ ಎರಡರೊಳಗಾವುದನಾದ-
ರಾಯತಂಗೊಳಿಸಿ ಕೊಳ್ಳುತ್ತೆ
ನ್ಯಾಯ ಮಾರ್ಗವ ತಿಳಿದು ಬಾಳ್ವನೆ ಸುಖಿಯಪ್ಪನಿಹದೆ ।
ಧ್ಯೇಯವಹ ಮುಕ್ತಿಯು ಸಾಧಿಪುದ-
ಮೇಯವಹ ಭೋಗಂ ಮೋಕ್ಷಮದು
ಗೇಯವಹ ಸಿದ್ಧಿಗಣಮನಿಶಂ ಬ್ರಹ್ಮಚರ್ಯಗಳಿಂ ॥ ೧೫ ॥

ಧರೆಯೊಳೀ ಸದ್ ಬ್ರಹ್ಮಚರ್ಯವ
ಮರೆದು ನಡೆವಂ ಹೀನ ಪಶುವಹ-
ನರಿದು ನಡೆಯ್ಯೆ ನೀನೆ ಶಿವನಹೆ ಲೀಲಾತ್ಮನೆನಿಪೆ ।
ಒರೆದಿಂತು ಶಿರಮಂ ಮುಟ್ಟೆ ಸಲೆ
ಪರಶಿವಂ ಕರುಣಾ ದೃಷ್ಟಿಯಿಂ
ನೆರೆ ನೋಡುತ್ತಲಾನಂದಾಶ್ರು ಮಿಗೆ ಪರಿಯುತಿರಲು ॥ ೧೬ ॥

ತೆರಳ್ದಂ ಪಿತೃಗಳನುಮತಿಯೊಡೆದು
ಗುರು ಚರಣವಂ ಮನದಿ ನೆನೆಯುತೆ
ಚರಿಸುತಲ್ಲಲ್ಲಿಯ ಪಾಠಶಾಲೆಗಳೊಳುಳಿಯುತ್ತೆ ।
ಕರವೇಸೆವ ಲೀಲೆಗಳನೆಸಗುತ-
ಲುರು ವಿದ್ಯೆಯಂ ಕಲಿಯುತಿರ್ದಂ
ಸರಸ ಸದ್ಗುಣದಿಂದೆ ಸರ್ವಪ್ರಿಯನೆನಿಸುತೆಸೆದು ॥ ೧೭ ॥

ವೇದ ವೇದಾಂತ ಸ್ಮೃತಿಪುರಾ-
ಣಾದಿಗಳ ತತ್ವ ವಿವೇಚನೆಯ
ನೋದದಿಂ ಗೆಯ್ಯುತೆ ವ್ಯಾಕರಣ ಮುಖ್ಯ ಶಾಸ್ತ್ರಗಳ |
ಓದುತಂ ಸುವಿವೇಕ ಪೂರ್ವಕ-
ಮಾದರದೆ ಪ್ರವಚನ ಶೈಲಿ ನೊದ-
ಲಾದ ಕಲೆಗಳ ಸಾಧಿಸಿಕೊಂಡು ತನ್ನೂರ್ಗೈದಿದಂ || ೧೮ ||

ಗುರುವಿನುರೆ ಗದ್ದುಗೆಯ ದರ್ಶಿಸಿ
ಪರಮ ಸುಗುಣಿಯು ತನ್ನಯ ಮಠಕೆ
ಹರುಷದಿಂದಾ ಶಂಭುಲಿಂಗಾಖ್ಯಂ ಬಂದನಾಗ |
ಅರಿದು ಭಕ್ತರ್ ಭಕ್ತಿಯಿಂ ತ-
ಚ್ಚರಣ ದರ್ಶನಮಂ ಮಾಡಿಕೊಳು-
ತುರು ಪುರಾಣ ಪ್ರವಚನವ ಕೇಳಿದರಾತನಿಂದೆ || ೧೯ ||

ಸಲೆ ಪುರಾಣವ ಕೇಳಿ ಭಕ್ತಿಯು
ಫಲಸಿತಿಮ್ಮಡಿಯಾಗಿ ಸುಗುಣಂ
ಬಲೆದುದುರೆ ಮುಮ್ಮಡಿಯಾಗಿ ಸುಕೃತಂ ನಾಲ್ಮಡಿಯನೆ |
ಕಲೆವೆತ್ತು ಪಸರಿಸಿದುದೈ ಮಡಿ
ಸಲೆಸಿತು ವರ್ಧಿಸುತೆ ಶ್ರದ್ಧೆಯದು
ಬಲವಾಯ್ತು ಶ್ರವಣದ ಕಾಂಕ್ಷೆಯದು ತಜ್ಜನರ ಮನದೆ || ೨೦ ||

ಕಲೆಯಾಕಲೆಗೆ ತಕ್ಕ ಜವ್ವನ-
ವೊಲೆಸುವ ಜವ್ವನಕ್ಕೆ ತಕ್ಕಾ
ಸಲೆ ದೇಹ ದೃಢತೆಯುಮಿವನರಿದವನ ಬಂಧು ಜನರು |
ಬಲದಿನಾಗ್ರಹಿಸಲ್ತೊಡಂಗಿದ-
ರೊಲೆದು ವಿವಾಹ ವಿಷಯದೊಳವಗೆ
ಸಲುವ ಮಾತುಗಳಿಂ ತಿಳುಹಿದನವರ್ಗೆ ಬಯಕೆಯನು || ೨೧ ||

ಕೇಳಿರೈ ಎನ್ನಯ ನೈಜಮಂ
ಮೇಳೈಸದೀ ನಿಮ್ಮ ಕಾಂಕ್ಷೆಯು
ಪೇಳಲೇನಾಂ ಲಿಂಗಯ್ಯನೆಂಬುವ ಪುರುಷನೊಡನೆ ।
ಬೋಳೈಸುತೆ ವಿವಾಹಿತನಾಗಿ
ಬಾಳುವೆನಾಂ ವಿವಾಹವೆ ದೀಕ್ಷೆ
ಮೇಳವಿಸಿ ನೀವೆಲ್ಲರ್ ಗುರುವಿಂದೆನಗೆ ಗೆಯ್ಸಿದಿರಿ ॥ ೨೨ ॥

ಸ್ತ್ರೀಯು ಸ್ತ್ರೀಯೊಡನಹ ವಿವಾಹಂ
ನ್ಯಾಯದಿಂ ನಗೆಗೀಡಲ್ಲವೆಯ-
ಪಾಯಕೆನ್ನಂ ತಿಳಿದು ತಿಳಿದುಮದೇತಕೆಳೆಯುವಿರಿ ।
ತಾಯಿ ತಂದೆಗಳಂ ನೋಡುತಲು-
ಪಾಯದಿಂದಿಂತೊರೆದನಾರ್‍ಯರೆ
ಸಾಯಸವೇಕೆ ನಿಮಗೀ ವಿಷಯದಲ್ಲಿ, ಮನೆಗೀಗ ॥ ೨೩ ॥

ಸುತನಿನ್ನೋರ್‍ವನಿಹನವನಿಂದ-
ಲತಿಶಯದೆ ವಂಶೋನ್ನತಿಯಹುದು
ಕೃತಕೃತ್ಯ ನಾನಪ್ಪೆನೆನ್ನಂ ಪರಮಾರ್ಥ ಪಥದೆ ।
ಸತತ ಜೀವಿಸಲನುಕೂಲಿಸಿರಿ
ಪತಿ ಲಿಂಗದೊಡನದರಿಂದೆನಗೆ
ಹಿತದಿಂ ಬೆರೆಯಲಾರೆ ಸಾಧ್ಯಮಹುದಿಲ್ಲದಿರೆ ಕಠಿಣಂ ॥ ೨೪ ॥

ಬಸವಾದಿ ಶಿವಶರಣರಂತೆನ-
ಗಸಮ ಗೃಹಸ್ಥನಪ್ಪುದಸಾಧ್ಯ-
ಮಸುವಿರುವನಕಮೀ ಬ್ರಹ್ಮಚರ್‍ಯದ ಮಾರ್ಗದಲ್ಲಿ ।
ಜಸವ ಕೊಡುವೇಂ ಲೋಕ ಸೇವೆಯಂ-
ಸಸಿನದಿಂ ಗೈಯುತ್ತೆ ನಿಮಗಾಂ
ವಸುಧೆಯೊಳೆ ಶಾಂತಿಯನಿತ್ತು ಶಿವ ಸುಖವ ಪಡೆಯುವೆನು ॥ ೨೫ ॥

ಈ ನುಡಿಯನಾಲಿಸುತೆ ಪಿತನಹ
ಮಾನಿ ಶಿವಾರ್ಯನಿಂತು ಪೇಳ್ದಂ
ಮಾನಿತನೆ ನಿನಗೀ ವಿವಾಹದಪೇಕ್ಷೆಯಿಲ್ಲದಿರೆ |
ಸಾನುರಾಗದೊಳೀ ಮಠದ ನೀ
ನೂನವಿರದ ಚರಾಧಿಕೃತಿಯು, ನ-
ವೀನವೆನೆ ಸ್ವೀಕರಿಸೀ ಮಠದುರು ಚರ ಮೂರ್ತಿಯಾಗು || ೨೬ ||

ಪಟ್ಟ ಚರಂತಿಕೆಯೆರಡೆಸೆವವು
ದಿಟ್ಟನೆ ಎಮ್ಮ ಮಠದಧಿಕೃತಿಗ-
ಳೆಟ್ಟಿತನವುಂ ಬಿಟ್ಟಿರಡರೊಳಗಿಷ್ಟವಾದುದನೆ |
ತಟ್ಟನೆ ಜಿತೇಂದ್ರಿಯನಾಗಿ ನೀಂ
ದಿಟ್ಟತನದಿಂ ಸ್ವೀಕರಿಸಿದೊಡೆ
ಮುಟ್ಟೆ ಪೇಳ್ವೆಂ ಲಿಂಗವುಂ ತವಕಲ್ಯಾಣಮಹುದು || ೨೭ ||

ಈ ಮಾತನಾಲಿಸುತೆ ತಂದೆಗೆ
ಪ್ರೇಮಾಳುವೊಪ್ಪಿಗೆಯಿತ್ತನಾ
ಸೋಮೇಶನಂ ನೆನೆಯುತ್ತನಿರ್ವಾಹದಿಂದಾಗ |
ಕಾಮಾರಿ ಸದ್ ಭಕ್ತರೀತನ
ಸಾಮಾನ್ಯ ವೈರಾಗ್ಯಮನರಿದು
ಧೀಮಂತರೀತನೆ ಶಿವನೆಂದು ಪೊಗಳ್ದರ್ಮನದೊಳೆ || ೨೮ ||

ಗದುಗಿನೋಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತ ಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳೈದನೆಯ ಸಂಧಿಯಿದುವೆ || ೨೯ ||

ಅಂತು
ಸಂಧಿ ಐದಕ್ಕಂ ಪದಗಳು ಮೂರುನೂರ್ಡಾಹನ್ನೆರಡಕ್ಕಂ
ಮಂಗಲಂ

॥ ಶ್ರೀ ಗುರು ಬಸವಲಿಂಗಾಯನಮಃ ॥



# ಆರನೆಯ ಸಂಧಿಯು

ಬಂಧುಗಳಾಗ್ರಹಕ್ಕೆ ಸುದಯಾ
ಸಿಂಧು ಚರಮೂರ್ತಿಯಧಿಕಾರವ
ಬಂಧುರಂ ಪಡೆದುರೇ ಕೊಂಡಿಯ ಮಠಕೆ ಬಂದಿಹನು ॥ ಪಲ್ಲ ॥

ಏಳು ಸ್ವರದಿಂ ಸಂಗೀತಮಹು-
ದೇಳು ಬಂಣದೇಬಿಳಿಯು ಬಣ್ಣಮು-
ದೇಳು ದಿನಂಗಳಿಂ ವಾರಮಹುದಭವ ಪರಶಿವನೆ ।
ಏಳು ಧಾತುಗಳಿಂದ ಶರೀರಮಿ-
ದೇಳು ಋಷಿವರರಿಂ ಶಾಸ್ತ್ರವಿಹು-
ದೇಳು ಪೇಳೆನ್ನಿಂದೇನಪ್ಪುದೊಲಿದು ಸರ್ವೇಶಾ ॥ ೧ ॥

ನೆರೆ ನುಡಿಯುವಂ ಮನದೆ ಯೋಚಿಸಿ
ಪರಿಪರಿಯೊಳಾ ಶಂಭುಲಿಂಗಂ
ಕಿರಿಯ ಸಂಸೃತಿ ಬಂಧದಿಂ ಕಡೆಗಾಗಲಿಚ್ಛಿಸುತೆ |
ಪಿರಿಯ ಸಂಸಾರದ ಬಂಧನದೆ
ನೆರೆ ಸಿಲ್ಕಿದೇಂ ಶಿವಶಿವಯೆನು-
ತ್ತುರೆ ಬಳಲುತಿರ್ದಂ ಚಿಂತಿಸಿಂತದನೊರೆವೆನೀಗ || ೨ ||

ಪೆಂಡತಿಯೊಡನೆ ಕೂಡಿ ಮಕ್ಕಳ
ಹಿಂಡನುರೆ ಪಡೆಯುತ್ತೆ ರಕ್ಷಿಸ-
ಲಂಡಲಿಪ ಸಂಸೃತಿಗಿಂತಲೀ ಸಂಸಾರಮಧಿಕಂ |
ಕಂಡಪರ್ ಕೊಡುವಪರಾಧಗಳ
ತಂಡಮಂ ಪೊರಲಾರದೆ ಪೊತ್ತು
ಕೆಂಡಗಣ್ಣಿನ ಶಿವನ ನೆನೆಯುವದೆಂತು ವಿಚಾರಿಸೆ || ೩ ||

ಪಟ್ಟ ಚರ ಮೂರ್ತಿಗಳೆಂದು ಜನ-
ರಿಟ್ಟು ಭಕ್ತಿಯ ಕೊಡುವ ಧನಮಂ
ಮುಟ್ಟದಾಪ್ತರಿಗಿತ್ತು ಸಮಾಜದಖಿಲ ಜನಂಗಳ |
ಅಟ್ಟಹಾಸದ ನಿಂದೆಯ ಪೊಂದಿ
ಕೆಟ್ಟ ಚಿಂತೆಯೊಳಿರಲು ಶಿವನಂ
ಮುಟ್ಟಿ ಪೂಜಿಪುದಾವಾಗಳೆನಗಿದು ಬಂಧಮಲ್ತೆ || ೪ ||

ಅನಿತರೋಳ್ ಪಟ್ಟ ಚರಮೂರ್ತಿಗ-
ಳನುನಯುದೊಳೈದಿದರಾ ಮಠ-
ಕ್ಕನಘನೇಳ್ದವರೀ ದೊರೆಗೆ ನಮಿಸಿದನಳ್ತಿಯಿಂದೆ |
ಅನುರಾಗದಿಂದವನ ಕೈಗಳ
ಘನ ಮೋದದಿಂ ಪಿಡಿದು ಪರಸುತೆ
ಸನಿಹದೋಳ್ ಕುಳ್ಳಿರಿಸಿಕೊಳ್ಳುತೆ ಕುಳಿತರಾಸನದೆ || ೫ ||

ಪಟ್ಟದಾರ್ಯಂ ನುಡಿದನೆಂತೆನೆ
ದಿಟ್ಟಿಸಿ ಶಂಭುಲಿಂಗಾರ್ಯನಂ
ದಿಟ್ಟನೆ ಪೇಳು ನೀನೀ ಮಠದೊಳಾವಧಿಕಾರವ |
ದಿಟ್ಟತನದಿಂ ಪೊಂದಿ ಮೆರೆಸುವೆ
ಪಟ್ಟದ ದೇವ ಚರಮೂರ್ತಿಗಳ್
ಮುಟ್ಟೆ ಮನವಿಲ್ಲುರು ಧರ್ಮ ಕಾರ್ಯಮನೆಸಗಿರ್ಪುದು || ೬ ||

ಗುರುವೆ ತನ್ಮಹನೀಯ ಯೋಗ್ಯತೆ-
ಯರಿಯಲೆನಗೆಲ್ಲಿಹುದು ಕೇಳ್ವೈ
ಕರಮಿೀ ಮಠದ ಜನರಾಗ್ರಹಕೊಪ್ಪಿದೆನಿದುದಿಟಂ |
ಸರಸದಿನೊಂದು ವಸ್ತುವಡೆವಾ-
ಗುರು ಪಟ್ಟವೆಂಬುವ ಶಬ್ದಮುಹು-
ದರಿಯೆ ಹರಿಯಲ್ ಚರಚರವೆಂಬ ಸಪ್ಪಳಮಪ್ಪುದು || ೭ ||

ಸ್ಥಿರಮಾದುದುರು ಧರ್ಮಸೇವೆಯು
ನೆರೆ ನಿನ್ನ ಕೃಪೆಯಿಂದದು ದೊರೆಯೆ
ಪರಮ ಕೃತಾರ್ಥ ನಾನಪ್ಪೆನಿದನೆನಗನುಗ್ರಹಿಸೈ |
ಪಿರಿಯ ಸಂಸಾರಮಿದು ನಿಮಗೇ-
ನರಿಯದ ವಿಷಯಮಲ್ಲಮಿದರಿಂ
ಕರುಣಾಕರನೆ ಚಿಂತೆಯಾಗರದಿಂದೆ ಕಡೆಗಿರಿಸೈ || ೮ ||

ಎಂಬ ನುಡಿಯಂ ಕೇಳಿನಗುತಂ
ಸಾಂಬ ಸಮನಹ ಪಟ್ಟದಾರ್ಯಂ
ತುಂಬಿದಾಶ್ಚರ್ಯದೆ ನುಡಿದನೆಲೆ ಶಂಭುಲಿಂಗಾರ್ಯ |
ಕಾಂಬೆನಾಂ ನಿನ್ನೀ ವಿರಾಗವ
ತ್ರ್ಯಂಭಕ ಸಮಾನ ಜ್ಞಾನಿಯೋಳ್
ಪಂಬಲವ ಬಿಡು ತವವೈರಾಗ್ಯವೆಂದೆಂದು ಕೆಡದು || ೯ ||

ಈ ಮಠದ ಭಾರಂ ನಿನಗೆ ಬೇ-
ಡಾ ಮಹಿತ ಕಾರ್ಯಾಧಿಕಾರವ
ಭೂವಿಯೊಳ್ ನಿಜಮಾಗಿ ಪಡೆವಂ ಪಟ್ಟಾಧ್ಯಕ್ಷನು ।
ನೇಮದೆ ಪಡೆ ಚರಾಧಿಕೃತಿಯಿಂ
ಪ್ರೇಮದಿಂ ಸಂಚರಿಸಿ ಧರ್ಮದ
ನೇಮಿತ ಸುಕಾರ್ಯಂಗಳಂ ಮಾಡಲ್ಸಮರ್ಥನಹೆ ॥ ೧೦ ॥

ಧರ್ಮಕಾರ್ಯವ ಮಾಡಲೋಸುಗ-
ಕೂರ್ಮೆಯೊಂದುಪಯೋಗಮಲ್ಲುರಿ
ನಿರ್ಮಿಸಿ ಕೊಳಲ್ವೇಳ್ಕು ಸಂಸ್ಕೃತಿಯೊಂದನರಿ ಮಗನೆ ।
ಕರ್ಮಸಿದ್ಧಿಗಳಿರಲಿ ವಿದ್ಯೆಯು
ಪೆರ್ಮೆಯದಿರಲಿ ನಿನಗಿವು ಜಗದೆ
ನೆರ್ಮ್ಮಗೆಯು ಸಾಧನಗಳಲ್ಲಂ ನೋಡು ವಿಚಾರಿಸಿ ॥ ೧೧ ॥

ಸತ್ಯಮಾದೀ ನುಡಿಯನಾಲಿಸಿ
ಭೃತ್ಯ ಭಾವದೆ ನಮಿಸಿ ಕೈಮುಗಿ-
ದತ್ಯಮೋಘ ಶ್ರದ್ಧೆಯಿಂದಲೆ ನುಡಿದನಿಂತವನು ।
ಸ್ತುತ್ಯಗುರುವರ ಧರ್ಮ ಸೇವೆಯು
ಕೃತ್ಯವನೆಸಗಲಿದು ಸಹಾಯುವ
ನಿತ್ಯದೆ ಗೈವುದಾದೊಡಾನೊಪ್ಪುವೆನು ಮನದಿಂದೆ ॥ ೧೨ ॥

ಚರಮೂರ್ತಿ ಪಟ್ಟವನೆಸಗಿರಾಂ
ಚರಿಸಿ ಧರ್ಮದ ಸೇವೆಯು ಗೆಯ್ವ-
ನರಿಯದಲೆ ತವೊಡನೆ ವಿವಾದಮಂ ಗೆಯ್ದೆನದೆನೆ ।
ಸರಸದಿಂ ಕ್ಷಮಿಸುವದೆಂದೆರಗಿ
ಕರವ ಮುಗಿಯುತಿರಲ್ಕೆ ನೇಹದೆ
ಗುರು ಪಟ್ಟದಾರ್ಯಂ ಸಂತೈಸುತಂತೆ ನಿಶ್ಚಯಿಸಿ ॥ ೧೩ ॥

ತಜ್ಞನಕನಂ ಕರೆದು ತಿಳಿಸಲ್
ಕಜ್ಜಕನುಗುಣವಾಗಿ ಸರ್ವವ
ಸಜ್ಜನರ್ಗ್ಗುರುಪುತ್ರೆ ವ್ಯವಸ್ಥೆ ಗೆಯ್ಸಿದನಾತನು ॥
ಸಜ್ಜುಗೊಳಿಸಿದರಧಿಕ ವಿತ್ತವ-
ನುಜ್ಜುಗಿಸಿದರ್ ಧಾನ್ಯಾಗ್ಜನಕೆ
ಸಜ್ಜಿತವಾಗಿ ಕಾಣ್ಬಂತೆ ಶೃಂಗರಿಸಿದರ್ಮ್ಮಠವ ॥ ೧೪ ॥

ಹಂದರವ ಚಿತ್ತಂಗೊಳುವಂತೆ
ಸುಂದರವಾಗಿ ನಿರ್ಮ್ಮಿಸಿದರುರೆ
ಚಂದವೆನೆ ಪೂಗೋರು ಕದಲೀಸ್ತಂಭಂಗಳಿಂದೆ ॥
ಅಂದಗೊಳಿಸಿದರಾಮ್ರಾಮಳಕ
ಚಂದನಗಳೆಳೆ ಗೊಂಚಲಂಗಳ
ತಂದು ತೋರಣವಾಗಿಸುತೆ ಮಂಗಲಂಗೊಳಿಸಿದರು ॥ ೧೫ ॥

ಕಂಗೊಳಿಪಂತೆ ವೇದಿಕೆಯನುರೆ
ಮಂಗಲ ಮಂಟಪದ ಮಧ್ಯದೋಳ್
ಸಿಂಗರಿಸಿದರ್ ನಿರ್ಮ್ಮಿಸುತೆ ಶಿವಚಿತ್ರಂಗಳಿಂದೆ ॥
ರಂಗವಲ್ಲಿಯ ಗೆಯ್ಸಿದರ್ ಸ-
ನ್ಮಂಗಲಾಂಗಿಯರಿಂದೆ ಮುದದಿಂ
ತುಂಗ ಸದ್ಭಕ್ತರ್ ಭಕ್ತಿಯಿಂದುರೆ ಬಿನದದಿಂದೆ ॥ ೧೬ ॥

ಕರೆಸಿದರ್ ಪಟ್ಟದದೇವರಂ
ಬರಿಸಿದರ್ ಚರಮೂರ್ತಿವರರಂ
ಕರೆಯಿಸಿದರನ-ಭಾವಿಗಳ ಸುಕಲಾವಿದರನೊಲೆದು ॥
ತರಿಸಿದರ್ ಸಾಮಗ್ರಿಗಳ ನಿ ।
ರ್ಧರಿಸಿದರ್ ಸುಮುಹೂರ್ತ್ತಮಂ ಬಿ-
ತ್ತರಿಸಿದರ್ ತದ್ವಾರ್ತ್ತೆಯಂ ಮಾಧ್ವಾಪುರದ ಜನರು ॥ ೧೭ ॥

ಸಿದ್ಧವಾಗಲ್ ಸುಮುಹೂರ್ತಮದು
ಶುದ್ಧಿಯಿಂ ಬಂದಾ ಪುರೋಹಿತ
ವೃದ್ಧರನುಪಮ ನಿಷ್ಠೆಯಿಂ ಕಲಸಂಗಳ ಸ್ಥಾಪಿಸಿ ।
ಸಿದ್ಧಿಗಣಯುತ ಚರಮೂರ್ತಿವರ-
ನುದ್ಧರಿಸಲಧಿಕಾರಮಂ ಕೊಡ-
ಲುದ್ಧರಣ ಮತಿಯಾ ಮಂಟಪದೆ ಮಂಡಿಸಿದನೊಲೆದು ॥ ೧೮ ॥

ವರಶಂಭುಲಿಂಗ ಪಟೋತ್ತಮಂ
ಗುರುವಿನಪ್ಪಣೆಯಂತೆ ಮಂಟಪ-
ಕುರು ಸಂಸ್ಕಾರಯುತನಾಗಿ ಬಂದಂ ಮಹಾಮತಿಯು ।
ಪರತರ ಚೆಷ್ಪನಾರ್ಯ ನಾಮಕ
ಚರಮೂರ್ತಿಯಾ ಶಿಷ್ಯಂಗಾತ್ಮ
ಕರುಣೆಯಿಂ ಮತ್ತುಳಿದ ಸಂಸ್ಕೃತಿಗಳ ನೆರವೇರಿಸಿ ॥ ೧೯ ॥

ಕರೆದು ಸಿಂಹಾಸನದಲ್ಲಿ ಕು-
ಳ್ಳಿರಿಸಿದಂ ಕಂಡಾಗ ಸಭಿಕರ್
ನೆರೆ ಜಯನಮಃ ಪಾರ್ವತೀ ಪತೇ ಯೆಂದು ನುಡಿಯುತಿರೆ ।
ಸರಸದಿಂ ಮಂಗಲವಾದ್ಯ ಗಣ-
ಮುರೆ ಘೋಷಿಸುತ್ತಿರೆ ಸಕಲ ಜನ
ಹರುಷದ ಕಾಣಿಕೆಗೆ ಪ್ರಾರಂಭವಾಯ್ತುತಿ ರಭಸದೆ ॥ ೨೦ ॥

ಜನರನಂತರದಲ್ಲಿ ಹರುಷದೊ-
ಳನಘನಂ ವಿಸುಪಾಂದೋಲಿಕೆಯೊ-
ಳನುನಯದೆ ಕುಳ್ಳಿರಿಸುತುಘೆಯುಘೆಯೆಂದು ಪಿಡಿದೆತ್ತಿ ।
ವಿನುತನಂ ಮೆರೆಯಿಸಲಾದರತಿ
ವಿನಯುದ ಭಕ್ತಿಭಾವಂ ಮೆರೆಯೆ
ತನುವಿನೊಳ್ ಪುಳುಕಾಂಕುರಮೆಸೆಯೆ ನೋಳ್ಪ ಸುಜನತೆಯ ॥ ೨೧ ॥

ಲಲನೆಯರ್ ಗಜಗಮನೆಯರ್ ಗತ-
ಮಲಿನೆಯರ್ ಮೃದುಹಸನೆಯರ್ ಸ-
ತ್ಕಲನೆಯರ್ ಮಿತವಚನೆಯರ್ ಹಿತರಚನೆಯರ್ ಕೂಡಿ ।
ಜ್ವಲನೆಯರ್ ಜಿತಮದನೆಯರ್ ಸ-
ಚ್ಛಲನೆಯರ್ ಸ್ಮಿತವದನೆಯರ್ ಪದ
ಲಲನೆಯರ್ ಮುತರದನೆಯರ್ ನೀರಾಜನವ ಪಿಡಿದು ॥ ೨೨ ॥

ನಡೆದಿರ್ದರೀಯುತ್ಸವದೊಳಾ
ನಡೆಯ ಹಂಸಂಗಳ್ ಕಲೆವಂತೆ
ನುಡಿಯುತಿರ್ದರ್ ಗುರುನಾಮಮಂ ಮಧುರ ಧ್ವನಿಯೊಳೆ ।
ನುಡಿಯ ಕೋಕಿಲೆಗಳ್ ಕಲಿವಂತೆ
ಪಿಡಿದಿರ್ದರಾರತಿಯ ತಳಿಗೆಯ
ಪಿಡಿಯ ಮದನನ ಸತಿಯು ಕಲಿವಂತಿರ್ದರನಘೆಯರು ॥ ೨೩ ॥

ಎಲ್ಲ ಮತದವರೆಲ್ಲ ಮತಿಯುವ-
ರೆಲ್ಲ ಜಾತಿಗರೆಲ್ಲ ನೀತಿಗ-
ರೆಲ್ಲ ಕುಲದವರೆಲ್ಲ ನೆಲದವರಲ್ಲಿ ಕೂಡಿಹರು ।
ಎಲ್ಲ ಪಥದವರೆಲ್ಲ ವ್ರತದವ-
ರೆಲ್ಲ ಕಲೆಯುವರೆಲ್ಲ ನೆಲೆಯುವ-
ರೆಲ್ಲ ಜನರೊಮ್ಮನದಿಂದೆ ನೆರೆದಿರ್ದರತಿ ಮುದದೆ ॥ ೨೪ ॥

ಇಂತು ಸಂತೋಷದ ಸುಗ್ಗಿಯನೆ
ಸಂತತಮುಲಿವ ವಾದ್ಯರಭಸಮು-
ನಾಂತು ತದುತ್ಸವಂ ಸಂಭ್ರಮದೊಳಾ ಗ್ರಾಮದಲ್ಲಿ ।
ಚಿಂತಿಸಲ್ಕಸದಳಮೆಂಬಂತೆ
ಶಾಂತರೊಸೆದಹುದೆನ್ನುವ ತೆರದೆ
ಶಾಂತಿಯಿಂ ಮಠಕೈದಿತೆಲ್ಲೆಡೆಯಲ್ಲಿ ಸಂಚರಿಸಿ ॥ ೨೫ ॥

ಭಕ್ತರೆರಗುತೆ ಕರವ ಪಿಡಿಯಲ್
ಶಕ್ತನಿಳಿದಂ ಪಾಲಿಕೆಯಿಂದೆ
ಸಕ್ತಿಯಿಂ ಮುಕ್ತಾಂಗನೆಯರಾರತಿಯ ಬೆಳಗುತಿರೆ |
ಮುಕ್ತನಹ ಗುರುವಿಂಗೆರಗುತ್ತೆ
ಸೂಕ್ತವಹ ಕಾಣಿಕೆಯ ಸಲ್ಲಿಸಿ
ಭಕ್ತಿಯಿಂದವರಾಜ್ಞೆಯ ಪಡೆಯೆ ಪರಸಿದನೆಲ್ಲರ ‖ ೨೬ ‖

ಎಲ್ಲರುರೆ ಮೃಷ್ಟಾನ್ನಂಗಳಿಂ
ಸಲ್ಲಲಿತಮೆನೆ ತೃಪ್ತಿಯ ಪಡೆದು
ಬಲ್ಲವರೊಪ್ಪುವಂತೆ ಕಾಣಿಕೆಯಿತ್ತು ತಮ್ಮೆಡೆಗೆ |
ಲಲ್ಲೆಯಿಂ ಪೋಗುತಿರೆ ಪ್ರೇಮದೆ
ಸಲ್ಲುವಂತೆ ಕಲಾವಿದರಿಗುರು
ವಲ್ಲಭಂ ಸಂಭಾವನೆಯನೀಯುತ್ತೆ ಕಳುಪಿದನು ‖ ೨೭ ‖

ಪಟ್ಟ ಚರಮೂರ್ತಿಗಳಿಗೆರಗುತ-
ಲಿಟ್ಟು ಕಾಣಿಕೆಯಂ ತಣಿಪಿದಂ
ಬಿಟ್ಟು ಸಂದೇಹವ ಪೊಗಳುತ್ತೈದಿದರ್ ನಿಜಮಠಕೆ |
ಮುಟ್ಟಿ ಪರಸುತೆ ನಡೆದಂ ಗುರುವು
ದಿಟ್ಟಿಯಿಟ್ಟೀಕ್ಷಿಸಿ ಬೋಧಿಸುತೆ
ದಿಟ್ಟತನದಿಂ ಧರ್ಮವ ಶಂಭುಲಿಂಗಾಚಾರ್ಯಗೆ ‖ ೨೮ ‖

ಅನಿತರೊಳ್ ದುಂಡಸೀ ಗ್ರಾಮದ
ಘನ ಭಕ್ತರೀತಂಗೆರಗಿಸಲೆ-
ಯನಘಂಗೆ ಪ್ರಾರ್ಥಿಸುತೆ ಕರೆದೊಯ್ಯುತೆ ಭಕ್ತಿಯಿಂದೆ |
ವಿನುತರೊಪ್ಪುವ ತೆರದೆ ಗೆಯ್ದರ್
ಮನದಿಂ ತಿರ್ಯಗಾಂದೋಲಿಕೆಯೊ-
ಳನುಪಮೋತ್ಸವಮಂ ಜರುಗಿಸುತೆ ಪೂಜೆಯ ಗೆಯ್ದರು ‖ ೨೯ ‖

ಕಾಣಿಕೆಯನಿತ್ತೆರಗುತೀತನ
ಕಾಣ ಬಂದವರಂ ತಣಿಸುತ್ತೆ
ಶಾಣಕುರಿ ಶ್ರದ್ಧೆಯಿಂ ಕಳುಹಿದರವರವರನೊಲಿಸಿ |
ಜಾಣನವರುರು ಭಕ್ತಿಯಿಂ ಸಲೆ
ಮಾಣದಲೆ ಕೈಕೊಂಡು ಹರಸುತೆ
ವಾಣಿಯಿಂ ಪೊಗಳುತ್ತೆ ಮಾದಾಪುರಮಠಕೆ ಬಂದಂ || ೩೦ ||

ಲಿಂಗಪೂಜೆಯ ಮಾಡುತಲ್ಲಿಯೆ
ಸಂಗವಿರಹಿತನಿರ್ದು ಕೆಲದಿನ-
ಮಂಗಜಾರಿಯ ನೆನೆದು ಭಕ್ತರ ಕರೆದು ತಿಳಿಸುತ್ತೆ |
ಭಂಗವಿಲ್ಲದಲೂರೂರ್ಗಳಂ
ತುಂಗಸುರೆ ನೋಡುತ್ತೆ ಚರಿಸುತೆ
ಕಂಗೊಳಿಪುರೇ ಕೊಂಡಿ ನಗರದ ಮಠಕ್ಕೈದಿ ನಿಂದಂ | || ೩೧ ||

ಗದುಗಿನೋಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತ ಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೋಳಾರನೆಯ ಸಂಧಿಯಿದುವೆ || ೩೨ ||

ಅಂತು
ಸಂಧಿ ಆರಕ್ಕಂ ಪದಗಳು ಮೂರುನೂರ್ಹಾನಾಲ್ವತ್ನಾಲ್ಕಕ್ಕಂ
ಮಂಗಲಂ



# ಏಳನೆಯ ಸಂಧಿಯು

ಗುರುವಿನಿಂದುಪದೇಶಮಂ ಪಡೆ-
ದರೆ ಹುಚ್ಚನೆಂಬುವ ಪೆಸರುವಡೆ-
ದರಿಯೆ ತನ್ನೂರೊಳ್‌ಲೀಲೆಯಂ ಮೆರೆದದಂ ತೋರೆದಂ ॥ ಪಲ್ಲ ॥

ಕಲ್ಲಿನಿಂ ಪೊಡೆದವನ ಪೊರೆದೈ
ಸೊಲ್ಲಿಸಿದೆ ಮಣ್ಪೊರಿಸಿದವಳಂ
ಮೆಲ್ಲನೊದೆದವಗಿತ್ತೆ ಸಾಯುಜ್ಯತೆಯ ಶಂಕರನೆ ।
ಒಲ್ಲೆಯೈ ಪೂಜಿಸಿದವರ ನೀಂ
ಲಲ್ಲೆಯಂಬಿಡಿದಂ ಭಕ್ತರುರೆ
ಸೊಲ್ಲಿಪರ್ ನಿನಗುರು ಮರುಳಶಂಕರನೆಂಬ ಪೆಸರಂ ॥ ೧ ॥

ಲಸದುರೀ ಕೊಂಡಿಯ ಗ್ರಾಮವೊಂ-
ದಸವು ಮೈಸೂರ್ ಪ್ರಾಂತದೊಳಗಿದು
ಲಸಿತ ಕೃಷಿ ಮುಖ್ಯೋದ್ಯಮಂಗಳಿನಿಹುದು ಪೆಸರಾಂತು |
ರಸಿಕರಿಲ್ಲಿಯ ಜನರುರು ಕಲೆಯೊ-
ಳಸದೃಶ ಪಂಡಿತರನೇಕರ್ ವಿ-
ಲಸಿತ ಮತಿಗಳ್ ವೈಭವಯುತರ್ ಭಕ್ತಿ ಭಾವಿತರು || ೨ ||

ಇಲ್ಲಿಯೊಂದಿಹುದುರೆ ಪೆಸರಾಂತು
ಸಲ್ಲಲಿತವಾದ ವಿರಕ್ತಮಠ-
ಮುಲ್ಲಸಿತ ಕಲೆಗಾಗರವಾಗಿ ಚಿತ್ತಾಕರ್ಷಕಂ |
ಸಲ್ಲಲಾಮಂ ಪ್ರಭುವರನಿರ್ದ-
ನಲ್ಲಿ ಮಹಿಮಾರ್ಣವ ವಿಜಿತಭವ-
ನಲ್ಲಮ ಪ್ರಭುರೂಪಂ ಪರಮಹಂಸನಾಮಕನು || ೩ ||

ಶಿವರೂಪೇಷ್ಟಲಿಂಗಾರ್ಚಕಂ
ಶಿವಲೀನ ಚಂಚಲ ಮನಸ್ಕಂ
ಶಿವಭಕ್ತ ಗಣವರ ಪೋಷಕಂ ಹಂಸಮನುಸಿದ್ಧಂ |
ಶಿವಭಕ್ತಿ ಭಾವಿತ ಭಾವುಕಂ
ಶಿವಗುಣಾಸ್ಪದ ಚಿದ್ರೂಪಕಂ
ಶಿವಭಾವ ಜನನಾಯಕಂ ಮಠದೊಡೆಯನಾಗಿರ್ದಂ || ೪ ||

ಈ ಗುರುವರನ ಶಂಭುಲಿಂಗಂ
ಯೋಗಿವರನಂ ಕಂಡು ಸದ್ಗುಣ
ಸಾಗರಂ ತತ್ಕ್ಷಣದಲ್ಲಿ ಸಾಷ್ಟಾಂಗನತನಾಗೆ |
ಭೋಗದಾಶೆಯು ತೊಲಗಿತಾಗಳೆ
ರಾಗಮದು ಭಕ್ತಿಮಯವಾದುದು-
ವಾಗಗೋಚರರೋವೊದ್ಗಮಂ ಸ್ವರದೊಳ್ಗದ್ಗದಂ || ೫ ||

ಭಕ್ತಿಯಾವೇಶ ಮತಿಯಾಗಲ್
ಶಕ್ತಿ ಪಾತವಮದುನ್ಮುತಿರಲ್ಕೆ
ಸಕ್ತಿಯಿಂದಾ ಗುರುವಿನ ಪದದೆ ಬೀಳ್ದಂ ಕ್ಷಣದೊಳೆ ।
ರಕ್ತಿ ಪೊಣ್ಮಿರೆ ಭಾವಾವಿಷ್ಟ-
ನುಕ್ತಿ ವಿರಹಿತನಾಗಿ ಮೋದ-
ವ್ಯಕ್ತಿಯಂ ತೋರ್ಪಾನಂದಾಶ್ರು ಯುಣ್ಮಲೆತ್ತಿದನು ॥ ೬ ॥

ಈತನೆ ತನ್ನ ನಿಜ ಶಿಷ್ಯನೆಂ-
ದೋತು ತಿಳಿಯುತೆ ತನ್ಮೋದಮಂ
ಮಾತನಾಡಿದನಿಂತು ತಡೆಯುತೆ ನೀನಾರಿಲ್ಲಿಗೆ ।
ಏತಕೆ ಬಂದೆ ಪೇಳೆಂದೆನಲ್
ಚೇತರಿಸಿಕೊಳ್ಳುತೆ ನುಡಿದನವ-
ನೀ ತೆರದೆ ಕೇಳ್ ಗುರುವೆ ಮಾದಾಪುರ ಚರಮೂರ್ತಿಯಾಂ ॥ ೭ ॥

ಬಂದೆನಿಲ್ಲಿಗೆ ಶೋಧಿಸುತಲಾ-
ನಿಂದು ತವ ದರ್ಶನಂ ಲಭಿಸಿತು
ತಂದೆ ಪದಸೇವೆಯ ಮಾಡುತಿರ್ಪೆಂ ಕರುಣಿಸಯ್ಯಾ ।
ಮಂದನಾದೆನಗಿಲ್ಲ ಶಾಂತಿಯ-
ದಿಂದುಧರ ಸಮ ನಿನ್ನುಪದೇಶ-
ದಿಂದದಂ ಪಡೆಯಲ್ಪೇಳ್ಕು ನೀಂ ಕೃಪೆಯ ತೋರೆನಗೆ ॥ ೮ ॥

ಈ ಮಾತನಾಲಿಸುತೆ ಗುರುವುರೆ
ಪ್ರೇಮಾತಿಶಯದಿಂದಿಂತೊರೆದ-
ನ್ಯೆ, ಮೋದಮಾಯಿತ್ತೆನಗೆ ನಿನ್ನಾಗಮನದಿಂದೆ ।
ಸೋಮೇಶನಾ ಪ್ರೇರಣೆಯಂತೆ
ಧೀಮಂತನೆ ತವೇಷ್ಟಂ ದೊರೆಗು-
ಮಾಮಾರ ವೈರಿಯ ನೆನೆಯಿತಿಲ್ಲಿಯೆ ವಾಸಿಸಯ್ಯಾ ॥ ೯ ॥

ಹರುಷದಿಂದಾ ಮಠದೊಳಿರ್ದಂ-
ಗುರುಸೇವೆಯಂ ಸರ್ವವನಲ್ಲಿ-
ಯುರು ಭಕ್ತಿಯಿಂಗೆಯ್ಯುತಲಿರ್ದನೆಲ್ಲರಂ ಬಿಡಿಸಿ |
ಚರಮೂರ್ತಿಯೆಂಬಭಿಮಾನಮಂ
ತೊರೆದಿರ್ದನೀ ವಿಷಯದಲ್ಲಿವ-
ಗರಿಯಲಾಶ್ಚರ್ಯವ ಪಡುತಿರ್ದರಾ ಜನರ್ನೋಡಿ || ೧೦ ||

ಗುರು ಮಹಿಮೆಗಾ ಪ್ರಾಂತದ ಜನರ್
ನೆರೆಮೆಚ್ಚಿ ತದ್ ಭವ್ಯ ಮಠಮಂ
ವಿರಚಿಸಿತ್ತಿಹರಾ ಪರಮ ಹಂಸಾಖ್ಯಯತಿಪಂಗೆ |
ಪರಮಾನಂದದಿಂ ಮೈಸೂರ
ನರಪಾಲನಾತನ ಶಿವಾರ್ಚ್ಚಗೆ
ಕೊರತೆಯಾಗದ ತೆರದೆ ನಡೆಯಿಸುತಿರ್ದನನುದಿನದೆ || ೧೧ ||

ಅದನಾವುದಂ ಲೆಕ್ಕಿಸದೆ ಬ್ರ-
ಹ್ಮದ ಮಹಾನಂದದೊಳೆ ಬೆರೆಯುತೆ
ಸದಮಳಿನ ನಿರ್ಲಿಪ್ತ ಭಾವದೊಳಿರುತಿರ್ದನಲ್ಲಿ |
ಹೃದಯ ಪೂರ್ವಕಮಾದ ಭಕ್ತಿಯ
ಪದುಳ್ದಿಟ್ಟವರ್ ಪಡೆಯುತಿರ್ದರ್
ಪದಪಿಂದೆ ಸ್ವೇಷ್ಟಾರ್ಥಮಂ ನೆನೆಯುತ್ತೆ ದರ್ಶಿಸುತೆ || ೧೨ ||

ಇವನಿಂ ಚಿದುಪದೇಶವ ಪಡೆಯೆ
ತವಕಿಸುತಲಿರ್ದರನೇಕ ಜನ-
ರವರಾರಿಗುಪದೇಶಿಸಲಿಲ್ಲ ಚರಮೂರ್ತಿಗೀತಂ |
ತವೆಯೊಲಿದಿರ್ದನೀತನ ಸುಕೃತ-
ಮವನಿಯೊಳ್ ಘನಮೆಂದು ಶಿಷ್ಯರ್
ಸುವಿನಯದೆ ಪೊಗಳುತ್ತಲಿರ್ದರ್ ಸಮ್ಮೋದದಿಂದೆ || ೧೩ ||

ಚರಮೂರ್ತಿಯಹ ಶಂಭುಲಿಂಗನ
ಪರಿಚರ್ಯವನಪೇಕ್ಷಿಸಲಿಲ್ಲ
ನೆರೆ ಸಾತ್ವಿಕ ಗುಣಕ್ಕೆ ಮೆಚ್ಚಿರ್ದಂ ಯೋಗಿವರರನು ।
ಪರಮ ಹಂಸಾಹ್ವಯನೀ ವೃತ್ತಿ
ಯುರೆ ಜನರೊಳಾಶ್ಚರ್ಯವು ಮೂಡಿ-
ಸಿರಲೊಂದು ದಿನವೀತಗೆ ಚಿದುಪದೇಶವನಿತ್ತನು ॥ ೧೪ ॥

ಈ ಪರಮ ಹಂಸಾರ್ಯ ಗುರುವಿಗೆ
ಪಾಪ ವಿರಹಿತ ಮೈಸೂರಮಲ
ಭೂಪತಿಯು ಕಟ್ಟಿಸಿ ಸಲಸಿಹಂ ನಿಜ ಪುರದೆ ।
ಲೋಪವಿಲ್ಲದುರೇ ಕೊಂಡಿಮಠ-
ಕೀ ಪರಿಯ ನಾಮದೆ ಕರೆವರದ-
ನಾ ಪವಿತ್ರಾತ್ಮನ ಮಠಕೆ ಮೈಸೂರಮಠವೆಂದು ॥ ೧೫ ॥

ಎರಡು ಮಠಗಳ್ಗಿವನೆ ಸ್ವಾಮಿಯು
ಚರವರನುರೇ ಕೊಂಡಿಯು ಮಠದೆ
ಚಿರಕಾಲಮಿರುತಿರ್ದನಾವಾಗಾದಡೊರ್ಮೆಯಿವಂ ।
ಇರುತಿಹಂ ಮೈಸೂರು ನಗರದ
ಪರಮ ಮಠದೊಳಗಿವನ ದರ್ಶನ-
ಕರಸನುರು ಸಂತಸದೆ ಬರುತಿಹನಪ್ಪಣೆಯ ಪಡೆದು ॥ ೧೬ ॥

ಈ ಮಠದೋಳ್ ವ್ಯವಸ್ಥೆಯ ಮಾಡು-
ತಾ ಮಹಿತನೂರೊಳಗಿರುತಿಹರ್
ಪ್ರೇಮದಿಂ ಮಾಹೇಶ ದಂಪತಿಗಳ್ ಭಕ್ತಿಯುತರು ।
ನೇಮ ಸಂಯುತರುರು ಗುಣಾಢ್ಯರ್
ನಾಮದೊಳುಮಾ ಶಂಕರಾರ್ಯರ್
ಸ್ವಾಮಿಯ ಕರುಣೆಯಿಂ ಸರ್ವ ವೈಭವಯುಕ್ತರಾಗಿ ॥ ೧೭ ॥

ಇವರ ಮಗನಿರ್ದಂ ಮಹಾಗುಣಿ-
ಯವನ ಕರೆವರ್ ಸದಾಶಿವನೆಂ-
ದವನಿಯೊಳ್ ಮಹಿಮಾಢ್ಯನಾಗುವ ಲಕ್ಷಣಯುಕ್ತನು ।
ಇವನಾದಡೀ ಪರಮಹಂಸ ಗು-
ರುವರ ಶುಶ್ರೂಷಾಪರನೆನಿಸಿ
ಶಿವ ಸಮಾನ ಮನವಮಂ ತಣಿಸಿರ್ದನಾದಡುಮೀತಗೆ ॥ ೧೮ ॥

ಚಿದುಪದೇಶಮುದಾಗಿರಲಿಲ್ಲ
ಸದಮಲ ಪರಮಹಂಸ ಗುರುವಿನ
ವಿದಿತ ಸತ್ ಕೃಪೆಯಿದ್ದಡಂ ಹಿತಸಮಯಂ ದೊರಕದೆ ।
ಪದುಳ್ದುಳಿದಿರ್ದುದೊಂದು ದಿನದೊಳ್
ಪದಪಿಂ ಯೋಗಿಯಾಜ್ಞೆಯ ಪಡೆದು-
ದಿದು ಶಂಭುಲಿಂಗಾರ್ಯ ಚರಮೂರ್ತಿಯು ಸ್ವಗ್ರಾಮಕೆ ॥ ೧೯ ॥

ತೆರಳಲುದ್ಯತನಾಗಿರಲ್ ಗುರು
ವರನಾತನಂ ಕರೆದು ಪೇಳ್ದಂ
ಪರಮ ಶಿಷ್ಯನೆ ನಿನಗೋರ್ವ ಶಿಷ್ಯಾಗ್ರಣಿಯನಾವೆ ।
ಕರುಣಿಪೆವಾವು ಲಿಂಗದೆ ಬೆರೆಯೆ
ಬರುವನಾತಂ ನಿನ್ನಯ ಶೋಧಿಸು-
ತರಿದವಂಗೋರ್ವಂಗೆ ನೀನುಪದೇಶವ ಮಾಳ್ಪುದು ॥ ೨೦ ॥

ಆವನ ನಾಮಂ ಸದಾಶಿವನೆಂ-
ದವನಿಯೊಳ್ ನಿನ್ನಯ ಜಸವನವ-
ನವಿರತಮುಳಿಸುತಿಹನೀಗಳವನೆಮ್ಮ ಸೇವೆಯೊಳೆ ।
ತವೆಬೆರೆದಿರುವನೆನುತಾತನಂ
ಜವದೆ ಕರೆಯುತೆ ತೋರುತಂ ಸಲೆ-
ಕವಿದ ಪ್ರೇಮದೆ ಪರಸಿದಂ ಮೇರೆಯಲಿ ಮಹಿಮೆಯೆನುತಂ ॥ ೨೧ ॥

ಅಪ್ಪುತಂ ಮೈದಡವುತಂ ಕರ-
ವೊಪ್ಪವಂದದೆ ಕರವ ಶಿರದೊಳ್
ತಪ್ಪದಿರಿಸುತೆ ಕಂಣೀರುದುರೆ ಧ್ವನಿಯು ಕಂಪಿಸಲು |
ಉಪ್ಪಡಿಪ ವಾಣಿಯು ತಡೆದಿರಲ್-
ಕಪ್ಪಣೆಯಪಾಲಿಸಲ್ ಬಾಡಿದ
ಸೊಪ್ಪಿನಂದದೊಳಿಹ ಮೊಗದೆ ತೆರಳ್ದಂ ಭಾಷ್ಪಮಿಗೆ || ೨೨ ||

ಗಾಳಿಗೆ ಪಿಡಿದ ಧ್ವಜದ ಮೂಳ್ಕಿಯೊ-
ಳಾಳುತಂ ತನ್ಮನಂ ಗುರುವಂ
ತಾಳುತಂಳುವೆಯ ಕಾಯಂದೂರ ಮಾರ್ಗವ ಪಿಡಿಯಿತು |
ಭಾಳಲೋಚನ ಸಮಗುರುವರನ-
ನೇಳಿಗೆಗಾಗಿ ಜೀವಂ ನೆನೆಯು-
ತಾಳಿನಂದದೆ ತಳೆದು ಪರವಶತೆಯು ಬಂದನೂರ್ಗೆ || ೨೩ ||

ಮಾದಾಪುರದ ಭಕ್ತರೆಲ್ಲರ್
ಮೋದಾತಿಶಯದಿಂ ನಿಜಗುರುವ-
ನಾದಿತ್ಯ ಸಮತೇಜನಂ ಕಂಡೆರಗಿದರ್ ಬಂದು |
ವೇದೇಳಿತಾತ್ಮನ ಶಿವನ ತ-
ತ್ವಾದಿ ಪ್ರಣವಮಂ ಮೀರಿರುವ-
ನಾದಿಪ್ರಥಿತ ರೂಪನಾಶಿಷಮಂ ಪಡೆದರವರು || ೨೪ ||

ಆಚಾರಾತ್ ಪ್ರಥಮಸ್ತು ಧರ್ಮ
ಆಚಾರಾತ್ ಪರಮ ತಪ ಏವ-
ಚಾಚಾರಾತ್ ಪರತರ ಜ್ಞಾನಮಾಚಾರತಃ ಕಿಂ ನಹಿ ಸಾಧ್ಯತಿ |
ಆಚಾರ ಫಲಮಂ ಶ್ಲೋಕಮಿದು-
ಮಾಚಾರ ಸತ್ವವ ತಿಳಿಪುದ-
ಕ್ಯಾಚಾರಮಿದರಂ ಪಾಲಿಸಲ್ ವರ್ಣಿತವಿದೀಯೆ || ೨೫ ||

ಇದನರಿದಿರುವ ಶಂಭುಲಿಂಗಂ
ಸದಮಲಾಚಾರವ ಪಿಡಿದು ಸಲೆ
ಪದುಳ್ದಿಷ್ಟ ಲಿಂಗಾರ್ಚನೆಯ ಮಾಡುತ್ತೆ ಪ್ರತಿದಿನದೆ ।
ಪದಪಿಂದೆ ಸರ್ವಪ್ರಿಯನಾಗಿ
ಮುದದಿಂಪೆ ನಿಜ ಮಠದೊಳಿರ್ದಂ
ಸದಮಳಿನ ಭಕ್ತರ ಭಕ್ತಿಯಂ ಕೈಕೊಳುತಲೆಸೆದು ॥ ೨೬ ॥

ಆ ಚರಮೂರ್ತಿಗೊಲೆದು ಕರ್ಮದ
ಸಂಚಯುವ ನೆರೆ ಕಳೆದುಕೊಳ್ಳಲ್
ಸೂಚಿಸಲ್ ಬರುತಿಹರಮಲ ಭಕ್ತರ್ ಬಿನ್ನಪಮನೆ ।
ವಾಚೆಗತೀತವಹ ಬಿನ್ನಹದ
ಸೂಚನೆಗಳಿರುತಿರಲ್ ಮನದೋಳ್
ಯೋಚಿಸುತಲಿರ್ದಂ ಮನೆಮನೆಯ ಪೂಜೆಗಾಗಲೆದು ॥ ೨೭ ॥

ಎಂತೆನಲ್ಕೆಮ್ಮಯ ಪೂಜೆಯಂ
ಸಂತತಂ ಭಕ್ತರ ಮನೆಮನೆಗೆ
ಭ್ರಾಂತಿಯಿಂದೆ ಪ್ರದರ್ಶಿಸುವದೆಮ್ಮೀ ಬಾಳಾಯಿತು ।
ಚಿಂತೆಯಂ ತಪ್ಪಿಸಿಕೊಳ್ಳುವದೆ
ಶಾಂತಿಗುಪಾಯಮೀ ಪೂಜೆಯಂ
ಸಂತಸದೆ ಗುಪ್ತಮಾಗೆಸಗುವದದು ಶ್ರೇಷ್ಠಮಹುದು ॥ ೨೮ ॥

ಎಂದು ಯೋಚಿಸುತಿಷ್ಟ ಲಿಂಗವ-
ಮಂದ ಮುದದಿಂದಮಳ್ಳೈಕ್ಯ ಗೈ-
ದಂದದಿಂದೇಕಾಂತ ಸ್ಥಲದೆ ಪೂಜೆಯುಗೈಯ್ವನು ।
ಚಂದದಿಂ ಲಿಂಗಿಗೃಹಕ್ಕೈದುತ-
ಲಂದು ಭಿಕ್ಷೆಯ ಬೇಡಲಾಗಿಹ-
ನೊಂದುಗೊಳಿಸುತೆ ಮಾನಾಪಮಾನಂಗಳಂ ಯೋಗಿ ॥ ೨೯ ॥

ಹುಚ್ಚನಂದದೆ ತಿರುಗುತಲಿರುವ
ಸಚ್ಚರಿತ್ರನ ಕಂಡು ಭಕ್ತರ್
ಬೆಚ್ಚಿ ಬೆದರುತೆ ಮರುಗಲಾದರ್ ವಿಸ್ಮಯದಿಂದಲೆ |
ರೊಚ್ಚಿನೊಳಿವಂಗಾರಾದಡುಂ
ಮೆಚ್ಚದೆ ಮದ್ದು ಕೊಟ್ಟಿರಲಹುದು
ನಿಚ್ಚಮೆಲ್ಲರ್ ಕೂಡಿಂತು ಮಾತಾಡುತಿರ್ದಪರು || ೩೦ ||

ಶಿವಪೂಜೆಯೇನೀ ಶುಭಾತ್ಮನ
ಶಿವಭಜನೆಯೇನೀ ಪರಾತ್ಮನ
ಶಿವಮನನವೇನೀ ನಿಜಾತ್ಮನ ಸ್ವಾಚರಣೆಯೇನು |
ಶಿವಕಥನವೇನೀ ಸುಖಾತ್ಮನ
ಶಿವಸುಗುಣವೇನೀ ಮಹಾತ್ಮನ
ಶಿವರೂಪನಾದೀತಗೆಲ್ಲಿಂದೀ ಫಲವೊದಗಿತೊ || ೩೧ ||

ಎಂದು ಮರಗುತೆ ಮಾತನಾಡುವ
ನಿಂದಿತ ಭಕ್ತರೊಲವ ಲೆಕ್ಕಿಸ
ದಂದಿನಿಂ ಮತ್ತಿನಿತು ಮರುಳನ ತೆರದೆ ನಟಿಸಿದನು |
ಕುಂದದೆ ತಿಳಿವುದೆಂತೆನಲ್ ಸಲೆ
ಮಂದಿಯಂ ಕಂಡೊಡನೆ ಕಲಹವ-
ನಂದು ಮಾಡುತೆ ಬಡಿಸಿಕೊಳ್ಳುವನಿದು ಜ್ಞಾನಿವಿದಿತಂ || ೩೨ ||

ಪರಮ ಜ್ಞಾನಿಗಳಿಗೀತನುರೆ
ಮರುಳನಾಗಿಯೆ ತೋರಲಿಲ್ಲಂ
ನೆರೆ ಸುಜ್ಞಾನಿಗಳವನಡಿಗಳಿಗೆರಗುತಿರ್ದಪರು |
ಅರಿಯಲಜ್ಞಾನಿಗಳೀತಂಗೆ
ಕರುಣೆಯಿಲ್ಲದೆ ಕಲ್ಲೆಸೆಯುವರ್
ಕರವೀಕ್ಷಿಸುತೆ ಭಾಲಕರ್ ಬೆಂಬತ್ತಿ ಪೊಡೆಯುವರು || ೩೩ ||

ಅಂಜಲಿಲ್ಲವನಾರು ಬಡಿದಡು-
ಮಂಜಿಸಲಿಲ್ಲವನಾರನಾದಡು-
ಮಂಜುತೋಡುತಲಿರ್ದರ್ ಕೆಲರ್ ಕೆಲಬರ್ ಬಡಿವರು |
ಅಂಜದೆ ಗುಪ್ತಲಿಂಗ ಪೂಜೆಯು
ನಂಜುಗೊರಲ ಸಮಾನನೆಸಗುವ-
ನಂಜಿಕೆಯ ಕಳೆವಿವನ ನೇಮವನೀಗಳೊರೆಯುವೆಸು || ೩೪ ||

ಅಮಳೈಕ್ಯ ಗೋಳಿಪಂ ಲಿಂಗಮಂ
ಸಮತೆಯಿಂ ಗಂಟಲೊಳಗಿಡುವುದೆ-
ಯಮಳೈಕ್ಯಮೆನಿಪುದು ವಿಚಾರಿಸೆ ಗುಪ್ತಸ್ಥಾನದೆ |
ಕ್ರಮದಿಂದಲ್ಪ ಕಾಲದೆ ಯಜಿಸು-
ತಮಳೈಕ್ಯ ಗೋಳಿಪಂ ತೆಗೆಯುತಂ
ಸುಮನಂ ಲಿಂಗಿಗಳ ಮನೆಯೋಳ್ ರೊಟ್ಟಿಯ ಬೇಡುವಂ || ೩೫ ||

ಪ್ರೇಮದೆ ರೊಟ್ಟಿಯಂ ನೀಡಿದೊಡೆ
ನೇಮದೆ ತೆಗೆದುಕೊಂಡುಣುವನಿವ-
ಗ್ರಾಮನೆಯವರ್ ಬೇಸರದಿಂದಲೀಯಲ್ ಕೊಳ್ಳದೆ |
ಈಮನೋಜ್ಞಂ ಬೈಸಿಕೊಳ್ಳುತೆ
ಕಾಮಹರನಂ ನೆನೆದು ಮರಳುತೆ
ಸ್ವಾಮಿ ಹುಚ್ಚು ಚರಂತೆಪ್ಪನೆಂಬುವ ಪೆಸರ ಪಡೆದಂ || ೩೬ ||

ಮಲವಿಸರ್ಜನೆಯಂ ಗೆಯ್ದಿವಂ
ಸಲೆ ಗುದವನೆಡಗೈಯಿಂ ತೊಳೆಯು-
ದಲೆ ವಾಮಪದದಿಂ ತೊಳೆದುಕೊಳ್ವಂ ಲಿಂಗವೋಹಿ |
ಅಲಘು ಮಹಾತ್ಮನೀ ಕೃತಿಯಿಂದೆ
ಸಲುವಭಿಪ್ರಾಯಂ ಹೊಳೆಯುವದು
ಸಲುವದೆಡಗೈ ಇಷ್ಟಲಿಂಗದ ಗರ್ದುಗೆಗಿಂತಿದು || ೩೭ ||

ಇವನ ಶಯನದ ವಿಧಿ ವಿಚಿತ್ರಂ
ಭುವನದೊಳ್ ಮೊಳಕಾಲ್ಕೈಗಳಂ
ತವೆಯೂರಿ ಯೋಗಿಯು ನಿದ್ರಿಪಂ ಕ್ಷಣಕಾಲ ಮಾತ್ರಂ |
ಸುವಿನಯಂ ನಾಶಿಕವ ಕರದಿಂ
ಪವಣಿಂ ಮುಟ್ಟಲಾರನೆಂದುಮು-
ಭವನ ಸ್ಮರಣೆಯೊಳಿರ್ಪಂ ಶಂಭುಲಿಂಗ ಚರಮೂರ್ತಿ || ೩೮ ||

ಚನ್ನವೀರಯನೆಂಬಿವನಣ್ಣ-
ನನ್ನದಿಂ ಗಣ ಸಂತರ್ಪಣೆಯ
ಮನ್ನಣೆಯಿಂದ ಗೆಯ್ದಂ ಧಾನ್ಯ ರಾಶಿಯ ಕಣದೊಳೆ |
ಸನ್ನುತನಾಗ ಗಣ ಪಂಕ್ತಿಯೊಳ್
ತನ್ನ ಲೀಲೆಯೊಳ್ಳೆದಿ ಕುಳಿತಂ
ಚನ್ನಮೇನೆ ಪಂಕ್ತಿಯು ನಡೆಯುತಿರೆ ನೋಡಿದನೀತನ || ೩೯ ||

ಕುಲಗೇಡಿ ಹುಚ್ಚನೆ ನೀನೇಕೆ
ಸಲೆಯೀ ಪಂಕ್ತಿಯಲ್ಲಿ ಕುಳಿತಿಹೆ-
ಯಲಘು ಮಾಹೇಶ್ವರ ಪಂಕ್ತಿಯಿದು ಬೇಡಮೇಳೆನುತೆ |
ಛಲದಿಂದಲೇಳಿಸುತಿರಲವಂ
ಬಲವಾದ ಹಟದಿಂದೇಳದಿರೆ
ಬಲಿದ ಕೋಪದೆ ಚನವೀರಯ್ಯನವನ ಮಸ್ತಕಕೆ || ೪೦ ||

ಬಲವಾಗಿ ತಾಡಿಸುತಿರಲಾಗ
ತಲೆಯೊಡೆದು ರಕ್ತಂ ಸುರಿಯುತಿರೆ
ನಿಲದೆ ಜನರೈದುತೆ ಕಸಿದುಕೊಂಡರ್ ತದ್ದಂಡವ |
ಮಲಹರನ ಸಮನುಣತೊಡಗಿದಂ
ನಲೆದದಂ ಜನರೀಕ್ಷಿಸುತಿರಲ್
ಬಲಿದ ರಕ್ತಂ ಪಾಲಿನಂದದೆ ಕಂಡಿತಾ ಯಡೆಯೊಳ್ || ೪೧ ||

ಎಲ್ಲರಚ್ಚರಿಸಲ್ ನುಡಿದ ನಿಂ-
ತಲ್ಲಿ ನೆರೆದಿಹ ಭಕ್ತರಿದಿರೊಳ್
ಸಲ್ಲಲಿತ ಭಕ್ತರೆ ಪೇಳಿರಾರ್ ಕುಲಜರೆಂಬುದನೆ ।
ಎಲ್ಲವ ಸಹಿಸುತಿಹರೆ ಕುಲಜರೊ
ಉಲ್ಲಸದೆ ಹಿಂಸೆಯನೆಸಗುವರೊ
ಬಲ್ಲವರು ಪೇಳಿರಿ ತಿಳಿಯದವರಾಲಿಸಿರಿ ನಿಜವ ॥ ೪೨ ॥

ಕೊಲ್ಲುವವನೇ ಮಾದಿಗನೆಂದು
ಸೊಲ್ಲಸದೆ ಬಸವೇಶನೊರೆದಂ
ಕಲ್ಲೆದೆಯರಿವರೆಂತು ಕುಲಜರ್ ನೀವೆ ಯೋಚಿಸಿರಿ ।
ಸೊಲ್ಲಿಪರ್ ಕುಲಗೇಡಿಯೆಂದೆನ-
ಗುಲ್ಲಸಿತಮಲ್ಲಿದುವೆನುತಿರಲ್-
ಕಲ್ಲಿಗಾವೂರ್ ಪಟ್ಟದಾರ್ಯಂ ಬಂದೊರೆದನಿಂತು ॥ ೪೩ ॥

ಏಳ್ದು ನಡೆ ಕುಲಗೆಟ್ಟವನೆ ನೀಂ
ಕೇಳ್ದರೆ ನೋಡಿ ಸಾಕಾಯ್ತಿದಂ
ತಾಳ್ದು ಭಕ್ತಿಯ ಭಕ್ತರ್ ನಿನಗೆ ಗುರುಚರಪಟ್ಟವ ।
ಆಳ್ದು ಸುವಿಚಾರವನೆಸಗಿಸುತೆ
ಬೀಳ್ದರವರಾ ಮೋಸ ಕಡಲೊಳ್
ಬಾಳ್ದು ಶಿವಧರ್ಮಕೆ ಕಲಂಕವ ಪರ್ಚಿದೆಯನುತಿರೆ ॥ ೪೪ ॥

ಎಂದ ನುಡಿಯಂ ಕೇಳ್ದು ಶಿವ ಶಿವ-
ಯೆಂದು ಮುಖದಿಂ ಲಿಂಗವ ತೆಗೆದು
ವಂದಿಸುತೆ ಮತ್ತದನವಮಳೈಕ್ಯಗೊಳಿಸುತಲಾಗಳೆ ।
ಅಂದದೆ ನಡೆದನಲ್ಲಿಂದಾಗ-
ಳಂದದನೀಕ್ಷಿಸಿದ ಶಿವಭಕ್ತ
ವೃಂದಮುಚ್ಚರಿಸುತಿರೆ ನಡೆದಂ ಮುಂದದಿಂ ಯೋಗಿಯು ॥ ೪೫ ॥

ಪಿಡಿಯಲ್ ಜನರ್ ಯತ್ನಿಸಿದಡುಂ
ವೃಡರೂಪನವರ್ಗ್ಗೀತಂ ದೊರೆಯು-
ದಡಿಗಡಿಗೆ ಶಿವನಂ ನೆನೆಯುತ್ತಲಾವೂರನುಳಿದು |
ನಡೆದನೆತ್ತಲೊ ಮರುಗಿ ಜನರ್ಕ-
ಳೊಡೆಯನ ವೃತ್ತಿಯಂ ನೆನೆದಿಂತು
ನುಡಿಯುತಿರ್ದ್ದರ್ ತಮ್ಮ ತಮ್ಮೊಳ್ ಪೇಳ್ವನದನಿನಿತು ॥ ೪೬ ॥

ಓರ್ವನೆಂದಂ ಮರುಳನಲ್ಲಿವ-
ನುರ್ವರೆಯೊಳಿವನಂತಪ್ಪ ನುಹಿ-
ಮರ್ವ್ವಿರಳವೀ ಜಗದೆ ದೊರೆವುದು ದೃಷ್ಟಾಂತಕಾಗಿ |
ಸರ್ವ ಕಲ್ಯಾಣದ ಶರಣರೋಳ್
ಶರ್ವ ಸಮನಾಗಿರ್ದ್ದಡುಮವಗ-
ಗರ್ವ್ವದಿಂ ಕರೆದರ್ ಮರುಳಶಂಕರದೇವನೆಂದು ॥ ೪೭ ॥

ಈತನಾ ಬಸವೇಶನ ಮಹಾ
ಪೂತಮಾದ ಪ್ರಸಾದ ಕುಂಡವ-
ನೋತು ಸಾರುತಲಲ್ಲಿ ಕುಳ್ಳಿರ್ದ್ದಲ್ಲಮ ಗುರುವಿನ |
ಖ್ಯಾತ ಕೃಪೆಯಿಂ ಪಡೆದಂ ಸಾರ್ದ್ದ-
ತೀತ ಚರಿತವಿದು ಪ್ರಶಿದ್ಧಂ
ನೀತಿವಿದನರಿದು ಮತ್ತೋರ್ವ್ವಂ ನುಡಿದನಾಗಿಂತು ॥ ೪೮ ॥

ಅಹುದಹುದು ಶರಣರ ಚರಿತ್ರಂ
ಮಹಿಯೊಳೆಸೆವುದು ಮರುಳಾಗಿನಿತು
ಮಹಿತರ ಲೀಲೆಯಂ ಮಹಾತ್ಮರೆ ಬಲ್ಲರ್ ನಿಜಮಿದು |
ಸಹನೆಯಿಂದಿದನರುಪಲ್ ಜಗಕೆ
ಮಹಿಮ ಘಟಿವಾಳಯ್ಯ ಶರಣನ
ಸಹಜಮಾಗಿಯೆ ಲಿಂಗವ ಕಸಿದವಗೆ ಹುಚ್ಚನೆಂದು ॥ ೪೯ ॥

ಅಣಕಿಸಿದ ಕಲ್ಯಾಣ ಶರಣರ
ಪ್ರಣವಮಯ ಲಿಂಗಂಗಳಡಗಲ್
ಪ್ರಣಮಿಸಲ್ ಕೊಡುತವನ ಲಿಂಗವ ತತ್‌ಕ್ಷಣದೊಳವರ |
ಪ್ರಣುತ ಲಿಂಗಗಳೆಸೆದವೆಂದಾಂ
ತಣಿದಿರ್ದ್ದಿಲ್ಲ ಕೇಳುತೀಗಳ್
ತಣಿವಾಯಿತೀ ಲೀಲೆಯ ಕಾಣುತೆನೆ, ಮತ್ತೋರ್ವನು || ೫೦ ||

ಒರೆದನೆಂತೆನೆ ಕರಡೀಶ ಶಿವ
ಶರಣನ ಗುರುವು ಮರಿದೇವನೆಂ-
ಬುರು ಶಿವಯೋಗಿಯೀ ಮರುಳಲೀಲೆಯ ಧರಿಸಿ ಮುದದೆ |
ಮೆರೆದಿರ್ದನೆಂದಾ ಪುರಾಣದೆ
ನೆರೆ ಕೇಳರ್ದ್ದೆನಾಂ ಕಥೆಯಿವನ
ಸರಸಲೀಲೆಯ ಕಾಣುತಲೆನಗೆ ದಿಟವಾಯಿತೆನಲು || ೫೧ ||

ಕೇಳುತೆಲ್ಲರ್ ನುತಿಸಲಾದರ್
ತಾಳಿದರ್ ಮುದಮಂ ಪಡೆದವರ್
ಭಾಳಲೋಚನನೆಂದರಿದು ತನ್ನಾಮವ ಭಜಿಸುತೆ |
ಕೀಳತನಮಂ ತೊರೆದು ಪಾಪದ
ದಾಳಿಯಿಂ ಕಡೆಗಾದರಾತನ
ಬೋಳೈಸಲೋಸುಗ ಪುಡುಕಲಾಗಿಹರನುತಾಪಡೆ || ೫೨ ||

ಗದುಗಿನೊಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತಮಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳೇಳನೆಯ ಸಂಧಿಯಿದುವೆ || ೫೩ ||

ಅಂತು
ಸಂಧಿ ಏಳಕ್ಕಂ ಪದಗಳು ಮೂರುನೂರ್ದಾತೊಂಭತ್ತೇಳಕ್ಕಂ
ಮಂಗಲಂ



# ಎಂಟನೆಯ ಸಂಧಿಯು

ಪರತರ ಶಂಭುಲಿಂಗಾಭಿದಂ
ಚರಮೂರ್ತಿಯುರೆ ಬಂದುಳಿಯುತಂ
ಮೆರೆವ ಗಂಜೀಗಟ್ಟಿಯಲ್ಲಿಯೆ ಶಿಷ್ಯನಂ ಪಡೆದಂ ॥ ಪಲ್ಲ ॥

ಪರಮ ವೇದಂಗಳನೆ ನೀಂ ಪರ-
ತರನೆ ಸುನಕಂಗಳನಾಗಿಸುತ-
ನುರು ಗಣರ ವ್ಯಾಧರನೆಸಗುತ್ತೆ ಮಾಯಿಕ ಮೃಗಗಳ |
ನೆರೆ ಬೇಂಟೆಯಾಡುವ ನೆಪದಿಂದ-
ಲುರೆ ಫಲ್ಗುಣನ ಭಕ್ತಿಯ ನೋಡಿ
ನಿರಘ ಪಾಶುಪತಾಸ್ತ್ರವನಿತ್ತೆ ಶಿವನೆ ಪೊರೆಯನ್ನ ॥ ೧ ॥

ಇಷ್ಟಲಿಂಗವನಮಳ್ಕೈಕ್ಯಗೊಳಿ-
ಸಿಷ್ಟವಹ ಪ್ರಾಣವ ಲಿಂಗವೆಸ-
ಗಷ್ಟಮದಮಂ ಕಳೆದ ಗುರುವಂ ಕಂಡರುವಿನಲ್ಲಿ ।
ಸಿಷ್ಟಚರನಾಗರಿದು ಜೀವರ-
ವೃಷ್ಟಿಯ ಸಮಷ್ಟಿಯಭೇದವಮಂ
ತುಷ್ಟಿಯಂ ಭಸಿತಮನಾಗೆಸಗಿ ಶಂಭುಲಿಂಗಾರ್ಯಂ ॥ ೨ ॥

ಚರಿಸುತಂ ಗಂಜೀಗಟ್ಟೆ ಗುರು
ಕರಲೀಲೆಯಿಂ ಭಕ್ತರ ಪೊರೆಯು-
ಲುರು ಹರುಷದಿಂ ತಾನೆ ದಯಮಾಡಿಸಿ ನೆಲೆಸಿರ್ದನು ।
ಚರಿಸುತಿರ್ದಂ ಮರುಳನಂದದೆ
ನೆರೆ ನಿತ್ಯದೋಳ್ ಭಕ್ತರನರಿದು
ಕರುಣಿಯಂದಿನ ತೆರದೆ ರೊಟ್ಟಿಯ ಭಿಕ್ಷೆಯಃ ಬೇಡ.ತೆ ॥ ೩ ॥

ಒಂದೆ ರೊಟ್ಟಿಯನಿಸಿದುಕೊಳ್ವಂ
ಕುಂದದಿನ್ನೊಂದಂ ಕೊಡಲದಂ
ತಂದು ದೀನರ್ಗಿವಂ ಕೊಡದೊಡಿರ್ಪಂ ಮುದದೊಳೆ ।
ಕಂದದೆನಿತು ದಿನಂಗಳಾದಡು
ಮಂದದಿಂ ಚಲಿಸುತಿರ್ದನವ-
ನೆಂದಿನಂತುರೆ ನಗುತೆ ನಲಿಯುತೆ ಜನರ ನಗಿಸುತಲೆ ॥ ೪ ॥

ಲಿಂಗವಂತರ್ ಭಿಕ್ಷೆಯನಿವಗೆ
ಭಂಗಿಸಿದರಾರಾರುಮೀಯದೆ
ತುಂಗನಳುಕದಲಿರ್ದನಾ ಚರಮೂರ್ತಿಯು ಶಾಂತಿಯೋಳ್ ।
ಪಿಂಗದೆ ತಾವೆ ನೊಂದು ಮನದೊಳು
ಭಂಗವಿಲ್ಲದೆ ನೀಡಲಾದರ-
ನಂಗಹರನಿವನೆಂದು ಬಗೆಯುತೆ ಭಕ್ತರಾಗಿಹರು ॥ ೫ ॥

ಸರ್ವರುದ್ಯಮದೊಳ್ ಬೆರೆಯುತ್ತೆ
ಸರ್ವರಂ ನೆನೆಯಲ್ ಬೋಧಿಸುತೆ
ಗರ್ವಯುತ ಜನರಂ ತಿರಸ್ಕರಿಸುತ್ತಲಿರ್ದಪನು |
ಓರ್ವನೆ ಶಿವನ ಭಜಿಸುತೆಲ್ಲೆಡೆ
ಗುರ್ವಿ ಸಂಚರಿಸುತಿಹನದಕ್ಕೆ
ಗರ್ವಿಸುತಲಣಕಿಸುವ ಜನರ್ಗೆ ಕಲ್ಲನೆಸೆಯುವನು ॥ ೬ ॥

ಅಂತು ಕೆಲದಿನವಿರ್ದು ಚರಿಸುತೆ
ಸಂತಸದೆ ಬೇರೂರ್ಗಳಿಗೆ ತೆರ-
ಳ್ದಂತರಿಸುತಿರೆ ಪಲವು ತಿಂಗಳ್ಕತ್ತೆ ಮರುಳುತಿರೆ |
ಸಂತನಂ ಬಾಲರ್ಕುತ್ತಿ ಬಿಡ-
ದಂತರಿಸದಲೆ ಕಂಬಳಿಯ ಪಿಡಿ-
ದಿಂತು ನುಡಿದರ್ ಹುಚ್ಚನೀನೆಲ್ಲಿಯೂ ಪೋಗಬೇಡ ॥ ೭ ॥

ತಂದು ಕೊಡುವೆವು ನಿನಗೆ ರೊಟ್ಟಿಯ-
ನೆಂದು ಬಾಲರ್ ತಮ್ಮ ಮನೆಗಳಿ-
ಗಂದದಿಂ ಪೋಗುತ್ತೆ ಕಜ್ಜಾಯಗಳ ತರಲವನು |
ಕಂದುಗೊರಲನ ರೂಪನವರಿಂ
ಛಂದದಿಂದಿಸಿದು ಕೊಳುತವುಗಳ
ಕುಂದದಲೆ ಚೂರುಗಳನಾಗಿಸಿ ಮೇಲೆ ತೂರುತಿರೆ ॥ ೮ ॥

ಬಾಲಕರ್ ವಿಸ್ಮಯದಿಂದಲುರೆ
ಮೇಲೆ ನೋಡಲ್ ಕಾಣದಾದವು
ಲೀಲೆಯಿಂ ಕೆಳಗೀಕ್ಷಿಸುತ್ತಿರೆ ಕಂಡವವು ಕ್ಷಣದೆ |
ಪಾಲಿಸುತವನನುಜ್ಞೆಯ ಕೊಂಡು
ಲಾಲಿಸುತಲಾ ರೊಟ್ಟಿ ಚೂರ್ಗಳ
ಮೇಲಯಿಸಿ ತಿನ್ನುತಲೂರೊಳೀ ವಾರ್ತೆಯ ಪೇಳ್ದರು ॥ ೯ ॥

ಪರಕಿಸುತೆ ವೇಳ್ಚುತೆ ನುತಿಸುತ್ತೆ
ಸರಸದಿಂ ನೆರೆ ತಮ್ಮ ತವೊಳ್ಮೆ
ನೆರೆದು ಮಾತಾಡುತಲಿರ್ದಪರ್ ನೆನೆದು ಸತ್ಕಥೆಯ ।
ಅರಿದೆನ್ನನೋರ್ವಂ ಶಿವಶರಣ
ಚರಿತಂಗಳಿವನಿಂ ದಿಟವೆನಿಸಿ
ಕರವೆಸೆಯಲಾದವು ಕೇಳಿರೆನಗಾದ ನಿಶ್ಚಯವ ॥ ೧೦ ॥

ನೆರೆ ಮರಿಯಸ್ವಾಮಿಯುರು ಸಮಾಧಿಯು
ಕರವೆಸೆದಿಹುದು ಬಳ್ಳಾರಿಯೊಳ-
ಗುರೆ ಕೇಳಿರ್ದೆನೀತನ ಪುರಾಣದೊಳೆಂತೆನಲ್ಕೆ ।
ಪರಮ ಭಕ್ತಂ ಮನೆಯ ಕಟ್ಟಿಸು-
ತಿರುವಾಗವಗೆ ಧನದ ಕೊರತೆಯು
ಸರಸವೆನೆ ತೋರಲ್ ನೆನೆಯ ಮಣ್ಣೊಳೆ ಪೊನ್ನೆಸೆಯಿತು ॥ ೧೧ ॥

ಮತ್ತೋರ್ವನಿಂತೆಂದನಹುದಹು-
ದುತ್ತುಂಗ ಬಸವ ಪುರಾಣದೊಳೆ
ಚಿತ್ರಾತ್ಸಕ್ಯದಿಂದೆ ಮಡಿವಳಮಾಚಾರ್ಯ ಕರದಿಂ ।
ಮುತ್ತಾಯಿತುರೆ ಸಿಡಿದ ನೀರ್ಪನಿ
ಮತ್ತಾರನ್ನ ಚಿನ್ನಗುಂಪಾ-
ಯಿತ್ತೆಂದು ಕೇಳಿರ್ದೆನದಿಂದು ಸತ್ಯಮಾಗಿಹುದು ॥ ೧೨ ॥

ಇನ್ನೋರ್ವನೆಂದಂ ಸಂತಸದೊ-
ಳುನ್ನತ ಶರಣೆ ಮಲ್ಲಮಾಂಬೆಯು
ಸನ್ನುತ ಹೇಮರಡ್ಡಿಯ ಸೊಸೆಯು ನಷ್ಟಮಾಗಿರ್ದ ।
ಮನ್ನಣೆಯ ವಿಭವವ ತೋರಿಸುತೆ
ತನ್ನ ಮನೆಯವರಂ ಪೊರೆದಳೆಂ-
ದೆನ್ನ ಹೃದಯದೊಳಳಿದ ಕಥೆಯಿದರಿಂದೆ ದಿಟಮಹುದು ॥ ೧೩ ॥

ಇಂತು ಸಜ್ಜನರೊಲಿದು ನುತಿಸುತ-
ಲಂತು ದುರ್ಜನರವನ ಪಳಿಯುತ-
ಲಾಂತು ವಿಮಲತೆಯನವಿಮಲತೆಯ ತಮ್ಮ ಹೃದಯದಲಿ ।
ಸಂತಸದೆ ಸದ್ಭಕ್ತರಾಗುತೆ
ಸಂತತಮಿವಗೆ ರಿಪುಗಳಾಗುತೆ
ಚಿಂತಿಸಲ್ ಸುಫಲವ ದುಷ್ಫಲವ ಪಡೆಯುತಿಹರಲ್ಲಿ ॥ ೧೪ ॥

ಮತ್ತಮದ್ಭುತ ಲೀಲೆಯ ಪೇಳ್ವೆ-
ನುತ್ತಮರಿವನಿದಿರೊಳೆ ಬೀಡಿಯ
ಸುತ್ತಲೆಲ್ಲಿಯುಮರಿಯೆ ಸೇದುತಲಿರಲಿಲ್ಲವೆಂದುಂ ।
ತತ್ತರಿಸುತಾರಾದಡುಮದಂ
ಮತ್ತೆ ಸೇದಲ್ ಬುದ್ಧಿಗಲಿಪಂ,
ಸತ್ತಮಂ ಬೀದಿಯೊಳೆ ಸಂಚರಿಸುವ ಸಮಯದಲ್ಲಿ; ॥ ೧೫ ॥

ಒಂದು ದಿನದಲ್ಲೋರ್ವಂ ಕೆರದೊ-
ಳಂದದಿಂ ತುಮರೀಯಲೆಯೊಳುರೆ
ಸಂದಿಸುತೆ ತಂಬಾಕವನಿರಿಸಿ ಮಾಡಿ ಬತ್ತಿಯನು ।
ಛಂದದಿಂ ದಾರದಿಂ ಕಟ್ಟುತೆ
ಮುಂದೆ ಹೊರಟೆರ್ದಂ ಸೇದುತ್ತೆ
ಪೊಂದುತವನಂ ದಂಟನೊಂದಂ ಕೊಂಡು ಸೇದುತಿರೆ ॥ ೧೬ ॥

ಬೆಂಕಿಯಿಲ್ಲದ ಹೊಗೆಯ ಕಾಣುತೆ
ಶಂಕೆಯಿಲ್ಲದಲಾತಂಗೆ ಘನ
ಕಿಂಕರನಾಗಿ ನುತಿಸುತಿರ್ದನವನೀ ಲೀಲೆಯ ।
ಪಂಕ ವಿರಹಿತ ಶಂಭುಲಿಂಗಾ-
ಖ್ಯಂ, ಕರಂ ಶಿವನುತಿ ಗೆಯ್ಯುತೆ
ಮಂಕು ಮನುಜನೆ ನುತಿಸದೆನ್ನಂ ಶಂಕರನ ನುತಿಸು ॥ ೧೭ ॥

ಎಂದು ನುಡಿಯುತೆ ಚರಮೂರ್ತಿಯಾ-
ಗಿಂದುಧರನಂ ಸ್ಮರಿಸುತೆ ನಡೆದ-
ನಂದದನರಿಯುತಾ ನರನಾಗ ನಮಿಸಲ್ ಯತ್ನಿಸಿ |
ಮಂದ ಮತಿಯು ಕೃತಾರ್ಥನಾಗುತೆ
ಪೊಂದಿ ಭಕ್ತಿಯ ಶಿವನ ನುತಿಸುತ-
ಮಂದ ಹರುಷದೆ ನಿತ್ಯಮಾಗುರು ದರ್ಶನವ ಪಡೆದಂ || ೧೮ ||

ಇಂತು ಲೀಲೆಯು ಘಟಿಸುತಿರಲ-
ತ್ಯಂತ ದುಃಖದೆ ಜನಕೆ ಪೇಳ್ದನ-
ದೆಂತೆನಲ್ ಕೇಳಿರಿ ಸಜ್ಜನರೆ ಎನ್ನೋರ್ವ ಶಿಷ್ಯಂ |
ಶಾಂತನವಂ ಸದಾಶಿವಾಖ್ಯಂ
ಕಾಂತನಹ ಮದ್ಗುರುವಿನನುಜ್ಞೆ -
ಯಂತೆ ಶೋಧಿಸುತೆನ್ನನೆ ಕಾಣಲೋಸುಗ ಬರುತಿಹಂ || ೧೯ ||

ಕಾನನದೆ ಕ್ಷುದೆಯಿಂ ಬಳಲುವಂ
ಸ್ವಾನುರಾಗದೆ ಕೊಡುವೆನವಂಗ-
ನೂನಮಿದು ನೋಡಿರಿ ಹಶಿವೆಯಂ ಕಳೆವೆನೆಂದೆನುತೆ |
ಮಾನಿತಂ ರೊಟ್ಟಿಯ ಮುರಿಮುರಿದು
ಧ್ಯಾನಿಸುತೆ ಶಿವನಂ, ತೂರಿದನ-
ದೇನ ಪೇಳಲಿ ಕಾಣದಾದವು ಚೂರ್ಗಳ್ ಗಗನದೆ || ೨೦ ||

ನಿನ್ನ ತೃಷೆಯುಡಗಲಿ ಎನುತ್ತವ-
ನುನ್ನತ ಗಗನಕೆರಚಲಂಬುವ-
ನಿನ್ನು ನಿನಗಿಲ್ಲೈ ಕ್ಷುದೆಯು ತೃಷೆಯೆಂದು ಚರಮೂರ್ತಿ |
ತನ್ನ ಹಸ್ತದೆ ಪುಸ್ತಕವ ಕೊಂ-
ಡೆನ್ನುತ ಸದಾಶಿವ ಕೊಳ್ಳೆಂದು
ಚನ್ನಮೆನಲಾಗಸಕೆ ತೂರಿದನೋದು ನೀನೆನುತೆ || ೨೧ ||

ಈ ನಿಖಿಲ ಕೃತಿಗಳ ಕಂಡು ಜನ-
ರೇನಿದಚ್ಚರಿಯಾಗಸಕೆಸೆದ-
ನೂನವಹ ರೊಟ್ಟಿಯ ಚೂರುಗಳ್ ಮತ್ತೆ ಮಧುರ ಜಲಂ ।
ತಾನೆ ಕಾಣಿಸದಂತೆ ಪೋಪುದು
ಸ್ವಾನುಭವಿಯೀತಂ ಮಹಾತ್ಮಂ
ಸ್ವಾನ ಸಮರಾಪೀತನ ಲೀಲೆಯಂ ತಿಳಿವೆನೆಂತು ॥ ೨೨ ॥

ಎಂಬ ಜನರಾ ನುಡಿಯಂ ಕೇಳ್ದು
ಸಾಂಬನಿವನಹುದೆಂದೊರ್ವನುರೆ
ನಂಬುತೆ ಪುರಾಣದ ಚರಿತವನುದಾಹರಿಸಿದನವಂ ।
ನಂಬಿರೆಂತೆನೆ ಸತಿಯುನಸೂಯೆ-
ಯಂಬುವನೆರಚಿ ಸ್ವಗೃಹ ಮಾರ್ಗ-
ಕಿಂಬಿನೊಳೆಸೆವ ಕಾಳ್ಗಿಚ್ಚನುರೆ ತಣ್ಣಗಾಗಿಸಿದಳ್ ॥ ೨೩ ॥

ಈ ನುಡಿಯಿಂದು ಸತ್ಯಮಾದುದು
ಸ್ವಾನುರಾಗದೊಳದನಾಲಿಸುತ-
ನೂನ ಚರಿತವ ಮತ್ತೊರ್ವನಿಂತೊರೆದನೊರೆವೆನದಂ ।
ಜ್ಞಾನಿಗಳರಸ ಸಿದ್ಧರಾಮಂ
ತಾನಿರುವ ಠಾವಿಂದೆ ಶಿಷ್ಯನ-
ನಾನರಕದಿಂದೆತ್ತಿದನೆಂದು ಕೇಳಿರ್ದ್ದೆನದುವೆ ॥ ೨೪ ॥

ಸತ್ಯಮಾದುದೆನಲ್ಕೆ; ಕೇಳುತ-
ಲತ್ಯಮೋಘ ಚರಿತ್ರಮನಾಗ
ಸ್ತುತ್ಯನೋರ್ವಂ ಪೇಳ್ದನೆಂತೆನೆ ಮಲ್ಲಮ್ಮ ಶರಣೆ ।
ನಿತ್ಯಮೆಸೆಯುವ ಕಾಡ ಕವಡಿಯ
ನುತ್ಯ ಕನಕವನಾಗಿಸಿದಳಿದು
ಮರ್ತ್ಯರಿಗೆ ದಿಟಮಾದುದೆಂದೆನಲೊಪ್ಪುತಲಖಿಲರು ॥ ೨೫ ॥

ನುತಿಸುತಿರ್ದರ್ ತನ್ಮಹಾತ್ಮನ-
ನತಿ ಭಕ್ತಿಯಿಂ ಮತ್ತೆ ಕೆಲಬರ್
ಮತಿಯೊಳಗವನ ನಿಂದಿಸುತಿಹರ್ ಪ್ರತಿ ದಿನದಲ್ಲಿಯೆ |
ನುತಿಪರ್ ಸೌಖ್ಯಮಂ ನಿಂದಿಪರ್
ಮಿತಿಯಿಲ್ಲದಿಹ ದುಃಖವ ಪೊಂದು-
ತತಿಶಯ ಶ್ರದ್ಧಾಯುತರಾಗಿ ಸುಖವ ಪೊಂದುವರು || ೨೬ ||

ಒಂದು ದಿನದೊಳ್ ನಿಜಗುಣ ರಚಿತ
ಸುಂದರವಾದನುಭವ ಸಾರವ
ನಂದದಿಂ ಪೇಳುತ್ತೆ ಭಕ್ತರ ಮಧ್ಯದೆ ಕುಳಿತಿರೆ |
ಛಂದದಿಂದೊರ್ಮೆಗವೇಳುತ್ತೆ
ನಿಂದು ಹರಹರ ಮಹಾದೇವನೆ
ಎಂದು ನುಡಿಯುತೆ ಮತ್ತಂ ಕುಳಿತನಾ ಚರಮೂರ್ತಿಯು || ೨೭ ||

ಜನರಾದಡಂತೆಯೆ ನುಡಿಯುತ್ತೆ
ಘನ ಮಹಾತ್ಮನ ಸಂಗಡಮೇಳ್ದು
ಸನಿಹದೊಳ್ ಮತ್ತಂ ಕುಳ್ಳಿರುತಲಿಂತು ಕೇಳಿದರು |
ಅನುಪಮನೆ ನೀನೇಳ್ದುದೇಕೈ
ಬಿನದದಿಂ ಪೇಳೆನ್ನಲಾತಂ,
ವಿನುತಾತ್ಮನವರುಕ್ತಿಯ ಕೇಳ್ದು ಪೇಳ್ದನೆಂತೆನಲು; || ೨೮ ||

ಎನ್ನ ಶಿಷ್ಯ ಸದಾಶಿವಾಖ್ಯಂ-
ಗುನ್ನತ ಸರ್ಪವೊಂದು ಕಚ್ಚಲ್
ಸನ್ನೆದಪ್ಪುತೆ ಬರುತಲಿರ್ದತ್ತೇಳ್ದೆಂ ತಪ್ಪಿಸೆ |
ಸನ್ನುತಗೆ ನಿಮ್ಮಯ ಶಿವ ನುತಿಯು
ಬನ್ನಮಂ ತಪ್ಪಿಸಿತದರಿಂದೆ
ಚನ್ನಮೆನೆ ಕುಳಿತಿಹೆನೆಂದನಾ ಶಂಭುಲಿಂಗಾರ್ಯಂ || ೨೯ ||

ಮತ್ತೆ ನುಡಿದಂ ಶಿಷ್ಯಗೀ ಮು-
ನುತ್ತಮ ಪುಸ್ತಕವನೀಯುವೆನೈ
ಚಿತ್ತಗೊಟ್ಟಿದನೆಲ್ಲರ್ ನೋಡಿಕೊಳ್ಳಿರೆಂದೆನುತೆ ।
ಸತ್ತಮಂ ಭಕ್ತರ್ಗೆ ತೋರಿಸಿ
ಕಿತ್ತಡಿಯು ತೂರಿದನಾ ಕ್ಷಣದೆ
ಕತ್ತನೆತ್ತೀಕ್ಷಿಸುವನಿತರೊಳದೃಶ್ಯಮಾದುದದು ॥ ೩೦ ॥

ಅಚ್ಚರೆಯಿಂದ ಕೇಳ್ದನೋರ್ವಂ
ಸಚ್ಚರಿತ್ರನೆ ನಿನ್ನ ಶಿಷ್ಯನ
ಸಚ್ಚರಿತಮಂ ಪೇಳ್ದುರುವೆ ಎನಲೆಲ್ಲರರಿವಂತೆ ।
ಹುಚ್ಚನ ನುಡಿಯು ಕೇಳಿರೈ ತಾ-
ನಿಚ್ಚೆಯಿಂದೀಶಾನ ದಿಶೆಯಿಂ-
ದಚ್ಚ ಸುಖಿಯಾಗಲ್ಕೆ ಬರ್ಪಂ ನಾಲ್ಕು ದಿನಗಳೊಳೆ ॥ ೩೧ ॥

ಆವನಿಂದಲೆಲ್ಲವ ನೀವರಿವು-
ದಿವರಂದಲೇಕೆನುತೆ ಮೌನವ
ತವೆ ಧರಿಸಿದನವರ್ ತದ್ದರ್ಯನೋತ್ಸುಕರಾದರು ।
ಸುವಿನಯದೆ ಭಕ್ತರ್ ನಮಿಸುತ್ತೆ
ಜವದೆ ಸ್ವಸ್ವಗೃಹಂಗಳಿಗೆ ಬಂ-
ದವಿನೀತರಾಗದಲೀತನಂ ಪೊಗಳುತಿರ್ದಪರು ॥ ೩೨ ॥

ಭಕ್ತಿಯ ಜನಂಗಳ್ಗೆ ಕಲಿಸಲ-
ನುಕ್ತ ಲೀಲೆಗಳನೇಕಂಗಳ
ಸೂಕ್ತ ಸಮಯದೆ ಗೆಯ್ಯುತಲಿರ್ದನಾ ಚರಮೂರ್ತಿಯು ।
ವ್ಯಕ್ತಮಾಗಿಹ ಲೀಲೆಯೊಂದಂ
ಶಕ್ತರೊಪ್ಪುವ ತೆರದೆ ಪೇಳ್ವೆಂ
ಭಕ್ತರಗಣಿತರಾಲಿಸುತೆ ಸೌಶೀಲ್ಯವ ಕಲಿವುದು ॥ ೩೩ ॥

ಪ್ರತಿದಿನದುದಯ ಸಮಯದೊಳೆಳ್ದು
ನುತವನದಿಂದೆ ತಂದು ಹೂಗಳ
ಕೃತಕೃತ್ಯನೆಂದರಿಯ ಕೊಡುತಿರ್ದಂ ಸುಭಕ್ತರ್ಗೆ ।
ಹಿತದೊಳವರ್ಗೆ ಪೇಳುವನಿಂತು
ಸ್ತುತಲಿಂಗ ಪೂಜೆಯ ಮಾಡಿಕೈ
ಸತತ ಭಕ್ತಿಯ ಬೆಳಸಿಕೊಳಿರಿ ಸದಾಶಿವನೈದುವಂ ॥ ೩೪ ॥

ನಿಮ್ಮ ಭಕ್ತಿಯನೀಗ ಪರಿಕಿಪೆ-
ನೊಮ್ಮನದೊಳೀಯಿರಿ ರೊಟ್ಟಿಯಂ
ಸಮ್ಮತಿಯೊಳಿಂತಾ ಭಕ್ತರಂ ಕೇಳೆ ಶ್ರದ್ಧೆಯೊಳೆ ।
ಇಮ್ಮನವ ಮಾಡದೆ ನೀಡುತಿರೆ
ನೆಮ್ಮಿದವರ್ಗೆ ಕಲ್ಯಾಣಮುರೆ
ನೆಮ್ಮಿದವರ್ಗೆ ಕಲ್ಯಾಣಮಾಗುತಲಿತ್ತು ತಿಳಿಯೆ ॥ ೩೫ ॥

ಒಂದುದಿನವೋರ್ವಳ್ ಬೇಸರದೆ
ಮಂದಳಾತನ ಕೈಗೆ ದೂರದೆ
ನಿಂದೆಸೆಯಲಾ ರೊಟ್ಟಿಯು ಜಲದಡೋಣಿಯೋಳ್ ಬೀಳೆ ।
ಇಂದು ಧರನಂನೆನೆಯುತೆ ಯೋಗಿ-
ಯಂದದಿಂದಾ ರೊಟ್ಟಿಯನೆತ್ತೆ
ಛಂದದಿಂ ಬಿಸಿದಾಗಿ ಕಂಗೊಳಿಸುತ್ತಲಿರ್ದುದದು ॥ ೩೬ ॥

ನಾರಿಯ ಕೇಳ್ದಳಿಂತೆನಲಯ್ಯ
ನೀರೊಳೆ ಬೀಳ್ದ ರೊಟ್ಟಿಯಿದೆಂತು
ತೋರಿತ್ತೈ ಬಿಸಿದಾಗಿ ಪೇಳೆನೆ ಪೇಳ್ದನವಳ್ಗಿಂತು ।
ನೀರೊಳೆ ನೀನೆಸೆದ ರೊಟ್ಟಿಯ
ದಾರಿದುದದಂ ಕೊಂಡು ಗಂಗೆಯು
ಸಾರವತ್ತರವಾದ ಬಿಸಿರೊಟ್ಟಿಯನಿತ್ತಳೆಂದಂ ॥ ೩೭ ॥

ಖಿನ್ನಳಾಗುತಲದನಾಲಿಸುತೆ
ಸನ್ನುತಂಗಭಿವಂದಿಸುತಲಾ
ಚನ್ನೆ ಕೈಮುಗಿಯುತ್ತೆ ಕ್ಷಮೆಯಂ ಬೇಡಿದಳ್ಳಯದೆ |
ಚಿನ್ನಿಥಿಯವಳ್ಗೆ ನುಡಿದನೆಂತೆನೆ
ನನ್ನೆಯಿದು ಕೇಳ್ ತಂಗಿ ದೇವರ-
ದಿನ್ನು ಬೇರಿಲ್ಲತಿಥಿಯ ಹೊರತು ತಿಳಿಮಗಳೆ ಜಗದೆ || ೩೮ ||

ಅತಿಥಿ ದೇವೋಭವಯೆಂದು ವೇ-
ದತತಿ ಸಾರುತಲಿಹುದು ತಿಳಿಯೌ
ಸತತಮುಂ ಲಿಂಗವ ಧರಿಸಿ ಬೋಧಿಪ ಚರನವರೊಳೆ |
ಕ್ಷಿತಿಯೊಳಗತಿ ಶ್ರೇಷ್ಠನಹನೌ
ಮತಿಯೊಳೆನ ಗುರು ಲಿಂಗಮಿಲ್ಲೆನು-
ತತಿಶಯದೆ ನಂಬಿರುವೆ ನೋಡೆನ್ನುತ್ತೆ ಲಿಂಗವನು; || ೩೯ ||

ತೆಗೆದು ತೋರಿಸಿ ನುಂಗಿದನದಂ
ಬಗೆಗೊಟ್ಟು ನೋಡುತಲಾ ಯುವತಿ
ಮಿಗೆ ವಿಸ್ಮಯದೆ ಪಾದದೆ ಬೀಳ್ದು ಪಶ್ಚಾತ್ತಾಪದೆ |
ಅಗಣಿತ ಮಹಿಮ ತವ ಲೀಲೆಯಂ
ಬಗೆಯಲಾನೇಂ ಬಲ್ಲೆನಜ್ಞಳ್
ಜಗಧೀಶ ರೂಪನೆ ಪೊರೆಯೆನಗೆ ಭಕ್ತಿಯ ಕರುಣಿಸಿ || ೪೦ ||

ಆಗಲೌ ಶಿವನಂ ನೆನೆಯುತಿರು
ರಾಗದಿಂದಿಲ್ಲಿಗೆ ಸದಾಶಿವ
ಯೋಗಿಯೈದುವನವನಿಂದೆ ನಿನ್ನುದ್ಧಾರಮಹುದು |
ರಾಗದಿಂದವಳ್ಗನಿತು ಬೋಧಿಸಿ
ಸಾಗಿದನಾ ಚರಂತೆಪ್ಪ ಗುರು
ವೇಗದಿಂದಲ್ಲಿಂದೆ ಮಹಿಮಂ ಲಿಂಗದಿಚ್ಛೆಯೊಳೆ. || ೪೧ ||

ಸತ್ಯ ಮೂರ್ತಿಯು ತನ್ನಿದಿರಲ್ಯ-
ಸತ್ಯವ ನುಡಿಯೆ ಕೇಳುತಿರಲಿ-
ಲ್ಲತ್ಯಧಿಕವೆನೆ ದಿಟವ ಪ್ರತ್ಯಕ್ಷಂ ಗೊಳಿಸುತಿರ್ದಂ |
ಕೃತ್ಯವೆಲ್ಲಂ ಶುದ್ಧವಾದುದು
ಸತ್ಯವಂತರ್ ಮೆಚ್ಚುವಂದದೆ
ಪ್ರತ್ಯಗಾತ್ಮಂ ಶುದ್ಧಗೊಳಿಸಿದನಿಂತು ಜನ ಮನವ || ೪೨ ||

ಆ ಶಂಭುಲಿಂಗ ಚರಮೂರ್ತಿಯು
ನಿಶ್ಯಂಕವಹ ವಾಸ ಸ್ಥಾನ-
ಮೀಶಾನ ಕೃಪೆಯಿಂದೆ ಮಂತ್ರೋಡಿಯು ಸಿದ್ಧರಾಮಂ |
ಆಶಾವಿಹೀನಂ ಮನೆಯೊಂದ-
ಮೀಶೋಪಮಂಗಿತ್ತಿಹ ನೀ ನಿ-
ರಾಶಂ ತತ್ಸು ಭಕ್ತಿವಶನಾಗಿರುತಿರ್ದನಲ್ಲಿ || ೪೩ ||

ಭಕ್ತಿಮಣಿಯೂರು ಗುರುಚರರಾಗಿ
ಶಕ್ತನುರೆ ಶ್ರೀಮಂತನನುಪಮ
ಮುಕ್ತಿಗನಲಸನಿಷ್ಟ ಲಿಂಗಾರ್ಚಕನವನಿರ್ದನು |
ಸೂಕ್ತ ತೀರ್ಥಕ್ಷೇತ್ರಾಟನಾ-
ಸಕ್ತನಹ ಸುಕೃತಿಗೆ ಚರಮೂರ್ತಿ-
ಗುಕ್ತಿಯಿಂ ಮೀರಿದುಪಚಾರಗಳ ಸಲ್ಲಿಸುತಿರ್ದಂ || ೪೪ ||

ಚರಮೂರ್ತಿಯಾದಡುಮಲ್ಲಲ್ಲಿ
ಚರಿಸಿ ಭುವನವ ತೀರ್ಥಕ್ಷೇತ್ರ
ವರ ನಿಕರಮಂ ಪಾವನಂಗೊಳಿಸುತ್ತಲೀ ಯೋಗಿ |
ಸರಸದಿಂ ಗಂಜೀಗಟ್ಟಿಗೈ-
ದಿರುತಿರ್ದನಾ ಮಂತ್ರೋಡಿಯೂರು-
ತರ ಸಿದ್ಧರಾಮಪ್ಪನ ವಿಮಲ ಗೃಹದೊಳಾಗಾಗ || ೪೫ ||



ಶಿವಯೋಗಿ ಶಂಭುಲಿಂಗ ಚರಮೂರ್ತಿಗಳ ಕೃಪಾಪಾತ್ರರೂ,
ಲೀಲಾಪುರುಷರೂ, ಮಹಾತಪಸ್ವಿಗಳೂ ಆದ
ಶ್ರೀ ಲಿಂ. ಸದಾಶಿವಚರಮೂರ್ತಿಗಳು ಗಂಜೀಗಟ್ಟಿ

ನಿಜ ಗುಣ ರಚಿತ ಷಟ್ ಶಾಸ್ತ್ರಗಳ
ಸುಜನರ್ಗೆ ಬೋಧಿಸುತಿರ್ದನಾ
ವೃಜಿನಹರ ಶಿವಯೋಗಿಯವಂಗೆ ಶಿಷ್ಯವರನಾವಂ ।
ನಿಜವಾಗಿ ದೊರೆತಿರಲಿಲ್ಲಮೀ
ತ್ರಿಜಗದೊಳ ಗುರು ಶಿಷ್ಯನೆಂದೊಡೆ
ವಿಜಿತೇಂದ್ರಿಯ ಸದಾಶಿವನೋರ್ವನೆಂದು ತಿಳಿದಿರಲು ॥ ೪೬ ॥

ಬಂದನೋರ್ವಂ ಮೈಸೂರವಃತ-
ದಿಂದೆ ಸಂಚರಿಸುತ್ತೆ ಸ್ವಗುರುವ
ನಂದದಿಂ ಶೋಧಿಸಃತೆ ಗಂಜೀಗಟ್ಟೆಯ ಗ್ರಾಮಕೆ ।
ಛಂದವಹ ಕಾವೀ ಲಾಂಛನದ
ಸುಂದರದ ಬಂಧುರ ಶರೀರದ
ಮಂದಹಸನದ ಮುಖದ ಯೋಗಿಯ ಕಂಡರಾ ಜನರು ॥ ೪೭ ॥

ಪ್ರಣತನಾಗಿಹ ತನ್ನ ಶಿಷ್ಯನ
ಗುಣಿವರ ಸದಾಶಿವ ನಾಮಕನ
ಗಣಗುರು ಶಂಭುಲಿಂಗಾರ್ಯನೊಲೆವೆತ್ತಿ ತಕ್ಕೈಸಿ ।
ಕುಣಿದಾಡಿದಂ ಸಂತಸದಿಂದೆ
ತಣಿಯುದಲೆ ಜನತೆಗೆ ತೋರಿ ತ-
ದ್ಗುಣವ ವರ್ಣಿಸಿ ಪೇಳ್ದಂ ಸದಾಶಿವಯೋಗಿಯಾಗ ॥ ೪೮ ॥

ಮತ್ತೆ ನಮಿಸುತೆ ಗುರುವೆ ಎನ್ನಂ
ಸುತ್ತಿದ ಕಷ್ಟಮಂ ಬಿಡಿಸಿ ಸಲೆ
ಚಿತ್ತಮುರೆ ತಣಿವಂತರಣ್ಯದೊಳಾಹಾರವಿತ್ತು ।
ಸತ್ತಮನೆ ನೀಂ ಸಲಹಿ ಗ್ರಂಥವ-
ನುತ್ತಮ ರೀತಿಯಿಂದೀಯದಿರ-
ಲಿತ್ತಲಾನೆಂತೈದ-ತಿಹೆನೀ ಕೃಪೆ ನಿನ್ನದಲ್ತೆ ॥ ೪೯ ॥

ಈ ಪುಸ್ತಕದೊಳಿರ್ಪ ನಿನ್ನಯ
ತಾಪತ್ರಯ ವನಳಿಪ ನಾಮುವ
ಕೋಪಾದಿ ವಿರಹಿತನೆ ತಿಳಿಯುತಲಿಲ್ಲಿಗೈದಿದೆನು |
ಕಾಪಟ್ಯದೂರನೆ ತವ ಶಕ್ತಿ
ಪಾಪಕ್ಷಯಾತ್ಮನೆ ತ್ವದ್‌ಬುದ್ಧಿ
ಭೋ ಪಾಲಕನೆ ನಿನ್ನ ಸರ್ವಜ್ಞತೆಯಾರೊಳಿಹುದು || ೫೦ ||

ನಿನ್ನ ಪಾದವ ನಂಬಿ ಬಂದಿಹೆ-
ನೆನ್ನ ಸುತನಿವನೆಂದು ಮನ್ನಿಸಿ
ಸನ್ನುತ ಚಿದುಪದೇಶವ ಗೈದು ಪೊರೆಯೈ ಗುರುವರ |
ಬನ್ನವಳಿಸಲ್ ಭವದೀಯ ಕೃಪೆ-
ಯಿನ್ನು ಬೇಹುದದಿಲ್ಲದೊಡೆ ಸುಖಿ
ಪನ್ನಗಭೂಷ ಸಮನೆ ಎಂತಾನಪ್ಪೆನಯ್ಯಂದು || ೫೧ ||

ನೆರೆ ಪ್ರಾರ್ಥಿಸುತೆ ಪಾದದೆ ಬೀಳ್ದ
ವರ ಶಿಷ್ಯನಂ ಪಿಡಿದೆತ್ತಿಂತು
ಗುರುವೊರೆದನೇಸಿದು ನಂದನನೆ ನಿನಗುಪಕೃತಿಯನೇಂ |
ಕರಮೆಸಗಿರುವೆನೆನಗೆ ಚಳವಳ-
ವುರೆಯನಿಸಿತಾ ಶಾಂತಿಗಾಗಿಯೆ
ಪರಿಹರಿಸಿದೇಂ ನಿನ್ನ ಕಷ್ಟವನಾಂಗುರು ಕರುಣೆಯೋಳ್ || ೫೨ ||

ನಡೆಯೈ ನಿನಗೆ ಚಿದುಪದೇಶವ
ಮೃಡನ ಕರುಣೆಯೊಳಾಂ ಮಾಡುವೇಂ
ಕಡು ದಣಿದಿರ್ಪೆ ನೀನಿಂದು ವಿಶ್ರಾಂತಿಯು ಮೊದಲಿಗೆ |
ಪಡೆಯೈ ಎಂದು ತಾನಿರ್ಪ ಮನೆ-
ಗೊಡನೆ ಕರೆದೊಯ್ದುತ್ತಲುರೆ ವಿಧಿ-
ವಿಡಿದು ಭಿಕ್ಷಾನ್ನವನೀಯುತುಪಚರಿಸಿದನವಂಗೆ || ೫೩ ||

ಜನರೀ ಸಮಾಗಮವನರಿಯುತೆ
ವಿನುತ ಗುರುಶಿಷ್ಯರ್ಕಳಿವರೆಂ-
ದನುನಯದೊಳೀಪರಿ ಪರಸ್ಪರರೊಳುರೆ ನುತಿಸಿದರು |
ಘನ ಪುರಾಣದೆ ಕೇಳಿರ್ದ್ದೀವಾ-
ವನಘ ಗುರುವಿನ ಸೇವೆಯಂ ಶಿ-
ಷ್ಯನೆ ಮಾಡುತಿರ್ದ್ದಂ ನಲಿದೆಂಬ ಸೂಕ್ತಿಯನೀಗಡು ||೫೪||

ವಿಪರೀತಮಾದುದು ಶಿಷ್ಯಗೊಲಿ-
ದುಪಚರಿಪ ವೃತ್ತಿಯುಮಿದುವೆ ನಿಜ-
ಮುಪರಿಮಿತವಹ ಗುರುವಿನೊಳಿರ್ಪ ಕಾರುಣ್ಯ ಗುಣವು |
ಸುಪಥರಹ ಕೆಲಜನರೀ ನುಡಿಗೆ
ಗುಪಿತವಹ ಶಿಷ್ಯೋತ್ತಮ ಸುಕೃತ-
ಮುಪಮೆಯಿಲ್ಲದಕೆಂದು ಕೆಲರುರೆ ಮಾತನಾಡಿದರು ||೫೫||

ಸಿದ್ಧರಾಮನ ಶಿಷ್ಯನೋರ್ವ್ವನ-
ಶುದ್ಧ ನರಕದೆ ಬೀಳ್ದು ಗುರುವಂ
ಶುದ್ಧ ಮನದಿಂ ಪ್ರಾರ್ಥಿಸುತಿರಲ್ ಗುರುವು ತಿಳಿದದನು |
ಉದ್ಧರಿಸಿದಂ ಸ್ವಕರವನೆತ್ತಿ
ಸಿದ್ಧಮಿದು ತತ್ಸುಪುರಾಣದೋಳ್
ಬದ್ಧಮಾದುದು ಸರ್ವ್ವರ್ಗ್ಗಿಂದು ಸತ್ಯಮಾಗಿಹುದು ||೫೬||

ಪೂರ್ವ್ವಮನೊಬ್ಬನಿಂತೊರೆಯೆ ಮ-
ತ್ತೋರ್ವ್ವನೆಂದನದೆಂತೆನಲ್
ಕುರ್ವ್ವಿಯೊಳ್ ಕಾಲ್ಜಾರಿ ಬೀಳುತಲಿರ್ದ್ದ ಗೊಲ್ಲತಿಯ |
ಸರ್ವ್ವವಿಧ ಬಸವೇಶನೆತ್ತಿದ-
ನುರ್ವ್ವರೆಯೊಳಿದು ಸುಪ್ರಸಿದ್ಧಂ
ಶರ್ವ್ವಸಮನಾದೀ ಮಹಿಮನಿಂ ದಿಟಮಾದುದೆಂದು; || ೫೭ ||

ನುಡಿಯುತಿರೆ ಲಾಲಿಸಿ ಮತ್ತೋರ್ವ-
ನೊಡನೊರೆದನಿಂತಹುದಹುದೆನಗೆ
ಯಡೆಯೂರ ವರಸಿದ್ಧಲಿಂಗನ ಕಥೆಯು ದಿಟವಾಯ್ತು |
ಬಿಡದೆ ಕೇಳಿರದೆಂತೆನಲ್ಕಾ
ಒಡೆಯನಾಣೆಯು ಸತಿಯಳೋರ್ವಳ್ |
ಕೊಡಕಿಡುತಿರಲ್ ನದಿಯೊಳ್ ಪೋಗಿ ದೊರೆಯಿತದುತಾನೆ || ೫೮ ||

ಇಂತು ಮಾತಾಡುತ್ತೆ ಸರ್ವರ್
ಶಾಂತನಂ ಪರಮಾವತಾರಿ ಸು-
ಕಾಂತನನಾಗಿ ತಿಳಿಯುತೆ ಶಂಭುಲಿಂಗ ನಾಮಕನಂ |
ಸಂತರೊಪ್ಪುವ ತೆರದೆ ಬಣ್ಣಿಸು-
ತಂತರಂಗಂ ಸಮ್ಮುದಿಸುತಿರೆ
ಸಂತತಂ ನಲೆಯುತ್ತಲಿರ್ದರ್ ಪೋಗಿ ಸ್ವಾಲಯದೆ | || ೫೯ ||

ಗದುಗಿನೊಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮವಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳೆಂಟನೆಯ ಸಂಧಿಯಿದುವೆ || ೬೦ ||

ಅಂತು
ಸಂಧಿ ಎಂಟಕ್ಕಂ ಪದಗಳು ನಾಲ್ಕುನೂರ್ದಾಐವತ್ತೇಳಕ್ಕಂ
ಮಂಗಲಂ

॥ ಶ್ರೀ ಗುರು ಬಸವಲಿಂಗಾಯನಮಃ ॥



# ಒಂಭತ್ತನೆಯ ಸಂಧಿಯು

ಚಿದುಪದೇಶವನಿತ್ತು ಮಹಾತ್ಮ-
ನೊದವಿದ ಪುಟ್ಟವುಲ್ಲಾರ್ಯಂಗೆ
ಪದಪಿಂ ನಿರಾಕರಣೋಪದೇಶವನಿತ್ತನಲ್ಲಿ ॥ ಪಲ್ಲ ॥

ಸತ್ಯಂ ಶಿವಂ ಸುಂದರವೆಂಬ
ನಿತ್ಯಂ ಕೇಳುವುಪನಿಷದುಕ್ತಿ-
ಯತ್ಯಾನಂದವೆನಿಸುವಂದದೆ ತವರೂಪವನಿಹ |
ಸ್ತುತ್ಯಂಗೊಳಿಸುತಿರ್ದ್ದ ಡುಮುರರೆ
ಕ್ಷಿತ್ಯಾದರವ ಪಡೆದ ಕವಿಗಳ್
ಸ್ಥಿತ್ಯಂತರಂಗೊಳಿಸಿ ನಿನ್ನಂ ನುತಿಪರೇಕೆ ಶಿವ ॥ ೧ ॥

ತನ್ನ ಮತವಿರದಿರ್ದಡುಂ ಗುರು
ಸನ್ನಿಧಿಯನುಜ್ಞೆಯ ವೋದದಿಂ
ಮನ್ನಿಸಲಾ ಸದಾಶಿವಾರ್ಯನ ಕರೆದನುರಾಗದೆ ।
ಚಿನ್ನಿಧಿಯಖಿಲ ಸಂಸ್ಕಾರಗಳ
ನನ್ನೆಯಿಃಂ ಗೆಯ್ಯುತ್ತೆ ನಿರ್ಮಲ
ಸನ್ನುತ ಮಹಾಮಂತ್ರದುಪದೇಶವ ಮಾಡಿ ಬಳಿಕ ॥ ೨ ॥

ತನ್ನವಲಿಂಗಗಳ ಸಕೀಲವ
ಮನ್ನಿಸುತೆ ಭೋಧಿಸಲೊಡರ್ಚಿದ-
ನುನ್ನತನ ಬೋಧೆಯ ನಾನಿಲ್ಲಿ ಯಥಾಮತಿಯೊರೆವೆನು ।
ಅನ್ನದಿಂದೀ ಕಾಯಂ ಮಗನೆ
ಚನ್ನವೆನಲು ಪ್ರಸಾದವುದಾಗೆ
ಬನ್ನಮಳಿಯುವದದರ ಸೇವನೆಯಿಂದಲಬಕಾಗಿ ॥ ೩ ॥

ಇಷ್ಟಲಿಂಗಮದಿರವೇಳ್ಕು ತಿಳಿ
ಸ್ಪಷ್ಟವೆನಲದರರ್ಪಿತಮಿದು-
ದಿಷ್ಟಮುರು ಶುದ್ಧಪ್ರಸಾದಂ ಪ್ರಾಣಲಿಂಗಕ್ಕೆ ।
ಇಷ್ಟದಿಂದರ್ಪಿಸಿದ ರುಚಿಯದು
ಶೃಷ್ಟಿಯೊಳ್ ಸಿದ್ಧಪ್ರಸಾದಮ-
ನಿಷ್ಟಹಾರಿಯುಃ ಭಾವಲಿಂಗಕ್ಕರ್ಪಿಸಿದ ತೃಪ್ತಿ ॥ ೪ ॥

ಅದುವೆ ಪ್ರಸಿದ್ಧ ಸುಪ್ರಸಾದಂ
ಸದಮಲ ರೂಪ ರುಚಿ ತೃಪ್ತಿಗಳ್
ವಿಧಿತ ಲಿಂಗತ್ರಯದಾ ಪ್ರಸಾದವೆನಿಸಿದ ಬಳಿಕಂ ।
ಚಿದುದಯನೆ ತಿಳಿಯೈ ತ್ರಿಲಿಂಗವೆ
ಪದಪಿಂದೆ ಗುರು ಲಿಂಗ ಜಂಗಮ-
ದುದಯ ಕಾರಣಮಹುದು ವಿಶ್ವಂ ತತ್ಸ್ವರೂಪಮಿದು ॥ ೫ ॥

ಸ್ಥೂಲವುರೆ ಸೂಕ್ಷ್ಮಂ ಕಾರಣಂ
ಕೀಲಿಸಿಹುದಾ ತ್ರಿವಿಧ ಚೇತನ-
ವೋಲಯಿಸಿಹುದು ಮೂರು ಲಿಂಗಾಖ್ಯಯೊಳೆ ತ್ರಿದೇಹದೆ |
ಶೀಲವಿದನರಿಯುವದು ನಿನಗನು-
ಕೂಲಿಸಿದೆ ಪುಣ್ಯಂ ತಿಳಿಯಯ್ಯ
ಶೀಲವಂತನೆ ಚೈತನ್ಯಮದೆ ಬ್ರಹ್ಮಾಂಡಗತವು || ೬ ||

ಮತ್ತಮಿದು ಮೂರಾಗಿ ತಳೆದುದು
ಚಿತ್ತ ಸುಖಕರ ನಾಮಂಗಳಂ
ಮತ್ತೆಯಾಚಾರ ಗುರು ಶಿವ ಚರ ಸುಪ್ರಸಾದ ಮಹಾ- |
ಸತ್ತಮನೆ ಇವೆ ಷಡ್‌ಲಿಂಗಂಗ-
ಳುತ್ತಮವಾದ ಪೆಸರ್ಗಳಾಗಿವೆ
ವಿತ್ತಮನೆ ತ್ವಜ್ಞಾನ ಕರ್ಮೇಂದ್ರಿಯವ ವ್ಯಾಪಿಸಿವೆ || ೭ ||

ಅರಿಯೈ ಮತ್ತೆ ಬ್ರಹ್ಮಾಂಡದೋಳ್
ಸರಸಮೆನೆ ಷಟ್ ತತ್ವಂಗಳಾ-
ಗಿರುವವೈ ಇವನರಿಯದಿರ್ದಡೆ ಮುಕ್ತಿಯಂತಹುದು |
ತರುಳ ನಿನಗುಪದೇಶಿಸಿದ ಮನು-
ವಿರುವದಾರಕ್ಕರಗಳಿದರೋಳ್
ಭರಿತವಾಗಿವೆಯಖಿಲದಿಂ ನವಲಿಂಗ ಮಯಗಳಿವೆ || ೮ ||

ಸಾರಿದೋಂಕಾರದೊಳಡಗಿಹವು
ಮೂರು ವರ್ಣಗಳಾವೆನಲ್ ಕೇಳ್
ಸೇರಿದವುಮಗಳಿಷ್ಟ ಪ್ರಾಣ ಭಾವ ಲಿಂಗಗಳಂ ||
ತೋರುತಿಹವವು ಶಿವಯೋಗಿಗಳ್
ಸಾರ ಬಸವಾಕ್ಷರಗಳ ಕೆಲರ್
ಭೂರಿ ಜಪದೊಳಗುಪಯೋಗಿಪರ್ ಮಂತ್ರಕೆ ಜೋಡಿಸಿ || ೯ ||

ನವಲಿಂಗಂಗಳೊಳಗಗಿರ್ಪವುರೆ
ನವ ಶಕ್ತಿಗಳವಾವೆನಲ್ ಚುರೆ
ತವೆ ಕ್ರಿಯೇಚ್ಛಾ ಚಿದ್‌ಜ್ಞಾನ ಸುಪರಾಪರಾದಿಗಳು |
ತವಿಪನಾದಿಯುಮುನ್ಮನಿಯವುಗ-
ಳವಿರತಮಡಂಗಿರ್ಪವು ಮತ್ತೆ-
ಯವಿರಳ ಮೂಲಲಿಂಗ ನಾಭಿ ಹೃದಯ ಕಂಠಕೂರ್ಚಂ ‖ ೧೦ ‖

ನೆರೆ ಬ್ರಹ್ಮರಂಧ್ರಂ ಶಿಖೆಯು ಕೇ-
ಳುರು ಪಶ್ಚಿಮ ಶಿಖೆಯುಮಿವುಗಳಾ
ಪರಮ ಲಿಂಗಗಳಿರ್ಪ ನವಚಕ್ರಗಳಿರುವೆಡೆಗಳು |
ಪರಾಧಾರಂ ಸ್ವಾದಿಷ್ಠಾನ-
ಮುರು ಮಣಿಪೂರಮುದನಾಹತಂ
ವರ ವಿಶುದ್ಧಿಯುಮಾಜ್ಞಾ ಬ್ರಹ್ಮ ಸುಶಿಖಾ ಪಶ್ಚಿಮಂ ‖ ೧೧ ‖

ಇವೆಯೊಂಭತ್ತು ಚಕ್ರಂಗಳರಿ
ಯಿವರೊಳ್ ಕಮಲನವಕವಿರ್ಕುಂ
ತವೆ ನಾಲ್ಕಾರು ಪತ್ತು ಪನ್ನೆರಡುಂ ಪದಿನಾರು ಮೇಣ್ |
ಕವಿದೆರಡು ಮತ್ತಂ ಸಾವಿರಮೆ-
ಸೆವ ಮೂರೊಂದು ದಳಗಳಿವುಗಳ್
ಪ್ರವಿಮಲ ನವಾಬ್ಜಂಗಳೊಳಿರ್ಪವರಿಯೈ ಶಿಷ್ಯನೆ ‖ ೧೨ ‖

ವರಣಗಳೈವತ್ತು ನಾಲ್ಕುವೆಸೆ-
ದಿರಿಯಲ್ಕಿವುಗಳೊಳ್ ಶೋಭಿಸುವ-
ವಿರುವವಾ ಕಮಲಂಗಳೊಳ್ ನವಲಿಂಗಂಗಳೊಸೆದು |
ಸರಸಮೆನೆ ಲಿಂಗವೆಯಂಗಮುಹು-
ದರಿಯುವಂ ವಿವರಿಪೇಂ ಲಿಂಗದೆ
ಮೆರೆವ ಶಕ್ತಿಯೆ ಭಕ್ತಿಯಾಯಿತ್ತದುವೆ ನವವಿಧವು ‖ ೧೩ ‖

ಶ್ರದ್ಧೆಯು ನಿಷ್ಠೆ ಸಾವಧಾನಂ
ಶುದ್ಧವಾದನುಭವ ಪರಿಣಾಮ
ಸಿದ್ಧವಹ ಸಮರಸಪೂರ್ಣ ಪರಿಪೂರ್ಣನೆಂಬಗಳ್ |
ವೃದ್ಧ ನವವಿಧ ಭಕ್ತಿಗಳುಮಿವೆ-
ಯುದ್ಧರಿಪ ಲಿಂಗದ ಶಕ್ತಿಯೊಳ್
ಬದ್ಧ ಕಲೆಯಿಂದುದಯಿಸಿದವಾ ಕಲೆಗಳೊಂಭತ್ತು || ೧೪ ||

ಶಾಂತಿಯು ಶಾಂತ್ಯತೀತೆಯು ಮತ್ತೆ
ಶಾಂತ್ಯತೀತೋತ್ತರೆಯು ವಿದ್ಯೆಯು-
ಮಂತರಿಸಿದ ಪ್ರತಿಷ್ಠೆ ನಿವೃತ್ತಿ ನಿರ್ಪ್ರಂಚಿಕೆಯು ಮೇಣ್ |
ಅಂತೆ ನಿರ್ನಾಮಿನ್ನಿಯುಮನಂತೆಯು
ಸಂತತಮೆಸೆವವೀ ಕಲೆಗಳುರೆ
ಮುಂತೆಯುಂಗಂ ಪುಟ್ಟಿತದರೊಳಗದನೆ ವಿವರಿಪೆನು || ೧೫ ||

ತ್ಯಾಗಾಂಗಮುಂ ಭೋಗಾಂಗಮುಂ
ಯೋಗಾಂಗಮುಂ ಮೂರಿವುಮಂಗ
ಭಾಗಂಗಳೆಂದರಿವುದು ಮಗನೆ ಈ ಮೂರರಿಂದೆ |
ಆಗಿರ್ಪವರ್ ಭೇದಗಳ್ ಶಿವ
ಯೋಗೀಶರಿವಕುರು ನಾಮಮಂ
ಯೋಗಾತ್ಮರಿಟ್ಟಾಗ ಕರೆದರ್ ಷಟ್‌ಸ್ಥಲನೆಂದುರಿ || ೧೬ ||

ನೆರೆ ಕೇಳು ತದ್ ಭೇದ ನಾಮವ-
ನುರೆ ಭಕ್ತಂ ಮಹೇಶಂ ಪ್ರಸಾ-
ದ್ಯರು ಸತ್ ಪ್ರಾಣಲಿಂಗಿಯು ಶರಣನೈಕ್ಯನೆಂಬಿವವೆ |
ಮೆರೆವ ಪೆಸರ್ಗಳಿವಂ ತಿಳಿಯುತ್ತೆ
ಸರಸದಿಂದಾವಾವ ಲಿಂಗಕೆ
ಸ್ಥಿರಮೆನಲ್ಕರ್ಪಿಸಿ ಪಡೆಯುವ ಪ್ರಸಾದಂಗಳನರಿ || ೧೭ ||

ಆಕಾರ ರುಚಿ ನಿಸ್ಪೃಹತೆಗಳ್
ಬೇಕೆನಿಸಿಪ ಗಂಧಂ ರಸಂ ಲೋ–
ಕೈಕರೂಪಂ ಸ್ಪರ್ಶಂ ಶಬ್ದಮುಂ ತೃಪ್ತಿಯಿವನೆ |
ಸ್ವೀಕರಿಸಲರ್ಪಿಸಿದ ಕ್ಷಣದೊಳ್
ಶೋಕವಳಿವ ಪ್ರಸಾದ ನಾಮವ
ನಾಕಿಗಳಪೇಕ್ಷಿಸುವಂತೆ ಧರಿಸುವವವುಗಳಿಲ್ಲಿ || ೧೮ ||

ಅರ್ಪಿಸುವ ಹಸ್ತಂಗಳಂ ತಿಳಿ
ತೋರ್ಪ ಸುಮನಂ ಮೇಣ್ ಸುಬುದ್ಧಿಯು–
ಮಿರ್ಪ ಸುಚಿತ್ತ ನಿರಹಂಕೃತಿಗಳರಿಯೆ ಸದ್ಭಾವಂ ||
ಕೂರ್ಪಿಡಿದ ನಿರುಪಾಧಿಕಂ ಪರಿ
ತರ್ಪ ನಿರಾಮಯಂ ನಿರುಪಮಂ
ತೀರ್ಪಿರದಾ ನಿರಾಳಮಿವು ನವಹಸ್ತಂಗಳರಿಯೆ || ೧೯ ||

ಒರೆವೆ ನಿನ್ನಾಲಿಂಗಾಕೃತಿಯ–
ನುರು ಕುಂಡಮುರೆ ದಂಡಂ ಮತ್ತೆ
ನೆರೆದುಂದುಭಿಯು ಮೇಣ್ ಕುಂಡಲಂ ಶಂಖಂ ಕಾರ್ಮುಕಂ ||
ಅರಿ ಜ್ಯೋತಿಯು ಪರಂಜ್ಯೋತಿಯಾ
ಪರಮ ಚಿಜ್ಜ್ಯೋತಿಯು ಮರೆಯದಿರ್
ಚಿರತರಾಕಾರಂಗಳಿವು ಮೂರ್‌ಕಣ್‌ಗೆಸೆಯುತಿಹವು || ೨೦ ||

ಮೂರನರಿಯಲ್ವೇಳ್ಕುಯೋಗದೆ
ಧೀರನೆ ನಿನಗೆ ದೈವಂಗಳನ–
ಪಾರ ಗಣಪಂ ಬ್ರಹ್ಮಂ ವಿಷ್ಣು ರುದ್ರನೀಶ್ವರನು ||
ಸಾರ ಸದಾಶಿವಂ ಮೇಣ್ ಪರಮ
ಭೂರಿ ಸಕಲ ಬ್ರಹ್ಮಂ ಮತ್ತೆ
ಸಾರದ ಸಕಲ ನಿಷ್ಕಲಂ ನಿಷ್ಕಲ ಪರಬ್ರಹ್ಮಂ || ೨೧ ||

ಅನುಸಂಧಾನದಿಂದೀ ನೈಜ-
ದನುಭವವಂ ನೀಂ ಮಾಡಿಕೊಳ್ವರೆ
ಘನಸಾಹಿತ್ಯಮಿದರಿಂದಧಿಕ ಮಾವುದುಮಿಲ್ಲರಿ |
ನೆನಹಿಂ ಷಡಿಂದ್ರಿಯದ ಚೇತನ-
ಮನಘ ಷಡ್ಲಿಂಗಸ್ವರೂಪಂ
ನಿನಗೆನಿಸಿ ತೋರುವದು ಲಿಂಗತ್ರಯಮುಂಗತ್ರಯಂ || ೨೨ ||

ಅಂಗನೆಂದೊಡೆ ಜೀವನಲ್ಲಾ-
ನಂಗಜ ಹರನೆಯಾಗಬೇಕೆಂ-
ಬಂಗನಪ್ಪಂ ಬಯಕೆಯುದಯಿಸಲಾ ತ್ಯಾಗಾಂಗನು |
ಅಂಗವಿಷಹಂಕೃತಿಯ ಮಮತೆಯ-
ನಂಗವಿಸಿ ಗುರುಲಿಂಗ ಜಂಗಮ-
ಕಂಗಮಾನಸ ಭಾವಂಗಳೊಡನರ್ಪಿಸಲಾಗುವಂ || ೨೩ ||

ವರಭೋಗಾಂಗನಪ್ಪನರ್ಪಿಸಿ
ನೆರೆಪಡೆದು ತತ್ ಕೃಪೆಯುಭೋಗಿಸು-
ತುರೆ ಯೋಗಾಂಗನಾಗುವಂ ಧ್ಯಾನದೆ ಬೆರೆಯೆ ಶಿವನ |
ಉರುಭಕ್ತನೆನಿಸುವನಿವನೆ ತಿಳಿ
ಪರಸ ಶ್ರದ್ಧೆಯು ನಿಷ್ಠೆಯಾಗಲ್
ಪರಹಿತವ ಮಾಳ್ಪಂ ನಿರಿಚ್ಛೆಯೊಳಿವನೆ ಮಾಹೇಶಂ || ೨೪ ||

ಸಾವಧಾನಂ ಬಲಿಯಲೀತನೆ
ಭಾವಿಸಿ ಜಗವ ಸತ್ಪ್ರಸಾದವ
ಭಾವುಕನುರೆ ಪ್ರಸಾದಿಯಪ್ಪಂ ಪ್ರಾಣಲಿಂಗಿಯಿವಂ |
ಓವಿ ಪ್ರಾಣವೆ ಲಿಂಗವೆಂದನು-
ಭಾವ ಬಲದಿಂ ಬಾಳ್ವನೀತಂ
ಕೋವಿದನೆ ಪರಿಣಮಿಸುವಂ ಲಿಂಗಕ್ಕೆ ಸತಿಯಾಗಿ || ೨೫ ||

ಶರಣನೀತಂ ಲಿಂಗದೋಳ್ ತನ-
ಗುರೆ ಸಮರಸಂ ದೊರೆಯಲೈಕ್ಯಂ
ಸರಸದಿಂದೆನಿಸುವನಿವನೆಯಿವಗೀ ಸ್ಥಿತಿ ದೊರೆದಪುಂ |
ವರ ಭಕ್ತನಾಗಿಯೆ ಬಾಳ್ವನಿವ-
ನರಿದು ಬಾಳ್ವೆಯಿೀಯುಪದೇಶ-
ಮುರು ಗುರುವಿಂದೆ ದೊರೆದುದಿದೆ ಪರತರ ಘನ ಸಂಪದಂ || ೨೬ ||

ಎಂದು ಪಶೌನವ ತಳೆಯಲಾ ಗುರು-
ವಂದಿನಾ ಕ್ಷಣದಲ್ಲಿ ಶಿಷ್ಯಂ
ವಂದಿಸುತಲೆ ಸದಾಶಿವಾಖ್ಯಂ ಕೈಮುಗಿದು ಮುದದೆ |
ನಿಂದು ನುತಿಸತೊಡಂಗಿದನಿಂತು
ತಂದೆ ನೀಂ ಮದ್ ಭವವ ಕಳೆದೈ
ಇಂದುಧರ ಸಮ ನಿನಗಾರ್ಸಾಟಿಯೀ ಜಗತ್ರಯದೆ || ೨೭ ||

ಶ್ರೀಗುರೂತ್ತಮ ಜಿತಸಂಸಾರ
ಯೋಗಿ ಸತ್ತಮ ಜಯದಯಾಕರ
ಭೋಗಿಭೂಷಣಲಸದವತಾರ ಭಕ್ತಮಂದಾರ |
ಭೋಗ ಮೋಕ್ಷ ಫಲಪ್ರದ ಧೀರ-
ವಾಗತೀತ ಸುಲೀಲಾಗಾರ
ಯೋಗವಿದ್ಯಾ ಹೃದ್ಯ ಸುಂದರ ಪರಶಿವಾಕಾರ || ೨೮ ||

ಎಂದು ನುತಿಸುವ ಶಿಷ್ಯನಂ ದಯೆ-
ಯಿಂದಲಪ್ಪುತೆ ಶ್ರೀ ಚರಮೂರ್ತಿ-
ಯಂದನೀಪರಿ ಮಗನೆ ಯನ್ನನದೇಕೆ ಸ್ತುತಿಸುವದು |
ಕಂದ ಯನಗುಂ ನಿನಗುಮೋರ್ವನೆ
ತಂದೆಯುರಿಕೊಂಡೀಶನಲ್ಲವೆ
ಕುಂದದಲೆ ನೆನೆಯುವನ ಕೃಪಾಪ್ರಭಾವಮಿದೆಲ್ಲವು || ೨೯ ||

ನಿನಗೆ ಯೋಗ್ಯನೆನಿಪ್ಪ ಶಿಷ್ಯಂ
ಬಿನದದಿಂ ದೊರೆದೊಡುಪದೇಶವ-
ನನಘನೀಂ ಗೆಯ್ಯುವದಿದರಂತೆ ಲೋಕ ಹಿತಕಾಗಿ |
ಮನದಿಂದಲೀ ಪರಿಯೊರೆಯುತಿರೆ
ಘನ ಹರುಷದಿಂ ಶಂಭುಲಿಂಗಾ-
ಖ್ಯನ ಗುರುವರನ ನಮಿಸುತಿಂತೆಂದಂ ನಲಿದು ನೋಡಿ || ೩೦ ||

ದೇವ ನಿನ್ನಯ ಕರುಣೆಯಿದ್ದಂ-
ತಾವಗಂ ನಡೆಯುತಿಹುದೆನ್ನೊಳ-
ಗಾವ ಸ್ವಾತಂತ್ರ್ಯಮತಿಯಿಹುದು ಬಾಳಲ್ಕೆ ನಿತ್ಯದಲಿ |
ಪಾವನನೆ ತವಪಾದ ಭಕ್ತಿಯು
ಕೋವಿದನೆ ದೊರೆದಡೆ ಸಾಲ್ಗು ಸಲೆ
ಭಾವ ಭೇದವನಳಿಸಿ ಪೊರೆಯುವದೆಂದು ಬೇಡುತಿರೆ || ೩೧ ||

ಆಗಲೈಗುರುವಳಿತು ಮಾಡಲಿ
ರಾಗವಳಿಯಿಂದಾ ಸದಾಶಿವ
ಯೋಗಿನಾಮಕ ಶಿಷ್ಯನಂ ಪರಿಸಿದಂ ಲೀಲೆಳೆ |
ನೀಗಿದಂ ಭವಭಯವ ಗುರುವರ-
ನಾಗಳುಪದೇಶಿಸಿದ ಬೋಧವ
ಜಾಗರೂಕತೆಯಿಂದೆ ಮನನವ ಗೆಯ್ದು ಚಲಿಸುತ್ತೆ || ೩೨ ||

ಇಂತುಮೋಡದೆ ಶಿಷ್ಯನೊಡವೆರೆ
ದಂತು ಗಂಜೀಗಟ್ಟೆಯೊಳಿರಲ್
ಕಂತರಿಸದಾಕಾಲದೆ ಮತ್ತಮೊರ್ವಂ ಬಂದನು |
ಚಿಂತಿಸುತಲುಪದೇಶಕಾಗಿಯೆ
ಕಾಂತ ಗುರುವಂ ಶೋಧಿಸುತ್ತಲೆ
ಸಂತಸದಿ ಕಂಡಂ ಪುಷ್ಪಮಲ್ಲಾರ್ಯ [illegible]ನನು || ೩೩ ||

ಇವನುರೇಕೊಂಡಿಯ ಮಠದಲ್ಲಿ
ಶಿವಸಮ ಯತಿಯ ಸೇವೆಮಾಡುತೆ-
ಸುವಿನಯದೊಳಿರ್ದಂ ಪರಮಚರಮೂರ್ತಿಸಖನಾಗಿ |
ತವೆಸಖ್ಯದಿಂದಿರುವಾಗೀತ-
ನೆ, ವಿಮಲ ಶಂಭುಲಿಂಗ ಗುರುವಿನ
ಪ್ರವಿಲ ಸದ್ಗ್ರಾಮದ ಪೆಸರನವನಿಂದೆ ತಿಳಿದಿರ್ದಂ || ೩೪ ||

ಶೋಧಿಸುತ್ತಲೆ ಮಾದಾಪುರಕೆ-
ಬೋಧವ ಪಡೆಯಲೈದುತಲರಿದು
ಶೋಧಿಸಿ ಪುಟ್ಟಮಲ್ಲಾರ್ಯನಾ ಗಂಜೀಗಟ್ಟಿಗೆ |
ಸಾಧಿಸಿ ಗುರುವನಾಗಳೆ ಕಂಡು
ಬೋಧಕಂ ನೀನಾಗೆಂದವಗೆ
ಸಾಧುಸಖ್ಯ ವಿಶೇಷವ ನೆನಹುಗೊಟ್ಟು ಕೇಳಿದನು || ೩೫ ||

ಅರಿಯದವನಂತಾ ಚರಮೂರ್ತಿ
ನೆರೆಕೇಳಿದಂ ನೀನಾರೆಂದು
ಗುರುವೆ ನಿನ್ನಯ ಶಿಷ್ಯನಾನೆಂದೊರೆದನಾ ಸಾಧು |
ಇರಲಿಲ್ಲಿಗೇತಕೆ ಬಂದೆಯನೆ
ವರಶಂಭುಲಿಂಗಾಖ್ಯಗಾಗು-
ತ್ತರಿಸಿದಂ ಚಿದ್ಬೋಧಮಂ ಪಡೆಯಲೈಂದಾತನು || ೩೬ ||

ನನ್ನೆಯಿಂದಾ ಗುರವಿಂತೆಂದ-
ನೆನ್ನ ಕಡಿದಾಗೆನಲೀ ನುಡಿಯ
ಬನ್ನದಿಂ ಮರುಮಾತನಾಡದೆ ಚಿಂತೆಗೊಳಗಾದಂ |
ಚನ್ನಮೆನೆ ಸೇವೆಯ ಗೆಯ್ದನವ-
ನುನ್ನತನವಂಗೊಲಿಯಲಿಲ್ಲಂ
ಸನ್ನುತನ ಕಡಿಯಲ್ ನಿಶ್ಚಯಿಸಿದಂ ಪುಟ್ಟಮಲ್ಲಂ || ೩೭ ||

ಶಂಭುಲಿಂಗ ಚರಂತೆಪ್ಪನುರೆ
ದಂಭವಿರಹಿತ ಶಿಷ್ಯನಾಗಿಹ
ಜೃಂಭಿತಗುಣ ಸದಾಶಿವಾರ್ಯನುಮಿರಲಿಲ್ಲೂರೊಳೆ |
ಶಂಭುಪುಟ್ಟಯನಾ ಸಮಯದೋಳ್
ಶಂಭುಸಮನಂ ಕಡಿಯಲೋಸುಗ
ಪುಂಭಿನೀ ತಲದಲ್ಲಿ ಸ್ಥಾನವ ಶೋಧಿಸಲಾದನು || ೩೮ ||

ಎನ್ನ ಕಡಿಯಲ್ವೇಳ್ಕೆಂದು ಗುರು
ನಿನ್ನ ಮಮಕಾರವ ಕಡಿಯೆಂದು
ನನ್ನಿಯಿಂ ಸೂಚಿಸುತಿರ್ದಡುಂ ಗುರುವನೆ ಕಡಿಯಲು |
ಭಿನ್ನವಿಲ್ಲದೆ ತೊಡಗಿದ್ದನವ-
ನೆನ್ನ ಶಬ್ದಕೆ ಮಮಕಾರವೆಂ-
ಬುನ್ನತಾರ್ಥದ ಗುರ್ವಭಿಪ್ರಾಯವ ತಿಳಿಯದಾಗ || ೩೯ ||

ಎಲ್ಲಿಗುರುವಂ ಕಡಿಯಲೆಂದವ-
ನುಲ್ಲಸದೆ ಶೋಧಿಸುತಿರೆ ಸ್ಥಲವ
ಲಲ್ಲೆಯಿಂ ಚರಮೂರ್ತಿಯದನರಿದಾಗಳಲ್ಲಿಂದೆ |
ಉಲ್ಲಸಿತ ಹುಲಗೂರ ಮಾರ್ಗದೆ
ಬಲ್ಲವಂ ಶಾಂತಂ ಹೊರಟಿರ್ದ-
ನಲ್ಲಿಗೈದಿದನವನ ಪುಡುಕುತೆ ಕುಡಗೋಲ ಪಿಡಿದು || ೪೦ ||

ಪುಟ್ಟಮಲ್ಲಾರ್ಯಂ ಪಿಡಿದವಗೆ
ದಿಟ್ಟತನದಿಂ ತೋರ್ದಾಯುಧವ
ಮುಟ್ಟನುಡಿದನದೆಂತೆನಲ್ ಕೇಳ್ಗುರುವೆ ನಿನ್ನನುರೆ |
ತಟ್ಟನೆ ಕಡಿಯುವೆಂ ಚಿದ್‌ಬೋಧ-
ಕಿಟ್ಟು ಕಾಂಕ್ಷೆಯು ಬಂದಿರುವೆನಾಂ
ಚಟ್ಟನೆ ಸಿದ್ಧನಾಗುಪದೇಶಮೆನಗೆ ಬೇಕೀಗ || ೪೧ ||

ಎನ್ನಕಡಿಯದ ಹೊರತುಪದೇಶ-
ಮಿನ್ನು ನಿನಗಿಲ್ಲೆಂದು ಮಾಡಿದ
ಸನುತನೆ ನಿನ್ನಾಜ್ಞೆಯನ್ನಯ ಮನದೊಳುಳಿದಿಹುದು ||
ಚಿನ್ನಿಧಿಯೆ ಗುರುವಧೆಯು ಶಿಷ್ಯಗೆ
ನನ್ನಿಯಿಃಂ ನರಕವನೀವುದೆಂ-
ಬುನ್ನತ ಶೃತಿವಾಕ್ಯಮಂ ನೀಂ ಪುಶಿಯು ಗೆಯ್ದಿರುವೆ || ೪೨ ||

ನೀನು ಮೃತನಾದೊಡನುಪದೇಶ
ಸೂನವಿಲ್ಲದಲೆಂತಾಗುವದು
ಮಾನಿತನೆ ತಿಳಿಯಲ್ ಬೇಕಾಗಿದೆನೆಗೆಂದು ಪಿಡಿದ |
ಭಾನಗೆಟ್ಟಾ ಕುಡಗೋಲಿಂದೆ
ಜ್ಞಾನ ನಿಧಿಯಂ ಪೂಡೆಯಲ್ ತೊಡಗ-
ಲೇನುವಮಾಯುಸವಾಗದಂತೆಯೆ ತಪ್ಪಿಸಿಕೊಳುತಿಹಂ || ೪೩ ||

ಹುಲಗೂರ ಸಿದ್ಧನಗೌಡನಿದ-
ನಲುಗದಂತೆಲ್ಲವ ದೂರದಿಂ
ಸಲೆ ವಿಸ್ಮಯದಿನೀಕ್ಷಿಸುತ್ತಲೆ ತನ್ನೂರ್ಗೆ ಪೋಗಿ ||
ನಿಲದಂತೆ ಘಟ್ಟಿಗರ ನಾಲ್ವರ-
ನಲಘು ಮತಿಯಾ ಕ್ಷಣದೊಳಲ್ಲಿಗೆ
ಸಲುಹಲ್ಪೆರಸಿ ಬಂದಂ ತನ್ನಗುರುವಂ ಗುರ್ತಿಸಿ || ೪೪ ||

ಹದನವಾಗಿಹ ಕುಡುಗೋಲಿನಿಂ
ಪೊಡೆದು ಹೊಡೆದುರೆ ನಿಂದಿರ್ದನಾ
ಚದುರನಲ್ಲದ ಪುಟ್ಟಮಲ್ಲಾರ್ಯಂ ಬೇಸರಿಯುತೆ |
ಪದಪಿಂದೆ ಗುರುವಂ ಕಂಡವನ
ವದನದಿಂದೆಲ್ಲವನರಿಯುತ್ತೆ
ಸದಮಲಂ ವಿಸ್ಮಿತನಾಗಿ ಪರಿಕಿಸಿದಂ ಗಾಯವ || ೪೫ ||

ಗಾಯವೆಲ್ಲಿಯುಮಿರಲಿಲ್ಲಮನ-
ಪಾಯವಹ ಗೆರೆಯೊಂದು ಕುತ್ತಿಗೆ-
ಗಾಯತವಮಾಗಿ ಮೂಡಿರ್ದುದಾಶ್ಚರ್ಯ ಕರವಾಗಿ |
ಆಯಸವಿಲ್ಲಮದರಿಂದೇನು-
ಮಾಯಿತಚ್ಚರಿಯಾ ಗೌಡಂಗು-
ಪಾಯದಿಂ ಪೇಳ್ದಂ ಪುಟ್ಟಮಲ್ಲಾರ್ಯಗಾ ಸುಕೃತಿ ॥ ೪೬ ॥

ಏನಿದೈಪುಟ್ಟಾರ್ಯ ನಿನಗೀ
ಜ್ಞಾನಿಯಾಡಿದ ಮಾತಿನರ್ಥಮು-
ನೂನವಾಗಿಯೆ ತಿಳಿಯಬೇಕಿತ್ತೀಕರಿಯದಾಯ್ತು |
ಆನೊರೆವೆನರಿಯೆನ್ನಕಡಿಯೆನ-
ಲೂನಗೊಳಿಸುವದಲ್ಲ ಮಮತೆಯ
ಸ್ವಾನುರಾಗದೆ ಕತ್ತರಿಸೆಂಬಭಿಪ್ರಾಯಮಿಹುದು ॥ ೪೭ ॥

ಸಲೆಯೋಚಿಸಿಂತಪ್ಪ ಗುರುವಂ
ಮಲಬುದ್ಧಿಯಿಂ ಕಳೆದುಕೊಂಡೆಂ-
ತಲಘುಮುಕ್ತಿಯ ಪಡೆಯಲಿರ್ದೈ ಪೇಳೆನಗೆ ತಿಳಿದು |
ಛಲವಬಿಡು ನಡೆಯಮ್ಮಮನೆಗೆಂ-
ದುಲಿಯುತಂ ಮೇಣ್ ಚರಮೂರ್ತಿಗುರೆ
ನಲೆದು ನಮಿಸುತೆ ಕರೆದೊಯ್ದನೀರ್ವರನಾ ಗೌಡನು ॥ ೪೮ ॥

ಕೂಡಲೆ ಶಂಭುಲಿಂಗಾಖ್ಯಂಗೆ
ನಾಡೆನಮಿಸುತೆ ಹೊರಡಲಾ ಗುರು-
ವಾಡಿದನಿಂತು ಚರಮೂರ್ತಿಯಾ ಪುಟ್ಟಮಲ್ಲಂಗೆ |
ನೋಡಬೇಡೈ ಮರಳಿನೀನೆನು-
ತಾಡಿಕಳುಹಿದನಾ ಕ್ಷಣದೊಳುರೆ
ನೋಡಿದನೊಂದು ಕ್ರೋಶದ ಮಿತಿಯ ದಾರಿಯಂ ಕ್ರಮಿಸಿ ॥ ೪೯ ॥

ಕುತ್ತಿಗೆಯು ಡೊಂಕಾಯಿತಾತನ
ಚಿತ್ತಮದು ಕಳವಳಿಸಿತಾತನ
ಮುತ್ತಿದ ವ್ಯಥೆಯು ಸಹಿಸಲಾತನ ಮತಿಯರಿಯದವನ |
ಕುತ್ತಮುಪಸಿತು ಕಾಯಕಾತನ
ಬಿತ್ತರದಸುವು ತಪಿಸಿತಾತನ
ಸುತ್ತಿದಮಾಯೆ ತೊಲಗಿತಾತನ ಮನಮರಿಯುತಿದನೆ ॥ ೫೦ ॥

ಎರಡು ದಿನವಾ ಹುಲಗೂರೊಳಗೆ
ಗುರುವಿರ್ದು ನಿಜಶಿಷ್ಯನಾಗಿಹ
ಪರಮಸಿದ್ಧನಗೌಡನ ನಿರೂಪವ ಪಡೆದು ಕರುಣಿ |
ತೆರಳುತಲ್ಲಿಂದೈದಿದನವಂ
ಮೆರೆವ ಗಂಜೀಗಟ್ಟಿಗಲ್ಲಿಯೆ
ಮೆರೆದೀ ಪವಾಡವ ತಿಳಿದಿರ್ದುದಿಲ್ಲಿಯ ಜನತೆಯು ॥ ೫೧ ॥

ಉತ್ಸವದೆ ಕರೆತರವೇಳ್ಕೆಂದು
ವತ್ಸಲತೆಯಿಂದಲ್ಲಿಯ ಜನರ್
ಸತ್ಸುಖನ ಕಾಯ್ದಿರ್ದರನಿತರೊಳವರವರ ಮನೆಯೋಳ್ |
ಚಿತ್ಸಮುದ್ರಂ ಕಂಡಂ ಸರ್ವ-
ರುತ್ಸವಿಸುತಚ್ಚರೆಯ ಪಡುತಿರೆ
ಮುತ್ಸುಧಾಕರ ಚರಮೂರ್ತಿ ನಿಜಮಠದೊಳೆಸೆದಿರ್ದಂ ॥ ೫೨ ॥

ಇದನರಿದು ಸರ್ವಜನರೀತನ
ಪದ ದರ್ಶನವ ಪಡೆದು ಪೊಗಳುತ
ಮುದದೆ ತಮ್ಮಯ ಮನೆಗೈದುತಿರ್ದರ್ ತತ್ಸಮಯದೆ |
ಸದಮಲನ ಕಾಣಲ್ಕೆ ಬರುತಿರೆ
ಪದಪಿಂ ಪುಟ್ಟಮಲ್ಲಾರ್ಯನಿವ-
ನದನೀಕ್ಷಿಸುತೆ ಪಾಸಿದ ಗುಡಾರವ ಪೊರ್ದುಕೊಂಡು ॥ ೫೩ ॥

ಮಲಗಿದನೈದಿ ಪುಟ್ಟಮಲ್ಲಂ
ಸಲೆ ಶೋಧಿಸುತೆ ಕಾಣದಾತನ-
ನಲಘು ಮಹಿಮೆಗೆ ಮೆಚ್ಚುತಾತನ ಕಾಣುವಾಶೆಯಿಡು |
ಸಲೆ ಪೆರ್ಚ್ಚುತಿರಲಲ್ಲಿಯೆ ಕುಳಿತ-
ನೊಲಿದು ಬಂದು ಸದಾಶಿವಾರ್ಯಂ
ಛಲವ ಬಿಡಿಸುತಲಲ್ಲಿಂದೆ ಕಳುಪಿದನುಪದೇಶಿಸಿ || ೫೪ ||

ಆಗಳದೇ ಗುಡಾರದಿಂದಲೆ
ಯೋಗಿಯುಂ ಪ್ರಕಟನಾದಂ ಭಕ್ತ
ಪೂಗಮರಿಯುತೆ ಮಹಿಮೆಯಿದು ಪೊಸತೆಂದು ಪೊಗಳುತಿರೆ |
ರಾಗದಿಂದೀಕ್ಷಿಸಿ ಸದಾಶಿವ
ಯೋಗಿನಾಮುಕನಂ ಕರೆದಿಂತು
ಭೋಗನೂರಂ ಶಂಭುಲಿಂಗಂ ಮಾತನಾಡಿದನು || ೫೫ ||

ಮಾನಿತನೆ ನೀನಿರದ ಕಾಲದೆ
ದಾನವನಂತೆ ಕಾಡಿದನೆನ್ನ
ಮಾನವನುಳಿಸಿ ಕಾಯ್ದೆಯೆಂದಂ ನಗುತೆ ಗುರುರಾಯಂ ||
ಮಾನನಿಧಿಯೀ ಮಾತನಾಲಿಸಿ
ಸ್ವಾನುರಾಗದೆ ನುಡಿದನೆಂತೆನ—
ಲೇನಿದಚ್ಚರೆ ಗುರುವೆ ನಿನ್ನಂ ಕಾಡುತಿಹರಾರು || ೫೬ ||

ನಿನ್ನ ಲೀಲೆಯಿದೆಲ್ಲಮರಿಯ—
ಲ್ಕೆನ್ನನೇತಕೆ ಪೊಗಳುತಿರ್ಪೆ ಜ—
ಗನ್ನುತನೆ ನೀನೊಲಿದು ರಚಿಸಿದ ಪ್ರತಿಮೆಯಾನಲ್ತೆ ||
ಸನ್ನುತನೆ ತವ ದೃಶ್ಯಾದೃಶ್ಯ—
ದುನ್ನತಮಾದ ನೆರೆ ಪವಾಡಮಿ—
ದಿನ್ನುಮೀಶ್ವರಗಲ್ಲದಲಾರ್ಗೆ ಸಾಧ್ಯಮಿಹುದಯ್ಯಾ || ೫೭ ||

ಎಂದು ನುತಿಸುವ ಶಿಷ್ಯನ ನುತಿಗೆ
ಸಂದು ಹಿಗ್ಗದೆ ಮಾಣಿಸುತದಂ
ಕಂದುಗೊರಲನ ಸ್ತುತಿಯು ಮಾಡಲ್ ಸಲಹುವನೆನ್ನುತೆ ||
ಕುಂದದಲೆ ಕೃಪೆಯಂ ಮಾಡಿ ನಲ—
ವಿಂದೆ ಸಲುಹಿದ ಚರಮೂರ್ತಿಯಂ
ವಂದಿಸಿ ಶಂಭುಲಿಂಗನಂ ಬಣ್ಣಿಸಿದರ್ ಸುಜನರು || ೫೮ ||

ಗದುಗಿನೋಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತಮಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲಿಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳಗೊಂಭತ್ತನೆಯ ಸಂಧಿ || ೫೯ ||

**ಅಂತು**

**ಸಂಧಿ ಒಂಭತ್ತಕ್ಕಂ ಪದಗಳು ಐದುನೂರ್ಹಾಹದಿನಾರಕ್ಕಂ**

**ಮಂಗಲಂ**



# ಹತ್ತನೆಯ ಸಂಧಿಯು

ಹುಬ್ಬಳ್ಳಿಯಯಾರೂಢಗಿರುವ
ಮಬ್ಬಂ ಬಿಡಿಸಿ ಮೆರೆದಂ ಕರ್ತ-
ನುಬ್ಬೀ ಕಥೆಯನಾಲಿಪುದು ಭಕ್ತರ್ವಿಮಲ ಮನದೆ ॥ ಪಲ್ಲ ॥

ಪುರಹರನೆ ಗುರುಲಿಂಗಜಂಗಮ-
ಗುರು ರೂಪಮಂ ಧರಿಸಿಹನೆಂದು
ವರ ವೇದ ನಿಗಮಾಗಮಂಗಳ್ ಪೇಳುತಿಹಮಿದುವೆ।
ನೆರೆ ದಿಟವೊ ಮೇಣ್ ಸಟೆಯೊ ಎಂಬುದು
ಚಿರಮಿರ್ಪ ಸಂದೇಹಮಿದೆನಗೆ
ಕರಮಿರದೆ ಕಾಡುತಿದೆ ಬಿಡಿಸುತೆ ಪೊರೆಯೆನ್ನನಭವ ॥ ೧ ॥

ಸಾಗರದಲ್ಲಿ ಜನಿಪ ಜೀವರ
ಪೂಗಕದೆ ಗತಿಯಾದಂತೆ ಭವ-
ದಾಗರ ದೊಳಿಸೆದಿರ್ಪ ಜೀವರಿಗಿನ್ನು ಬೇರಿಲ್ಲ |
ಭೋಗ ಭಾಗ್ಯವ ಶಿವಕೃಪೆಯೆಂದು
ಲೋಗರಾರರಿವರೊ ಇಲ್ಲವರ್ಗೆ
ನೀಗದಿಹ ಬಂಧವಂದೆನುತಿರ್ದನಾ ಚರಮೂರ್ತಿಯು || ೨ ||

ವರ ಭಕ್ತಿಯಂ ಜನಕೆ ಪುಟ್ಟಿಸ-
ಲುರು ಲೀಲೆಗಳ್ ಸಹಜವಾಗಿಯೆ
ಜರಗುತಿರ್ದವಸಾಧ್ಯವೆಂನಲಾ ಶಿವಯೋಗಿಯಿಂದೆ |
ನೆರೆ ನಿಂದಿಸುವ ಜನರಾಕ್ಷಣದೊ-
ಳುರೆ ಪೊಂದುವಿರ್ ಪ್ರಾಯಶ್ಚಿತವ-
ನುರು ನುತಿಯ ಗೆಯ್ವರ್ ಚಿರಸುಖವನೈದುತಿಹರನಿಶಂ || ೩ ||

ಆರಿಗೆ ಮೃತಿ ಸಮೀಪಿಸಿರುವದೊ
ಸಾರುತೆ ತಾನೆ ಬೂದಿಯನೆರಚಿ
ತೋರುತಿಹಂ ಭವಿಷ್ಯಮಂನವರ್ ತಿಂಗಳಿನಲ್ಲಿಯೆ |
ಸಾರುವರ್ ಮರಣವ ಮತ್ತೀತ-
ನಾರಮಸ್ತಕದೋಳ್ ಕರವಿಡುವ-
ನೊರೆಯಾಗುವದವರ ಮೃತ್ಯುವದಿನ್ನು ಪೇಳುವೆನು || ೪ ||

ಬದುಕುವಾಶೆ ಇಲ್ಲದ ಜನರ
ಬದುಕಿಸುತಿರ್ದನವರ ರೋಗವ
ಸದಮಲಂ ಕಂಡವರಿಗೇಳೆಂದೆನುತೆ ಪರಿಹರಿಸಿ |
ಪದುಳ್ದು ಕನ್ನಿಕೆಯರ ಮೂಗಿನೋಳ್
ಪದಪಿಂದೆ ಪುಷ್ಪವನಿಡುತಿರಲ್
ಮದುವೆಯಾಗುತಲಿರ್ದತ್ತಾರು ತಿಂಗಳದೊಳವರ್ಗೆ || ೫ ||

ಮಕ್ಕಳಿಲ್ಲದವರ ಮನಗೆ ಪೋ-
ಗಿಕ್ಕಿರವು ರೊಟ್ಟಿಯನೆಂದು ಕೇ-
ಳ್ದಕ್ಕರೆಯೊಳವರಿಂದೆ ಕೊಳ್ಳುತೆ ಜೋಜೋ ಎನ್ನುತೆ |
ಕಕ್ಕುಲತೆಯಿಂ ಶಿವನ ನೆನೆಯುತೆ
ತಕ್ಕ ಮುಗುಳ್ನಗೆ ಸೂಸಿ ಬರುತಿರೆ
ಜೊಕ್ಕಟದೆ ಮಗನಂ ಪಡೆಯುತಿರ್ದಪರಿವನ ಕೃಪೆಯೋಳ್ || ೬ ||

ಇದರಂತೆ ಲೀಲೆಯೊಳವರವರಿ-
ಗುದಯಿಸುವಂತನುಗ್ರಹಿಸುವಂ
ಮುದದೆ ಸರ್ವೈಶ್ವರ್ಯಮಂ ಶಿಷ್ಯರಂ ನೋಡಿ ದಯೆಯೋಳ್ ||
ಸದಮಲಂ ದುಷ್ಟರ ಕಂಡು ಸತಿ
ಪದುಳ್ದು ನಿಗ್ರಹಿಸುವನವರವರ್ಗೆ
ವಿದಿತಮಾಗುವ ತೆರದಿಂ ಶಂಭುಲಿಂಗ ಚರಮೂರ್ತಿ || ೭ ||

ಪ್ರತ್ಯಕ್ಷ ಲೀಲೆಯನಾಲಿಸುವ-
ದತ್ಯಾದರದೊಳೊರೆಯುವನೊಲೆದು
ಸತ್ಯಾತ್ಮನಾಗೊಂದು ದಿನದೋಳ್ ಗಂಜೀಗಟ್ಟಿಯೋಳ್ ||
ಅತ್ಯಾನಂದದಿಂದೋರ್ವ ಕೃತ
ಕೃತ್ಯಾತ್ಮನಹ ಭಕ್ತನ ಗೃಹದೆ
ಸ್ತುತ್ಯಾಂತರಂಗಿಗಳಾದ ಜನರೊಡನೆ ಕುಳಿತಿಹನು || ೮ ||

ನಿಜ ಶಿಷ್ಯಂ ಸದಾಶಿವೇಂದ್ರಂ
ಸುಜನರೊಂದಿಗೆ ಬಂದಿಹನಲ್ಲಿ
ವಿಜಿತೇಂದ್ರಿಯರ ಸನ್ನಿಧಿಯಲ್ಲಿ ವಂದಿಸುತೋರ್ವನು |
ಭಜಕರಾಪ್ತರೆಯವ್ರೊಡನೆ ನೀವ್
ವೃಜಿನಹರಯಾತ್ರೆಯು ನಡೆಯುತಿಹು-
ದ, ಜನಚ್ಚರಿಪವೋಲ್ ಹುಬ್ಬಳ್ಳಿಯಾರೂಢಮಠದೆ || ೯ ||

ಅಲ್ಲಿ ದಾಸೋಹವ ಮಾಳ್ಪೆ ನಾಂ
ಸಲ್ಲುವ ಗಣರ ತೃಪ್ತಿ ನಡೆವುದು
ಬಲ್ಲಿದರ ಬಡವರ್ಕಳನೇಕ ಜನರ ತರ್ಪಣಮುಂ ।
ವಲ್ಲಭರೆ ಮೂರ್‌ದಿನಗಳನಕಂ
ಸಿಲ್ಲದಲೆ ಸಾಗುತಲಿರುವದದು-
ಮಲ್ಲಿಗೆ ತಾವು ದಯಮಾಡಿಸಲ್ ಕಳೆಗಟ್ಟುವದುರೆ ॥ ೧೦ ॥

ಕಾರ್ತಿಕ ಬಹುಳದಾ ಚತುರ್ಥಶಿ
ಕರ್ತನ ಜಾತ್ರೆಯಾರಂಭದಿನ
ಮೂರ್ತಪಾಲರೆ ತ್ರಯೋಧಶಿಗಿಳವೇಳ್ಕು ತಾವಲ್ಲಿ ।
ಮೂರ್ತಿಗಳಿರದ ಪ್ರಾರಂಭವುದು
ಪೂರ್ತಿಗೈಯದು ಕಾರ್ಯಮನೆಂದು
ವಾರ್ತೆಯಿರ್ಪುದು ಪಿರಿಯರಿಂದದನಾಂ ಕೇಳಿರ್ಪೆನೈ ॥ ೧೧ ॥

ಆಗಲೈ ಈ ಕಾರ್ಯಮೆಮ್ಮದು
ಸ್ವಾಗಮೋಪನಿಷತ್ ಪ್ರಸಿದ್ಧಂ
ರಾಗವಿರಹಿತನಾದಡುಂ ಮಾಡುವಕಾರ್ಯಮಿದುವೆ ।
ವಾಗತೀತಾಘವ ಕಳೆಯುವದು
ಸ್ವಾಗತಾರ್ಥಂ ಸರ್ವ ನರರಿಗೆ
ಭೋಗ ಮೋಕ್ಷ ಸುಶಿದ್ಧಿ ಸಾಧನಮನ್ನ ದಾನಮದು ॥ ೧೨ ॥

ಅನ್ನದಿಂದಲೆ ಸೃಷ್ಟಿಯಹುದ-
ಯ್ಯನ್ನದಿಂ ರಕ್ಷಣೆಯಾಗುತಿಹು-
ದನ್ನವಿಲ್ಲದಲಾಗುವದು ಸಂಹೃತಿಯು ತಿಳಿಯಂತೆ ।
ಅನ್ನಮೆ ಬ್ರಹ್ಮವೆಂದು ಶೃತಿಯೊರೆ-
ದನ್ನದಾನವ ಬೋಧಿಸುತಿರುವ-
ದನ್ನವಿತ್ತೊಡೆ ಬ್ರಹ್ಮದಾನವಗೆಯ್ದ ಫಲವಹುದು ॥ ೧೩ ॥

ಇಂತಪ್ಪ ದಾನವನೀನೊಲಿದು
ಸಂತರ್ಕ್ಕಳೊಪ್ಪುವ ತೆರದೆ ಸಲೆ
ಸಂತೋಷದಿಂ ಗೆಯ್ಯುತಿರಲಾವೇಕೆ ಬರದಿಹೆವು |
ಚಿಂತಾತಿಶಯವೆಮಗಿಹುದೊಂದ-
ನಂತರ್ಕ್ಕಳಿಂ ಪೇಳಿ ಕಳುಹಿದ-
ಡಂತಿನ್ನು ತತ್‌ಪರಿಹಾರವಮಾಗಿಲ್ಲಮುದಕಾಗಿ || ೧೪ ||

ಬರುತಿಹೆವಾವಮಾವಾಸ್ಯೆಯೊೞ್
ಬರುವಂ ನಿನ್ನೊಡನೆ ಸದಾಶಿವ
ಪರಶಿವಯೋಗಿಯೆಂದಾ ದೇವನಂ ನಿರುಕಿಸುತಿರೆ |
ಅರಿದಾ ಸದಾಶಿವ ದೇವನಾ
ಚರಮೂರ್ತಿಯಂ ಕೇಳ್ದನೆಂತೆನೆ
ಗುರುವೆ ನಿನ್ನಯ ಚಿಂತೆಯಾವುದು ಪೇಳೆಂದಾಗಲೆ || ೧೫ ||

ನಗುತಲಾ ಯೋಗೀಶನೆಂದನೆ-
ನಗೆ ಚಿಂತೆಯಿರ್ಪುದದಾವುದೆನೆ
ಮಿಗೆ ದುರಾಶೆಯೊಳುರಿ ಬೀಳ್ದನಾ ಸಿದ್ಧಾರೂಢನು |
ಬಗೆದಿದಂ ಗರಗದಮಡಿವಳರ್
ಮಿಗಿಲಾದ ಸ್ವಾಮಿಗಳೊರೆದಿಹರ್
ಮಿಗಿಲೆನಿಪ ಶಿಸುನಾಳ ಶರೀಫ ಮಹಿಮರ್‌ಪೇಳ್ದರು || ೧೬ ||

ಆದರುಮೀ ದುರಾಶೆಯನವಂ
ಮೋದದಿಂ ತೊರೆದಿಲ್ಲವಂಗಾವ್
ವಾದಿಸದೆ ಬುದ್ಧಿಯ ಕಲಿಸವೇಳ್ಕುರು ಲೀಲೆಯಿಂದೆ ||
ವೇದಿಸಲ್ ಸುಸಮರ್ಥನಿಹೆ ನೀಂ
ಭೇದಕಂಗಾವ್‌ವೊದಲಿಗೊರೆವೆವ-
ಭೇದದಿಂದೆ ಪ್ರವಾಡವಮಂ ಮೆರೆಯಿಸುತರಿಸು ಬಳಿಕಂ || ೧೭ ||

ಅನಿತಾದಡಂ ಸಿದ್ಧಾರೂಢ-
ಮುನಿತು ದುರಾಶೆಯಂ ಬಿಡದಿರಲು
ಘನದುರ್ಗತಿಯು ಪೊಂದುವನವಂ ಮಾತಿದಲ್ಲ ಸಟೆ |
ಅನವರತಮಾಶೆಯು ತೊರೆದವನೆ
ವಿನುತಾರೂಢ ಪದಕೆ ಸಲ್ವಂ
ಸನಕಾದಿ ಮುಖ್ಯಂ ನಾರದಂ ಕೆಟ್ಟರಿದರಿಂದೆ ‖ ೧೮ ‖

ಸರ್ವರಿಗುಂ ನಿರಾಶೆ ಬಾರದ-
ದುರ್ವಿಯೊಳ್ ಮೊದಲಿಗೆ ಸದಾಶೆಯು
ಶರ್ವನಂ ನುತಿಸುತೆ ಸಾಧಿಸಲ್ವೇಳ್ಕು ಯತ್ನದೊಳೆ |
ಉರ್ವರೆಯೊಳಿದರಿಂ ನಿರಾಶೆಯು-
ಪೂರ್ವಮೆನೆ ತಾನಾಗಿ ಒರ್ಪುದು
ಪೂರ್ವಜರ್ ಸಾಧಿಸಿದರೀ ಸಾಧನದ ಬಲದಿಂದೆ ‖ ೧೯ ‖

ಇಂತೊರೆಯುತೆ ಸದಾಶಿವೇಂದ್ರನ-
ನಂತೆ ನಡೆದಂ ಕೂಡೆ ಭಕ್ತಂ
ಶಾಂತ ಚರಮೂರ್ತಿಯು ಶಂಭುಲಿಂಗಾಖ್ಯನಪ್ಪಣೆಯು |
ಅಂತು ಶಿರದೊಳ್ಕಾರ್ತಿಕಬಹುಳ
ಕಾಂತವಾದ ತ್ರಯೋಧಶಿಯಲ್ಲಿ
ಶಾಂತಿಯಿಂ ಹುಬ್ಬಳ್ಳಿಯ ಜಾತ್ರೆಗಾಗಿ ತೆರಳಿದನು ‖ ೨೦ ‖

ತಚ್ಚತುರ್ಧಶಿಯೊಳ್ದಾಸೋಹ-
ಮುಚ್ಚರಿಯು ಪುಟ್ಟಿಸುತೆ ಜನರೊಳ್
ಸಚ್ಚರಿತ್ರ ಸದಾಶಿವಯೋಗಿಯಧ್ಯಕ್ಷತೆಯೊಳೆ |
ಮೆಚ್ಚಿಗೆಯು ಪಡೆಯುತ್ತೆ ನಡೆದಿಹು-
ದೆಚ್ಚರವಹಿಸುತಾಚಾರದೊಳ-
ಗೊಚ್ಚತವಾಗಿ ದುಡಿಯುವರ್ ಭಕ್ತರುರುಭಕ್ತಿಯೊಳೆ ‖ ೨೧ ‖

ತದವಪೂಸ್ಯೆಯೊಳ್ ಚರಮೂರ್ತಿ
ಪದುಳ್ದಾರೂಢವುಂತದೊಳೊರ್ಮೆಗೆ
ಪದಪಿಂ ವ್ಯಕ್ತಸಾದನೆಲ್ಲರ್ ವಿಸ್ಮಿತರಾಗಲು |
ತದಮಳಿನ ಸತ್ತೇಜವ ಕಂಡು
ಪಡೆದಾನಂದ ತುಂದಿಲರಾಗಿ
ಹೃದಯದೊಳ್ಮಗೆ ಭಕ್ತಿಯುದಿಸಲ್ನಮಿಸಿದರಾಗಳೆ || ೨೨ ||

ಸಿದ್ಧಾರೂಢನೀತಂಗವುರು
ಸಿದ್ಧಾಸನವನಿತ್ತುಪಚರಿಸಿ
ಸಿದ್ಧಾಂತವುಂ ತತ್ಸಭೆಯಲ್ಲಿ ಭೋಧಿಸತೊಡಗಿದಂ ||
ಸಿದ್ಧಾಂತಿ ಗುರುಶಂಭುಲಿಂಗಂ
ಸಿದ್ಧಾಂತಿಯುಂ ಕೇಳ್ದನೆಂತೆನೆ
ಸಿದ್ಧಾಂತ ಸಾರವ ಬೋಧಿಸುವೆ ನೀನಂತಿರುವೆಯಾ || ೨೩ ||

ಇರುವೆನೆಂದೆನೆ ಸಿದ್ಧಾರೂಢ-
ನುರೆ ತದ್ ವಚನವುಂ ಕೇಳುತ್ತೆ
ನೆರೆ ಕಿವಿಗಳಂ ಮುಚ್ಚಿಕೊಳ್ಳುತೆ ತಚ್ಚರಮೂರ್ತಿಯು |
ಕರವೋಳ್ದು ತತ್ ಕ್ಷಣದೆ ಸರ್ವ ಜ-
ನರ ಕಣ್ ಕುಕ್ಕಿಸುತಲಡಗಿದಂ
ಮೆರೆದವನ ತೇಜಕೆ ಮರುಳಾಗಿ ಶೋಧಿಸಲಾದರು || ೨೪ ||

ಶೋಧಿಸುತ್ತಲೆ ಬಂದರ್ ಜನರ್
ಬೋಧಕನಹ ಸದಾಶಿವೇಂದ್ರನ
ಸಾಧುಪದಮಾಗಿಹ ದಾಸೋಹ ನಿಲಯಕಾ ಕ್ಷಣದೆ |
ಶೋಧಕರ್ ಗುರುವಿವನೆಂದರಿದು
ಸಾಧಕರ್ ತತ್ಸನ್ನಿಧಿಯಲ್ಲಿ
ಬೋಧವುಂ ಕೇಳುತೆ ಕುಳಿತರವರೆಲ್ಲವುಂ ಮರೆದು || ೨೫ ||

ಬಹಳ ಪೊಳ್ತಿನವರೆಗುಂ ಜನತೆ
ಮಹಿತನ ಶೋಧಮಾಡಿಕೊಂಡೈ-
ತಹದಿರಲ್ಕಾರೂಢನಲ್ಲಿಂ ತಾನೋರ್ವನಿರದೆ |
ಗಹನ ದುಃಖವ ಪಡುತೆ ತೆರಳ್ದಂ
ಮಿಹಿರ ಕಿರಣವ ಪಳಿವತೇಜದ
ಮಹದನಘವಹ ತದ್ವ್ಯಕ್ತಿಯಂ ನೆನೆಯುತೆ ಮನದೊಳಗೆ || ೨೬ ||

ಜನಸಮೂಹದ ನಿಲವನೀಕ್ಷಿಸಿ
ಘನವಾದ ತತ್ ಶಿಬಿರದೆ ಪುಗುತೆ-
ತನಗೆ ದರ್ಶನವಿತ್ತ ವ್ಯಕ್ತಿಯೆ ಇವನೆಂದು ತಿಳಿದು |
ಅನಘ ತೇಜಸ್ವಿಯು ಸದಾಶಿವ-
ನನುಪಮ ಯೋಗಿಯಂಘ್ರಿಯ ಕಂಡು
ವಿನತನಾಗುತೆ ಪ್ರಾರ್ಥಿಸುತೆ ಕರೆತಂದಂ ಸ್ವಮಠಕೆ || ೨೭ ||

ಕರೆತಂದು ಪೀಠದ ಮೇಲೆ ಕು-
ಳ್ಳಿರಿಸಿ ತಾನುಂ ಕುಳ್ಳಿರ್ದನವ-
ನುರು ನಿದೇಶವ ಪಡೆದು ಭಕ್ತರ್ವಂದಿಸುತಿರ್ದ್ದರು |
ನೆರೆಜನರ್ ತಂದಿಹಕಾಯ್ಗಳಂ
ಭರದೆ ಕೊಳ್ಳುತಲೊಡೆದೊಂದೊಂದು
ಸರಿಯಾದ ಬಟ್ಟಲವ ಕೊಳ್ಳುತೆ ಮಿಕ್ಕಿದಂ ಕೊಡುವ || ೨೮ ||

ಎರಡು ಕಾಯ್ಗಳ ತಂದ ಜನರ್ಗೆ
ಕರೆದೊಂದೊಂದು ಕೊಡುವ ಶಿಷ್ಯರ
ನೆರೆಯಾಟಮಂ ಕಂಡು ಕ್ರೋಧದೊಳುರಿದೆರ್ದ್ದನವನು |
ವರ ಸದಾಶಿವಯೋಗಿ ಕೋಪವ-
ನರಿದು ಸಿದ್ಧಾರೂಢನವಂಗೆ
ಕರಸಂಜ್ಞೆಯಿಂದಿನ್ನಿನಿತು ಕುಳ್ಳಿರಲ್ ಸೂಚಿಸಲು || ೨೯ ||

ಅನಿತರೊಳ್ ಕಪ್ಪುರವ ಕುದಿಯುವ
ಘನ ದೃಶ್ಯಮದು ಕಣ್ಗೆ ಬೀಳ-
ಲ್ಕನಿತು ಮತ್ತಂ ಕ್ರೋಧಾವಿಷ್ಟನಾಗಿಂತು ನುಡಿದಂ ।
ಎನಗೆ ಚೌರ್ಯವ ಕಲಿಸಲ್ಕೆಂದು
ವಿನಯದಿಂ ಕುಳ್ಳಿರಲೊರೆವಿರೇ-
ನೆನುತೆ ಕೋಪದೆ ಶಪಿಸಿದನೆಂತೆನಲ್ ಸದಾಶಿವನು ॥ ೩೦ ॥

ನಡೆಯದಿರಲೀ ಯಾತ್ರೆ ಗರಗದ
ಮಡಿವಾಳಸ್ವಾಮಿಗಳ ವಚನವ
ನಡಿಸದಾದೆ ಶರೀಫ ಸಂತನ ವಾಕ್ಯವ ಮೀಱದೆ ।
ಬಿಡದೆಲ್ಲರೀ ಶಾಪವೆನ್ನುತೆ
ನಡೆದಂ ಸುತ್ತಲೀಕ್ಷಿಸುತಲಾ
ಮೃಡನ ನೆನೆಯುತೆ ರುದ್ರನಂದದೆ ದಾಸೋಹ ಗೃಹಕೆ ॥ ೩೧ ॥

ನೋಡಿದಾಗಳೆ ಮಠದೆ ಕನ್ನಡಿ
ಕೂಡಲೊಡೆದಿಹವುರೆ ಕಟ್ಟಿರುವ
ಕೂಡಿಹ ಗುಳಾಪಂಗಳ್ ಮುಗುಳ್ದು ತೆಂಗಾಯ್ಗಳಿರದೆ ।
ಕೂಡೆ ಪರಿದುದು ಜಲಮಲ್ಲಿ ನಿಲ-
ದೋಡಿದುದು ಜನಮಲ್ಲಿ ನಿಲ್ಲದೆ
ಕೂಡಿದಾನಂದದ ನೆಲೆಯು ದುಃಖಾಸ್ಪದಮಾದುದು ॥ ೩೨ ॥

ಇವನಸಮಾಕ್ಷನೆಂದು ತಿಳಿಯುತೆ
ಜವದೊಳೋಡುತಲಾರೂಢನಾ-
ಗಿವನ ದಾಸೋಹಕ್ಕೈದಿ ಕಂಡಂ ಸದಾಶಿವನ ।
ತವೆ ವಂದಿಸುತೆ ಪ್ರಾರ್ಥಿಸಿದನಿಂ-
ತವಿನೀತನಂ ಪೊರೆಯಾತ್ರೆಯಂ
ತವಕದಿಂ ನಿಲ್ಲಿಸಲ್ಬೇಡೆಂದೆರಗಲಾ ಕ್ಷಣದೆ ॥ ೩೩ ॥

ಯೋಗಿಯೊರೆದಿಹನೆಂತೆನಲ್ ಬಿಡ-
ದೀಗ ನಡೆಯದು ಶಿವರಾತ್ರಿಯೊಳ್
ಸಾಗುವದು ಮಡಿವಾಳಗುರುವಿನ ವಾಕ್ಯವ ಮೀರದೆ |
ಯೋಗಮಾರ್ಗದೆ ನೀಂ ನಡೆಯದಿರ-
ಲಾಗಳುಂ ನಿನಗಿಲ್ಲ ಸುಖಮದು
ರಾಗಿಯಾದೊಡನಂತ್ಯಕ್ಕೆ ನೆರೆ ಪತಿತನಾಗುತಿಹೆ || ೩೪ ||

ಎಂದೊರೆದು ಭಜನಾ ಸಂಘದೊಡ-
ನಂದು ಸಿದ್ಧಾರೂಢನ ಕಳುಪು-
ತಂದದಿಂ ಶಿವಪೂಜೆಯ ತೀರ್ಚಿ ಪೊರಡಲನುವಾದಂ |
ಛಂದದಿಂದವನ ಗುರುವಿದಿರೊಳ್
ಬಂದು ನಿಂದಂ ಭಕ್ತರ್ ನೋಡಿ
ಪೊಂದಿವಿಸ್ಮಯಮಂ ಶಿವನಿವನೆಯನುತೆ ನುತಿಸಿದರು || ೩೫ ||

ಚರಮೂರ್ತಿಯು ಸದಾಶಿವೇಂದ್ರನ
ಕರಮಿಡಿದು ಕುಣಿಯುತಲಿಂತೊರೆದ-
ನುರೆ ಸರಿಯಾಯಿತಹುದಹುದವಂಗುಳಿದುದು ನೆನೆಹಿನೊಳ್ |
ಆರಿದಾರೂಢನೀರೂಢನೆಂ-
ಬುರು ಶಿಸುನಾಳದಾ ಶರೀಫರ
ನೆರೆಪದಂ ಸತ್ಯಮಹುದರಿಯದೆ ನಡೆದೊಡಾರೂಢಂ || ೩೬ ||

ಎನುತೆ ಗಂಜೀಗಟ್ಟಿ ಭಕ್ತನ
ಘನದಾಸೋಹ ಪದ್ಧತಿಯ ಸಲೆ-
ಯನುಪಮ ಶಂಭುಲಿಂಗಚರಮೂರ್ತಿಯು ನುತಿಸುತ್ತಲೆ |
ಜನರೊಡನಾ ಸದಾಶಿವೇಂದ್ರನ
ಬಿನದಮಂ ಪೆರ್ಚಿಸೆ ಶಿವಶಾಸ್ತ್ರ-
ದನಘ ಪ್ರವಚನವ ಗೈಯ್ಯುತ್ತೆ ತನ್ನೂರ್ಗೆ ಬಂದಂ || ೩೭ ||

ನೆರೆ ಕಾರ್ತಿಕದೆ ನಡೆವ ಯಾತ್ರೆಯು-
ದುರೆ ನಿಂದುದಾರೂಢ ಯತ್ನದೆ
ಪರಶಿವರಾತ್ರಿಯೊಳ್ ಪ್ರಾರಂಭವಾದುದಾಗಳದು |
ಸರಸದಿಂದಿದನರಿದ ಭಕ್ತರ್
ಗುರು ಶಿಷ್ಯರಂ ಹರಷಣ್ಮುಖರ-
ನರಿದಂದವರ ನುತಿ ಗಯ್ಯುತಿರ್ದರ್ ಸಂತಸದೊಳೆ || ೩೮ ||

ಹರನಿಗಾಗದ ವರಕಾರ್ಯಮಂ
ಸರಸದೊಳೆಸಗಿ ವಿಶ್ವಶಾಂತಿಯ
ತ್ವರದಿಂ ಗುಹಂ ಪಿತೃವಿಂಗಮಲ ಕೀರ್ತಿಯನಿತ್ತನು |
ಚರಿತವನಿಂತು ಕೇಳಿರ್ದ್ದವಾ-
ವುರು ಪುರಾಣದೊಳಿಹ ಚರಿತ್ರಂ
ನೆರೆ ಸತ್ಯವಾಗಿಹುದೆಂದೆನಲ್ ಕೆಲರೊರೆದರರಿದು || ೩೯ ||

ನೆರೆ ದ್ರೋಣನ ಪ್ರತಿಮೆಯಿಂ ಬಿಲ್ಲಿ
ನುರುವಿದ್ಯೆಯಂ ಕಲಿತು ಭಕ್ತಿಯೊ-
ಳುರೆ ವಿಖ್ಯಾತನಾದೇಕಲವ್ಯನ ಚರಿತವೆಸೆದು |
ವರಭಾರತದೊಳಿರ್ಪುದದೆನಗೆ
ಕರಮಿಂದು ಧಿಟವಾಯಿತೆಂದಾ
ಪರಮಭಕ್ತರೊಳಿಂತಾಡುತಿರ್ದರ್ ಕೆಲರ್ ಮುದದೆ || ೪೦ ||

ವರ ವಶಿಷ್ಠನ ವಿಶ್ವಾಮಿತ್ರ-
ನುರುಶಿಷ್ಯನಹ ರಾಮಚಂದ್ರಂ
ಪರಜಾತವೇದನ ಶಿಷ್ಯನಹ ಪರಮ ಬಸವರಸಂ ||
ನೆರೆ ವಿಶ್ವಕ್ಕೆ ದೇವರಾದರ್
ಕರಮೆಮಗಿಂದು ದಿಟವಿದಾಯಿತು
ಗುರುಶಿಷ್ಯರೀ ಚರಿತಮಿವಕಾದರ್ಶವಾಗಿಹುದು || ೪೧ ||

ಎಂದುನುತಿಸುವ ಭಕ್ತರಂ ಕರೆ-
ದಂದು ಶಿವಮಹಿಮೆಯ ಪೇಳುತ್ತೆ
ಕಂದು ಗೊರಲನೊಳತಿ ಭಕ್ತಿಯಂ ಪುಟ್ಟಿಸುತಲ್ಲಿಯೇ ।
ಅಂದದೆ ಸದಾಶಿವಯೋಗೀಂದ್ರ
ಸುಂದರ ಶಂಭುಲಿಂಗ ಗುರುವರ-
ರಿಂದುಧರನ ಸಮಾನರೆನಿಸುತಲೆಸೆದಿರ್ದ್ದರಾಗ ॥ ೪೨ ॥

ಗದುಗಿನೊಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತಮಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು ।
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತ ಯೋಗಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳ್ ಪತ್ತನೆಯ ಸಂಧಿಯಿದು ॥ ೪೩ ॥

ಅಂತು
ಸಂಧಿ ಹತ್ತಕ್ಕಂ ಪದಗಳು ಐದುನೂರ್ದ್ದಾ ಐವತ್ತೊಂಭತ್ತಕ್ಕಂ
ಮಂಗಲಂ



# ಹನ್ನೊಂದನೆಯ ಸಂಧಿಯು

ಕುರ್ತಕೋಟಿಯ ಬಂಡೆಪ್ಪಂಗೆ
ಕರ್ತನುರು ಶಾಪವನಿತ್ತು ಮೇಣ್
ಸ್ಫೂರ್ತಿಯಿಂ ಶಂಕ್ರಪ್ಪನಂ ತನ್ನಿಮ್ಮನ ಪೊರೆದನು ॥ ಪಲ್ಲ ॥

ಗೋವಾಸ ಗೋಪಾಧಿನಾಥನೆ
ಗೋವಾರ ಗೋಪಾಲ ವಂದ್ಯನೆ
ಗೋವಾಹ ಗೋನಾಥನುತ್ತಿನೆ ಗೋವಿಂದ ವರನೆ ।
ಗೋವೇಶ್ಮ ಗೋಭೂಷಣ ಧರನೆ
ಗೋವಸ್ತ್ರ ಗೋಗರ್ಭೀ ಕೃತನೆ
ಗೋವೇದ್ಯ ಗೋನೇತ್ರ ಪಾಲಿಸು ಗೋಸುಧೆಯನಿತ್ತು ॥ ೧ ॥

ಕ್ಷೀರ ರುಚಿಗಳ್ ಬೆರೆತಂತೆ ಸ-
ಸ್ಯೋರು ರಸಗಳ್ ಕಲೆತಂತೆ ಮೇಣ್
ಸಾರಸ ಪರಿಮಳಂಗಳ್ ಕೂಡಿದಂತೆಯೆ ನಿತ್ಯದೆ ।
ಪಾರವಿಲ್ಲದ ಭಕ್ತಿ ಶಕ್ತಿಗ-
ಳೋರೆಯಾಗಿರದಂತೆ ಯಿರ್ದರ್
ತಾರಕ ಶಂಭುಲಿಂಗ ಸದಾಶಿವೇಂದ್ರರ್ ಭಾವಡಿ ॥ ೨ ॥

ಆ ಸದಾಸಿವ ದೇವಗೋರ್ವ್ವಮ-
ಹಾಸುಭಕ್ತಂ ಕುರ್ತ್ತಕೋಟಿಗೆ
ಲೇಸೆನಿಸಿ ಬಾಳಿದನವಗಲ್ಲಿ ದುಃಖದರುವಿರದೆ ।
ಏಸು ಸುಗುಣಂಗಳಿವನೊಳಿಹವು
ಭೋ ಸುಕೃತಿಗಳೆ ಪೇಳಿರೆಂದೆನೆ
ನಾಸಿಯಾಗುತಲಿಹರಿಲ್ಲಿ ಶೋಧಿಸುತಖಿಲ ಜನರು ॥ ೩ ॥

ಈತನಿಗೆ ಬಂಡೆಪ್ಪನೆಂಬುವ
ಪ್ರೀತಿಯಿಂ ದಿಟ್ಟಿರುವ ಪೆಸರಿದು
ಸಾತಿಶಯ ದಾನದ ಗುಣವ್ಯಕ್ತಂ ಗೊಳಿಪುಪರಿಯೆ ।
ಈತನೆಲ್ಲವ ದೀನರ್ಗ್ಗೆ ಸಲೆ
ಖ್ಯಾತಮೆನೆ ಮಾಡುತಲಿಹನು ಪರಿ
ಪೂತ ದಾಸಂ ಜಂಗಮಪ್ರಾಣಿಯು ಲಿಂಗಾರ್ಚಕಂ ॥ ೪ ॥

ಪರರ ನಾರಿಯು ಪರರ ಧನಮಂ
ಪರರ ಸೇವೆಯ ನೋಡದಿರ್ದಂ
ಪರರ ಸೇವೆಯು ಪರರ ಹಿತಮಂ ಪರರ ಚಿಂತೆಯನು ।
ಪರರನರಿಯುತೆ ಪರಶಿವನೆಂದು
ಪರರಿಗಾಗಿಯೇ ಮಾಡುತಿರ್ದಂ
ಪರಿ ರತಿಯಿಂದೆ ಪರಮಾರ್ಥಮಂ ಪರಕೆ ಸಾಧಿಪನು ॥ ೫ ॥

ಪರ ನಿಂದೆಯುಂ ಪರಕಲುಷಮುಂ
ನೆರೆ ಸ್ವಪ್ನದೊಳಗಾದಡುವಾತ
ನುರೆ ಕೇಳಂ ಸ್ವಹಿತಕ್ಕೆಂದೆಂದು ಸಟೆಯಾಡನವನು ।
ಪರದೈವಮುಂ ಪರಧರ್ಮಮುಂ
ನೆರೆಸ್ವಪ್ನದೊಳಗಾದಡುವಾತ
ನರಿಯೆ ಪೊಂದಂ ನಿಜನುತಿಯೆ ಸಹಿಸಂ ಮಹಾಮತಿಯು ॥ ೬ ॥

ಇವನ ಪತ್ನಿಯು ನೆರೆ ಸುಶೀಲೆಯು
ಶಿವಗುಣಮಣಿಯು ಭಕ್ತಿಯ ಖಣಿಯು-
ಮವಿರಳಾನಂದದೆ ಪತಿವ್ರತೆಯೆನಿಸಿ ಮೆರೆದಿಹಳು ।
ತವೆ ಗುರುಲಿಂಗ ಜಂಗಮದಲ್ಲಿ-
ಯವಳಧಿಕ ವಿಶ್ವಾಸಿನಿಯಾಗಿ-
ಯವಿರತಂ ಸುಜನ ಪ್ರಿಯಳಾಗಿ ಬಾಳ್ದಳಾ ಸುದತಿ ॥ ೭ ॥

ಇಂತು ಬಂಡೆಪ್ಪನುಮವನ ಸತಿ-
ಯಂತಿವರಖಿಲ ವಿಭವದೆ ಮೆರೆವ-
ರಾಂತುಮಿಗೆ ಪುತ್ರರ ಕೊರತೆಯಿಂ ದುಃಖದೆ ಬಾಳ್ದರು ।
ಅಂತರಂಗದೊಳಾ ಸದಾಶಿವ
ಶಾಂತಯೋಗಿಯ ನಂಬಿ ಸೇವಿಸಿ
ಶಾಂತಿಮಾರ್ಗವ ಕಂಡುಕೊಂಡರ್‌ದಂಪತಿಗಳವರು ॥ ೮ ॥

ಶರಣನೆಂಬುವ ಕೀರ್ತಿಯ ಪಡೆದು
ನೆರೆ ಬಂಡೆಪ್ಪನಾಶೆಯ ತೊರೆದು
ಸರಸದಿಂ ಗುರುಲಿಂಗ ಚರದಾಸೋಹಂಭಾವದೆ ।
ಕರಮೆಸೆದಿರ್ದು ಸತಿಗಿರುವ ಸುತ-
ನುರು ಕಾಮನೆಯ ಬಿಡಿಸಿ ಮೆರೆದಂ
ಧರೆಯೊಳಿಹ ಮಕ್ಕಳೆ ನಿನಗೆ ನಿಜಸುತರೆಂದೊರೆಯುತೆ ॥ ೯ ॥

ಈ ಪರಿಯೊಳಿರುವಾಗಳಾತ್ತರ
ವೈಪರೀತ್ಯದ ಭಾವನೆಯೆ ತಿಳಿ-
ದಾ,ಪುನೀತಂ ಗುರುಸದಾಶಿವನಪ್ಪಣೆಯ ಪಡೆದು |
ಆ ಪರಿಯ ಬಂಧುಗಳ ಸ್ಥಿತಿಯ ನಿ-
ರೂಪಿಸುತೆ ಪತ್ನಿಯನೊಪ್ಪಿಸುತೆ
ಪಾಪ ರಹಿತಂ ಲಿಂಗಿರೆಡ್ಡಿಯ ಕುಲದ ಬಂಡೆಪನು ‖ ೧೦ ‖

ಕೋಣನವರೆಂಬುಪನಾಮವಿಡಿ-
ದೂಣೆಯಿಲ್ಲದಲಿಹ ಭೀಮಪನ
ಜಾಣನಹ ತಮ್ಮನ ರಾಮಣ್ಣ ನಾಮಕನನವನು|
ಮಾಣದಲೆ ದತ್ತಕ ಸುತನನಾ-
ಗ್ಯಾಣತೆಯ ಪಡೆದಾ ಗುರುವರನ
ಕಾಣುವಂದದೆ ಸ್ವೀಕರಿಸಿದಂ ಸರ್ವರನುನಯಕೆ ‖ ೧೧ ‖

ಭೀಮಪ್ಪನುರೆ ಮೊಮ್ಮಗನಾದ
ಪ್ರೇಮಾಳುವಹ ಫಕೀರಪ್ಪನೆ
ಪ್ರೇಮತ್ವದಿಂ ಕಮರೆಪ್ಪನುರು ಸತ್‌ಪೌತ್ರನಾಗಿ |
ಧೀಮಾನ್ ಫಕೀರಪ್ಪನೆಂಬುವ
ಶ್ರೀಮಂತನಿಂದಾತ್ಮಜನಾಗಿ
ಕಾಮಾರಿ ನಿಜಭಕ್ತರೊಪ್ಪಲ್ ಸ್ವೀಕೃತನಾದನು ‖ ೧೨ ‖

ಮೂವರಿದ್ದರ್ ಪೆಣ್‌ಮಕ್ಕಳಾ
ಭಾವುಕನಾದ ಬಂಡೆಪ್ಪಂಗೆ
ಸಾವಧಾನಿಗೆ ಕನ್ಯೆಯರ್ಗೆ ವಿವಾಹವ ಮಾಡುವ |
ನೋವಿನ ಹೊರತು ಜಗದೊಳವಂಗ-
ದಾವದು ದುಃಖವಿಲ್ಲ ಮತ್ತೊಂ
ದೋವಿ ವರಶೋಧಮನೆಸಗೆಸಗಿ ಬೇಸತ್ತಿರ್ದನು ‖ ೧೩ ‖

ಪೆಣ್ಣು ಹುಟ್ಟಿದೊಡೊಂದು ಪಿತಂಗೆ
ಹುಣ್ಣು ಹುಟ್ಟಿದ ಸಮನೆಂದು ಬ-
ಲ್ಲಣ್ಣಗಳು ಪೇಳ್ವರದು ನಿಜಮಲ್ಲದಲೆ ಮತ್ತೇನು ।
ಪುಣ್ಣಿದು ತನುವಿಗಾದುದಲ್ಲಂ
ಬಣ್ಣಗೆಡಿಪುದು ಮನದ ನೋವಿದೆ
ಸಣ್ಣಗೊಳಿಪುದು ಸುತೆಯು ಬಾಳ್ಸರಿಯಾದೊಡೆ ಮಾಯ್ವುದು ॥ ೧೪ ॥

ಇದನೆಲ್ಲ ಯೋಚಿಸಿ ಬಂಡೆಪ್ಪ-
ನೊದವಿದ ದುಃಖದಿಂದಿಂತು ಸಲೆ
ಸದಮಲಂ ನಿಶ್ಚಯಿಸಿದಂ ಗುರುಗಳ್ಗೆ ದಾನಮನೆ ।
ಸದುಳ್ದುಗೆಯ್ಯಲ್ವೇಳ್ಕೆಂದವಂ
ಪೊದೆದು ಸಾವಿರ ರೂಪಾಯಿಗಳ
ಮುದದೆ ಕೊಳ್ಳುತೆ ಗಂಜೀಗಟ್ಟಿಗೈದಿದಂ ಕ್ಷಣದೆ ॥ ೧೫ ॥

ಅವನ ನಿಶ್ಚಯಮಿತ್ತೆಂತೆನ-
ಲ್ಕವಿರಳ ಶಂಭುಲಿಂಗಂ ಸದಾ-
ಶಿವಯೋಗಿ ಯಿವರೀಶ್ವರ ಲಿಂಗಪೂಜೆಗೆ ಧನಮಿದು ।
ತವೆ ಸಲ್ಲಿದೊಡೆ ಹಿತಮುಹುದೆಂದು
ಸವಿನಯದೊಳಾ ಗೈದಿರ್ದನು-
ತ್ಸವದೊಳಲ್ಲೀಕ್ಷಿಸಲಿಕ್ಕೀರ್ಶ್ವರು ಮಿರಲಿಲ್ಲಮಂದು. ॥ ೧೬ ॥

ವರ ಮಂತ್ರೋಡಿ ಸಿದ್ಧರಾಮಪ-
ನುರು ಭಕ್ತನಾಗಿರ್ದನಾ ಗುರು-
ವರಶೀರ್ವರಿಗೆ ಕಾಣುತಾತನನೀ ಬಂಡೆಪ್ಪನು ।
ಒರೆದಾತಂಗೆ ತನ್ನ ಬಯಕೆಯ-
ನುರೆ ಸಾವಿರ ರೂಪಾಯಿಗಳ ತತ್
ಕರದೊಳಿತ್ತಿಂದು ನಿತ್ಯದ ಪೂಜೆಗಾಗಲುಪಯೋಗಂ ॥ ೧೭ ॥

ಎಂದು ಮತ್ತೊರ್ಮೆ ಲ್ಲವ ಪೇಳ್ದು
ವಂದಿಸುತೆ ಪೋದಂ ಗುರುವರರ
ಸಂದ ನಿರಾಶೆಯಿರು ವೃತ್ತಿಯಂ ನೆನಹು ಗೈದವಗೆ |
ಅಂದದಿಂದೆಚ್ಚರಿಸುತ್ತೆ ಸಲೆ
ಬಂದನವನಾ ಗಂಜೀಗಟ್ಟಿ-
ಯಿಂದೆ ಚರಮೂರ್ತಿಗಳ ಸದಾಶಿವೇಂದ್ರರ ನೆನೆಯುತೆ || ೧೮ ||

ಜ್ಞಾನದಿಂದದನರಿದು ತತ್ಸು
ಜ್ಞಾನಿಯಹ ಚರಮೂರ್ತಿಯಾ ಸ-
ನ್ಮಾನಿ ಮಂತ್ರೋಡಿಯ ಸಿದ್ಧರಾಮಪ್ಪನ ಮನೆಯುನೆ |
ಮೌನದಿಂ ತೊರೆದಂ ವಿಷಯುಮಿದು
ಜ್ಞಾನನಿಧಿಗೆ ಸದಾಶಿವೇಂದ್ರಂ-
ಗೇನು ತಿಳಿಯದೆ ಘನಚಿಂತೆಯಡಸಿತು ಶಿವಯೋಗಿಗೆ || ೧೯ ||

ಗುರುವಿನ ಧ್ಯಾನದೊಳಗಿರುತಿರಲ್
ಚರಮೂರ್ತಿಯಾಗಳೆ ಬಂದು ಸಲೆ
ಕರೆದನಾ ಮನೆಯಂಗಳದೆ ನಿಲ್ಲುತೆ ಸದಾಶಿವನ |
ಭರದೆ ಬಂದೀಕ್ಷಿಸಿ ನಮಿಸುತಿರೆ
ಕರವಿಡಿದು ನೋಡುತಲಿಂತೊರೆದ-
ನರಿಯೈ ಸದಾಶಿವ ತವಶಿಷ್ಯ ಬಂಡೆಪನ ಕಥೆಯ || ೨೦ ||

ಎಮ್ಮೀರ್ವರಿಗೆ ಲೇಪಿಸಲೆಂದು
ನೆಮ್ಮಿರ್ಪ ಮಂತ್ರೋಡಿಯ ಮನೆಗೆ
ಸಮ್ಮೋಹದಿಂ ಬಂದಿಟ್ಟಿಹಂ ಮಲವ ತಿಳಿದಿಹೆವು |
ಹಮ್ಮಿರ್ಪನೀ ಸಿದ್ಧರಾಮನ-
ದೆಮ್ಮಿಂದಲಿದು ಸಾಧ್ಯವಿಲ್ಲಂ
ನಿಮ್ಮಿಷ್ಟವಿರ್ದಂತೆ ನೀವ್ ಪೂಳ್ವುದು ನಿಲ್ಲೆವಿಲ್ಲಿ || ೨೧ ||

ಎಂದು ನಿಲ್ಲದೆ ಗುರುವು ಪೋಗ-
ಲ್ಕಂದು ಬೆದರ್ದು ಸದಾಸಿವೇಂದ್ರಂ
ಕಂದುಗೊರಲನ ನೆನೆಯುತ್ತಲಾ ಸಿದ್ಧರಾಮಪನ |
ಇಂದು ಧರ ಸಮನಲ್ಲಿ ಕರೆಸುತ-
ಲಂದದಿಂ ಗುರುವೊರೆದ ವಾರ್ತೆಯ-
ನೊಂದು ಬಿಡದಂತೊರೆದಿಂತು ಕೇಳ್ದಂ ಮಲಮನೆಮಗೆ || ೨೨ ||

ಲೇಪಿಸುವದೇಕೆನೆ ಬೆದರುತ್ತೆ
ಪಾಪವಿರಹಿತ ಸಿದ್ಧರಾಮಪ-
ನಾ ಪವಿತ್ರಂಗೆರಗಿಂತು ಪೇಳ್ದಂ ನಿಜಸ್ಥಿತಿಯ |
ಲೋಪಮಲ್ಲಿದು ಕೇಳ್ ಮಹಾತ್ಮನೆ
ತಾಪದಿಂ ಬಂಡೆಪ್ಪನುರೆ ತ-
ವ್ಮ್ಮೀ ಪುನೀತ ಸುಲಿಂಗಾರ್ಚನಕ್ಕೀರ್ವರಿಗಾಗಿಯೆ || ೨೩ ||

ನಿತ್ಯದಲ್ಯುಪಯೋಗಿಪುದೆಂದು
ಸತ್ಯಮಾಗಿಯೆ ತಮ್ಮೀರ್ವರಿಗೆ
ಕೃತ್ಯ ವಿಷಯವ ತಿಳಿಸದಿರೆನುತಲೆನ್ನ ಕೈಯಲ್ಲಿ |
ಅತ್ಯಧಿಕ ಮಾದಾಗ್ರಹದಿಂದೆ
ಸ್ತುತ್ಯನುರೆ ಸಾವಿರ ರುಪಾಯ್ಗಳ
ನುತ್ಯನೆಕೊಟ್ಟು ಪೋದನಾ ಕ್ಷಣದಲ್ಲಿ ತಮ್ಮೂರ್ಗೆ || ೨೪ ||

ಆ ರುಪಾಯಿಗಳೆನ್ನಲ್ಲಿಹವು
ವಾರಿಸೆನ್ನಪರಾಧವ ಕೃಪಾ-
ವಾರಿಧಿಯೆ ಕಾಯೆಂದೆನುತೆ ವಂದಿಸಿ ತದ್ಭಕ್ತನು |
ತೋರಿಸಿದನಾಗಳೆ ತಂದವಂ
ಸಾರವಿದನವುಗಳನೀಕ್ಷಿಸುತೆ
ತೋರದಿರೆನಗೆ ಗುರುವೊರೆದ ಮಲಮಿದುವೆ ಎಂದನವಂ || ೨೫ ||

ಆವನಿತ್ತಿದ್ದನು ನಿನ್ನಕೈ-
ಗಾವಿವೇಕಿಯು ಕರದೊಳೀಯನೆ
ಕೋವಿದಂ ಮಂತ್ರೋಡಿಯು ಸಿದ್ಧರಾಮಪ್ಪನಾಗ |
ಧಾವಿಸಿ ಕುರ್ತಕೋಟಿಗೆ ಬಂದು
ಪಾವನಾತ್ಮರ ಸರ್ವ ಚರಿತವ-
ನೋವಿ ಪೇಳುತೆ ಬಂಡೆಪ್ಪಂಗೆ ಕೊಟ್ಟನಾ ಧನವ || ೨೬. ||

ಆ ಮಹಾತ್ಮರಿಗೀ ಧನವನಾಂ
ನೇಮದಿಂದೀಯಲೆ ವೇಳ್ಕೆಂದು
ಪ್ರೇಮದಿಂ ಬಂಗಾರವ ಕೊಂಡು ಗೆಯ್ಸುತೆ ಕಡೆಗಳ |
ಕಾಮನೆಯಿಂದೆ ಕಾಯ್ದಿಟ್ಟಹಂ
ಕಾಮ ರಹಿತಂ ಸಿದ್ಧರಾಮಪ-
ನೀ ಮಹಾಭಕ್ತಿಯ ಕುರ್ತಕೋಟಿಯೊಳಿ ಪೊಗಳುತ್ತೆ || ೨೭ ||

ಸಂಚರಿಸತೊಡಗಿದನಾ ಪುರದೆ
ವಂಚಿಸದಲಾ ಬಂಡೆಪನೊರ್ಮೆ
ಸಂಚಿತವ ತಾಂ ಕಳೆದುಕೊಳ್ಳಲ್ ಕರೆದು ನಿಜ ಗೃಹದೆ |
ವಂಚನಾತೀತನ ಪೂಜಿಸುತ-
ವಂ,ಚರಮೂರ್ತಿ ಕರಗಳ ಪಿಡಿದು
ಸಂಚಯಿಸಿಟ್ಟ ಸ್ವರ್ಣದ ಕಡೆಗಳಂ ತೊಡಿಸಿದನುರೆ || ೨೮ ||

ಆ ಕ್ಷಣದೆ ಚರಮೂರ್ತಿಯುಮೇಳ್ದು
ಲಕ್ಷಿಸಿ ಹೊಲಸ ಹಚ್ಚಿದನೆನುತೆ
ರಕ್ಷಿಸಿರಿ ತೆಗೆಯಿರೆನುತ್ತೆ ಪೊಯ್ಕೊಳುತೆ ಹೊರಬಂದಂ |
ಈಕ್ಷಿಸುತೆ ಜನರೈದಿ ಕಡೆಗಳ
ಲಕ್ಷಿಸುತೆ ತೆಗೆಯಲ್ ಬಂಡೆಪನ-
ನೀಕ್ಷಿಸಲೆ ಬಂಡ್ಯಾ ತವ ವಂಶವಿದು ಪಾಳಾಗಲಿ || ೨೯ ||

ಎನುತೆ ಶಾಪವನಿತ್ತಾ ಗುರುವು
ಘನಲೀಲೆಯಿಂ ಧಾವಿಸಿ ಬಂದು
ಮನದೆ ಶಿವನಂ ನುತಿಸುತ್ತೆ ಗಂಜೀಗಟ್ಟೆಯಲ್ಲಿ ।
ಅನವರತವಿರುತಿರಲ್ ಬಂಡೆ-
ಪ್ಪನ ವಂಶಮದು ಸಾಳಾದುದಾ
ವಿನುತ ಚರಮೂರ್ತಿಯು ಸದಾಶಿವಯೋಗಿಯ ಕೃಪೆಯೊಳೆ ॥ ೩೦ ॥

ಉಳಿದುದಾ ದತ್ತಕಪುತ್ರನಿಂ
ತಿಳಿದ ಜನರೆನುತಿರ್ದರೆಂತೆನೆ
ತಿಳಿಯೆ ಮಹಾತ್ಮರೊಡನೆ ಸರಸಂ ತಕ್ಕುದಿದೆಲ್ಲವು ।
ತಿಳಿದು ತದಿಚ್ಛೆಯಂ ನಡೆದವರ್
ಪೊಳೆಯುವರ್ ತದನುಗ್ರಹವ ಪಡೆ
ದುಳಿಯರ್ ತನ್ಮಹಾ ಕ್ಷೋಭಮಂ ಪಡೆದವರೆಂದಿಗುಂ ॥ ೩೧ ॥

ಓರ್ವನೆಂದಂ ಶರಣಬಸವನ
ಖರ್ವ ಪುರಾಣದೊಳಗಿಹ ಲೀಲೆ
ಶರ್ವ ಕೃಪೆಯಿಂದೆನ್ನನ್ನ ಸ್ಮೃತಿ ಪಥದೊಳ್ ಬಂದುದಿಂದು ।
ಪಾರ್ವನೊಬ್ಬನೆ ಬಂದು ಶರಣನ
ಸರ್ವರಂ ಕೇಳ್ವಂತೆ ಧನಮನ-
ಪೂರ್ವ ಮಹಿಮನ ಕೇಳೆ ಸರ್ಪವ ತೋರ್ದು ಪಿಡಿಯೆನಲು ॥ ೩೨ ॥

ಅವನಾಜ್ಞೆಯಂತಾ ಸರ್ಪಮಂ
ತವೆ ಪುತ್ತದೊಳ್ ಪೋಗಿರುವಾಗ-
ಲವನದರ ಬಾಲವ ಪಿಡಿಯುತಿರೆ ಸ್ವರ್ಣಮದಾಗಲು ।
ಸವಿನಯದೆ ಮರಗುತ್ತೆ ಪೋಗಿಹ-
ನಿವನನುಜ್ಞೆಯ ನಡೆಸಿದ್ದಡಾ
ನವಿರತಂ ಸಿರಿವಂತನಾಗುತಲಿರ್ಕೆ ನೆಂದೆನುತೆ ॥ ೩೩ ॥

ಆ ಕಥೆಯಿರದಲಾ ಶರಣ ಬಸ-
ವೈಕ ಮಹಿಮೆಯು ಸತ್ಯಮಾಯ್ತೀ
ಲೋಕದೊಳಗೆನುತಿರೆ ಮತ್ತೊರ್ವನೆಂದನೀ ಪರಿಯೊಳ್ ।
ಕಾಕು ನಾರಿಯಳೊಬ್ಬಳಾನಿಂ-
ದೀ ಕಳವ ಮಾಡಿಲ್ಲವೆಂದುರೆ
ಲೌಕಿಕನಂತೆ ಸಿದ್ಧಲಿಂಗನ ತಿಳಿದು ಕೈಯೆತ್ತೆ ॥ ೩೪ ॥

ಭುಜವಾಗ ಸ್ತಂಭಿತಮಾಯಿತಖಿ-
ಲ ಜನರ್ ಪೊಗಳ್ದರೆಂದುರೆ ಕೇಳಿ
ಕುಜನನಂತಾಂ ನಗುತಿರ್ದೆನಿದು ದಿಟಮಾಯಿತಿಂದು ।
ನಿಜವಾಗಿ ನುತಿಸುತೆ ಮತ್ತೊರ್ವ
ವೃಜಿನಭೀರುವು ನುಡಿದನೆಂತೆನೆ
ಸೃಜಿಸಿದಳ್ ಬಿಜ್ಜಾಂಬೆ ಲಿಂಗವ ಸುತನನಾಗಂದು ॥ ೩೫ ॥

ಕೇಳಿರ್ದೆನಾಂ ದಿಟಮಾಯಿತದು
ಭಾಳಲೋಚನ ಸಮನಹುದಿವಂ
ಪೇಳುವರ್ ಪೆಣ್ಮಣ್ಣು ಪೊನ್ನಿಗೆ ಮೂರು ಮಲವೆಂದು ।
ಪೇಳುವವರಿಗೆ ಬಿಡಲಸಾಧ್ಯಂ
ಕೇಳುವವರಿಗೆ ಬಿಡಲಸಾಧ್ಯಂ
ಬಾಳಮಾತೇಂ ತಿಳಿದವರಿಗುಂ ಬಿಡಲಸಾಧ್ಯಮುರೆ ॥ ೩೬ ॥

ಇದನರಿದು ಮತ್ತೊರ್ವನೆಂದಂ
ಸದಮಲನೆ ನಿನ್ನಯ ನುಡಿಯು ನಿಜ-
ಮಿದಕಾಗೆಮ್ಮ ಶಿವಶರಣರ್ಕಳವುಗಳಾಶೆಯಿನೆ ।
ಪದುಳ್ದು ಬಿಡವೇಳ್ಕೆಂದು ನುಡಿಯುತೆ
ಪದಪಿಂದೆ ತಾವ್‌ನಡೆದು ತೋರ್ದಿ ಹ-
ರದರಂತೆ ನಡೆದೊಡೆ ಸುಖಮುಹುದೆನಲ್ಕೊಪ್ಪಿದರೆಲ್ಲರು ॥ ೩೭ ॥

ಮತ್ತೊಂದು ಲೀಲೆಯನೊರೆವೆನಾಂ
ಚಿತ್ತಂಗೊಟ್ಟು ಕೇಳ್ವುದೆಂತೆನೆ
ಮತ್ತೊರ್ಮೆಯಾ ಕುರ್ತಕೋಟಿಗೆ ಚರಮೂರ್ತಿಯೈದಿ।
ಸುತ್ತಾಡುತುತ್ತಮ ಭಕ್ತರುರೆ
ಕುತ್ತಂಗಳಂ ಕಳೆಯುತಲ್ಲಿಯೆ
ಪುತ್ತಾರ ಶಂಕ್ರಪ್ಪನೆಂಬುವ ಸತ್ತಮನ ಕಂಡಂ ॥ ೩೮ ॥

ಸುಪ್ರಮಾಣವ ಸ್ವೀಕರಿಸುತಂ
ಕ್ಷಿಪ್ರದೆ ಕೇಳ್ದನೇಕೆ ಶಂಕರ
ಸಪ್ರಮಾಣದೆ ಪೇಳು ಗಂಜೀಗಟ್ಟಿಗೆ ಬರ್ಪೆಯಾ।
ಅಪ್ರತರ್ಕ್ಯನ ನುಡಿಯುಂ ಕೇಳು-
ತಪ್ರಮೇಯನೆ ಬರ್ಪೆನೆನಲವ-
ನಪ್ರಮಿತನೆಂದಂ ಕರೆದುಕೊಳ್ಳೈ ಮತ್ತೋರ್ವನ ॥ ೩೯ ॥

ಅನಿತರೊಳಗೋರ್ವಂ ಬಂದೆರಗ-
ಲನಘನಪ್ಪಣೆಯಂತೆ ಶಂಕ್ರ-
ಪ್ಪನವನಂ ಕರೆಯಲ್ಕೊಪ್ಪಿದಂ ಮೂವರ್ಶರ್ವನ।
ನೆನೆಯುತ್ತೆ ಗಂಜೀಗಟ್ಟಿ ಪಥ-
ಮನವಲಂಬಿಸಿ ರಾಮಗಿರಿಯೂ-
ರನೆ ದಾಂಟೆ ಬರಲಾಕಾಶಮಂ ನೋಡಿ ಚರಮೂರ್ತಿ ॥ ೪೦ ॥

ಈರ್ವರಂ ನೋಡುತ್ತಲೊರೆದಂ
ಶರ್ವಸಮನೆಂತೆನೆ ನಡೆಯಿರೈ
ಪೂರ್ವದೊಳಗಿಲ್ಲದ ಮಳೆಯೆ ಪ್ರಾರಂಭಮಾಗುವದು॥
ಸರ್ವರನಿತರೊಳಾ ಗುಡಿಯೆ ನಾವ್
ವುರ್ವಿಯೊಳಗುಳಿಯುವೆವು ಸಾರ್ದೊಡ-
ಪೂರ್ವಮಹಾತ್ಮ ನಿಂತೆನುತಿರಲ್ಕಿಬ್ಬರಾಗಸವ ॥ ೪೧ ॥

ನೋಡುತಿರೆ ಮೋಡದ ಸುಳುವಿಲ್ಲ
ನಾಡೆ ವಿಸ್ಮಯದಿಂದೆ ತ್ವರದಿಂ
ಕೂಡಿ ಸಾಗಿದರನಿತರೊಳ್ ಬಿರುಗಾಳಿಗನುವಾಯ್ತು |
ನಾಡಿಗೆ ಭಯವ ಪುಟ್ಟಿಸುವಂತೆ
ಕೂಡೆ ಬಲದಿಂ ಬೀಸಲಾಯಿತು
ನೋಡಲಾ ಕ್ಷಣದಲ್ಲಿ ಗಿಡಮರಗಳ ಕೆಡಹುತಿಹುದು || ೪೨ ||

ಬಿರುಗಾಳಿ ಬೀಸಿದ ಕ್ಷಣದಲ್ಲಿ
ಭರದಿಂದ ಮೋಡಮುದಾಗಸವ-
ನುರೆ ವ್ಯಾಪಿಸಿ ಪಳಚ್ಚನೆ ಮಿಂಚು ಮಿಂಚಿ ಗುಡುಗುತಲೆ |
ಸರಭಸದೆ ಕಟ್ ಖಡಲೆಂಬ ಸಿಡಿ-
ಲುರು ಶಬ್ದಮಾಗುತ ಲಾಲಿಕಲ್
ಸುರಿದು ಬಳಿಕ್ಕೆ ಜಲವೃಷ್ಟಿಗಾರಂಭಮಾಯ್ತೊಡನೆ || ೪೩ ||

ಘೋರೆನಿಪ ಶಬ್ದವ ಗೆಯ್ಯುತ್ತೆ
ಭೂರಿ ವೃಷ್ಟಿಯು ನೀರ್ಗರೆಯೆ ಮುಂ-
ಗಾರಿಮಳೆಯಿದುಮೆಂದೆಂದುಮಾಗಿಲ್ಲಮೆಂಬ ನುಡಿ |
ಆರುಮುರೆ ನುಡಿಯಪ ತೆರನಾಗಿ
ಘೋರಮಾಗಿಯೆ ಸುರಿಯಲಾಗದು
ಸಾರುತ್ತೆ ಭೂಮಿಯಾಗಸವನೊಂದಾಗಿಸುತಲಂದು || ೪೪ ||

ಎಲ್ಲ ಕೊಳ್ಳಗಳೆಲ್ಲ ಪಳ್ಳಗ-
ಳೆಲ್ಲ ಪೊಳೆಗಳದೆಲ್ಲ ಕೆರೆಗಳ-
ದೆಲ್ಲ ವಾಪಿಗಳೆಲ್ಲ ಕೂಪಗಳಲ್ಲಿ ತುಂಬಿ ಸಲೆ |
ಎಲ್ಲ ಜೀವಿಗಳೆಲ್ಲ ಪ್ರಾಣಿಗ-
ಳೆಲ್ಲ ಭೂತಗಳೆಲ್ಲವಲ್ಲಿಯು-
ಮೆಲ್ಲ ವಿದಥಿಂ ಸಂತಸಂಬಡುವಂತೆ ಪರಿದಿಹವು || ೪೫ ||

ಜಡಿಮಳೆಯು ಮೂರ್ ತಾಸಿನನಕಂ
ಜಡಿಯುತಿರೆ ಸರ್ವಪ್ರಾಣಿಗಳ್
ನಡುಗುತ್ತೆ ಬೆಚ್ಚಗಿಹ ನೆಲೆಗಳ ಶೋಧಿಸಿಕೊಂಡವು |
ತಡೆಯದಲೆ ಮಾನವರರಿದು ತಮ-
ಗಡಿಸಿದ ಕಾರ್ಯಗಳ ತೊರೆದು ಗಡ-
ಬಿಡಿಯಿಂದ ಮನೆಗಳ ಪೊಕ್ಕು ಕದವಿಕ್ಕಿದರ್ ಬೆದರಿ || ೪೬ ||

ದಾರಿಕಾರರು ಗುಡಿಗವಿಗಳಂ
ಸೇರುತವುಗಳ ಬಾಗಿಲಂಗಳ
ಸಾರುತೆ ಮುಚ್ಚಿಕೊಳಲಾಗದಲೆ ಮಲಗಿದರೆಲ್ಲರು |
ಸಾರತರನೆಮ್ಮಯ ಚರಮೂರ್ತಿ
ಸಾರಿದೀರ್ವರನಾ ಗುಡಿಯೊಳಗ-
ಪಾರ ಮಹಿಮಂ ಮಲಗಿಸಿರ್ದನನಿತರೊಳಗಲ್ಲಿಗೆ || ೪೭ ||

ಒಂದು ಘಟಸರ್ಪಂ ವೇಗದಿಂ
ಬಂದುದನರಿಯುತಾ ಚರಮೂರ್ತಿ-
ಯುಂದದಿಂ ಕಿಡಕಿಗಳ ಹರಿಗಳ ನೋಡಿಟ್ಟರಿವೆಯ |
ಛಂದದಿಂ ಬಿಗಿಯಾಗಿ ಮುಚ್ಚುತೆ
ಪೊಂದಿದ ತನ್ನಯ ರುಮಾಲವ-
ನಂದದಕಾಗಿಯುಪಯೊಗಿಸಿರ್ದಂ ಹರಿದು ಹರಿದು || ೪೮ ||

ಕದದ ಕಿಂಡಿಗೆ ಶಂಕ್ರಪ್ಪನುರೆ
ಮುದದೆ ರುಮಾಲಮಂ ತೆಗೆದುಕೊಂ-
ಡೊದವಿಸುತೆ ಬಾಗಿಲಕೆ ಕಾಲ್ಗೊಟ್ಟವನೆ ಮಲಗಿರ್ದಂ |
ಇದನೆಲ್ಲ ನೋಡುತಿರುವೀರ್ವರ್
ಪುದಿದಾಶ್ಚರ್ಯದಿಂ ಕೇಳಲದ-
ನುದಯದೊಳೊರೆವೆನೀಗ ನೀವ್ಮಲಗುವದೆಂದೊರೆದನು || ೪೯ ||

ಶಂಭುಲಿಂಗಾರ್ಯ ಚರಮೂರ್ತಿಯು
ಶಂಭುವೆಂದರಿದಾ ವಿಷಯದೊಳ್
ದಂಭವಿಲ್ಲದೆ ನಿಶ್ಚಿಂತೆಯಿಂ ಮಲಗಿದರೀಶ್ವರು ।
ದಂಭರಹಿತಂ ಧ್ಯಾನದೊಳಿರಲ್
ಜೃಂಭಿಸುತೆ ಸರ್ಪಮದೈದುತಲೆ
ಸ್ತಂಭಿತವಾದ ಗುಡಿಕಿಡಕಿಗಳ ನೋಡುತಲಿದಾಡಿ ॥ ೫೦ ॥

ಕೋಪದಿಂ ಸರ್ಪಂ ಬಾಗಿಲಕೆ
ತಾಪದೆ ಹೆಡೆಯನಪ್ಪಳಿಸುತಂ
ವೇಪಿಸುವೊಲಾಸ್ಫಟಿಸಿ ಭುಸುಗುಟ್ಟುತ್ತೆ ತಡೆತಡೆದು ।
ವೇಪನದ ಶಬ್ದವ ಕೇಳ್ದು ನಿ-
ರ್ಲೇಪನ ಕೇಳ್ದರೀಶ್ವರ್ ಗುರುವೆ
ಈ ಪರಿಯ ಸಪ್ಪಳಮೇನೆಂದರೆಚ್ಚತ್ತಂಜುತೆ ॥ ೫೧ ॥

ಬೆಳಗಿನೊಳ್ ಪೇಳ್ವೆಂ ಮಲಗಿರೆನೆ
ತಳೆದು ಮೌನವ ಮಲಗಿದರ್ ಮನ-
ದೊಳೆ ಕಂಪನಂ ಪೆರ್ಚಿತಾ ಸರ್ಪದ ಧ್ವನಿಯ ಕೇಳೆ ।
ಸುಳಿಯದಾದುದು ಕಣ್ಗೆ ನಿದ್ರೆಯು
ಬಳಿಕ ಕೆಲಹೊತ್ತಿನ ಮೇಲಡಗಿ-
ದುಳಿಯದಾ ಧ್ವನಿಯಾಮೇಲೆ ಶಾಂತಿಯು ನೆಲಸಿತಲ್ಲಿ ॥ ೫೨ ॥

ಮಲಗಿದರ್ ಮೂವರ್ ಮೋದದಿಂ
ಸಲೆ ಬೆಳಗಾಗುವನಕಂ ಮತ್ತೆ
ನಲಿದು ಹರನಂ ನೆನೆಯುತಲ್ಲಿಂದೇಳುತೆ ಪೊರಟನು ।
ತಲಬಾಗಿಲದ ಹೊರಗೆ ಹಾವಿನ
ನೆಲೆಸಿದ ಗೆರೆಗಳಂ ಕಾಣುತ್ತೆ
ಬಲೆದಾಶ್ಚರ್ಯದಿಂ ಪ್ರಶ್ನಿಸಲ್ ಗುರುವೆಲ್ಲವೊರೆದಂ ॥ ೫೩ ॥

ಮೆರೆವ ಗಂಜೀಗಟ್ಟಿಗಾ ಗುರು
ವರ ಶಂಭುಲಿಂಗ ಚರಮೂರ್ತಿಯು
ಹರುಷದಿಂ ಶಂಕ್ರಪ್ಪನಾತನ ಮಿತ್ರನೊಡನೈದಿ |
ಪರಮಾಶಿಷವನೀರ್ವರಿಗಿತ್ತು
ಸರಸದಿಂ ಕಳುಪಿದನೀರ್ವರುಂ
ಚಿರಶಾಂತಿಯಂ ಪಡೆದರೀತನ ಸಂಸ್ಮರಣೆಯಿಂದೆ || ೫೪ ||

ಈತನ ಮೇಣ್ ಸದಾಶಿವಾರ್ಯನ
ಸಾತಿಶಯ ಕೃಪೆಯಂ ಪಡೆಯುತ್ತೆ
ಪ್ರೀತಿಯಿಂ ಲಕ್ಷ್ಮೇಶ್ವರಪುರದೆ ನೆಲಿಸಿ ಭಕ್ತರಿಂಗೆ |
ಪೂತವಹ ಭಕ್ತಿ ಜ್ಞಾನಿಗಳ
ನೀತಿಯಂ ಬೋಧಿಸುತೆ ಶಂಕ್ರಪ-
ನೋತು ಮೆರೆಯುತೆ ಬ್ರಹ್ಮದೆ ಬೆರೆದನಾ ಮಹಾಮತಿಯು || ೫೫ ||

ಪರಮಾಗಸ್ತ್ಯ ತೀರ್ಥದೊಳಿವನ
ನೆರೆ ಸಮಾಧಿಯದಿಹುದು ಗರ್ದ್ದುಗೆ-
ಯುರೆಯಿಹುದು ನಿರ್ಮಿತಮಾಗಿಲ್ಲಿ ಗುಡಿಯು ರಚಿತಮಿದೆ |
ಸರಸಮೆನೆ ಕವಡೀಶರಾಲಯು
ವರನಾಮದಿಂ ಮತ್ತೊಂದು ಗುಡಿ
ಮೆರೆದಿಹುದು ಶಿವಲಿಂಗಮಾ ದೇವಾಲಯದೊಳೊಂದು || ೫೬ ||

ಈತನ ಗರ್ದ್ದುಗೆಯ ಮಹತ್ವಂ
ಖ್ಯಾತಮೆನೆ ಮೆರೆದಿಹುದಿಂದಿಗುಂ
ಸಾತಿಶಯಮೆನಲಿದಕೆ ಹೇತುವು ಶಂಕ್ರಪನ ಭಕ್ತಿ ||
ಪೂತಚರಮೂರ್ತಿ ಸದಾಶಿವಂ-
ಗೋತವರ್ ಲಿಂಗದೆ ಬೆರೆವನಕ-
ಮೀತನಾಜ್ಞಾಧಾರಕನಾಗಿ ಬಾಳಿರ್ದನರಿಯೆ || ೫೭ ||

ಜನರೀ ಶಂಭುಲಿಂಗಯೋಗಿಯ
ಘನಲೀಲೆಗಳ ನುತಿಸುತ್ತೆ ಸಲೆ-
ಯನಘಂಗೆ ಸದ್ಭಕ್ತರಾದರ್ ತಾವಾಗಿ ನೆಲೆದು ।
ಅನವರತಂ ನಿಜೇಷ್ಟಸಿದ್ಧಿಯ-
ನನುನಯದೆ ಪಡೆಯುತ್ತೆ ಬಾಳ್ದರ್
ಬಿನದದಿಂದಾನಿನ್ನುಂ ಪೇಳ್ವೆನಾಲಿಪುದೆಲ್ಲರು ॥ ೫೮ ॥

ಗದುಗಿನೋಳ್ ಪಂಚಾಕ್ಷರ ನಗರ-
ಮುದರಲ್ಲಿ ನಿರ್ಮಿತವಾಗಿಹುದು
ಪದಪಂಡೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು ।
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳ್ಪನ್ನೊಂದನೆಯ ಸಂಧಿ ॥ ೫೯ ॥

ಅಂತು

ಸಂಧಿ ಹನ್ನೊಂದಕ್ಕಂ ಪದಗಳು ಅರುನೂರ್‍ಹದಿನೆಂಟಕ್ಕಂ

ಮಂಗಲಂ



# ಹನ್ನೆರಡನೆಯ ಸಂಧಿಯು

ಮಧ್ಯಪಾನ ನಿಷೇದವನರುಪಿ
ಸಧ್ಯದೆ ಬರುವ ಗಡ್ಡೆಬೇನೆಯ
ಚೋದ್ಯಮೆನೆ ಸೂಚಿಸಿ ಮೆರೆದಿಹಂ ಚೆರಮೂರ್ತಿವರನು ॥ ಪಲ್ಲ ॥

ವಿಷಮೆಂಬುದುಂ ತತ್ವ ಪ್ರಸಾದಂ
ವಿಷಮೆಂದರಿದು ಬಿಡಬೇಕೆನುತೆ
ಋಷಿಗಳ್ ಕೆಲರ್ ಪೇಳಿಹರಭವ ಎನಗಿದರ ಸ್ಥಿತಿಯು ।
ದಿಷಣೆಯೊಳಗದು ಪೊಳೆಯದದಕಾ-
ಶಿಷವ ಗೆಯ್ಯೊಲ್ಲದಿರೆ ಭವರುಜ
ಭಿಷಜನೆ ತ್ವತ್ ಪ್ರಸಾದಮೆಂಬುವ ಶ್ರದ್ಧೆಯ ಕೊಡು ಶಿವ ॥ ೧ ॥

ರಂಜಿಸುವ ಗಂಜೀಗಟ್ಟಿಯೊೞ್
ರಂಜನೆಯ ಲೀಲೆಗಳನೆಸಗುತೆ
ಮಂಜುಳ ರೀತಿಯಿಂದೆ ಜನಕೆ ಭವಿಷ್ಯವ ಸೂಚಿಸಿ |
ಮಂಜುಭಾಷಂ ಪೊರೆಯುತಂ ಸಲೆ
ನಂಜುಗೊರಲನ ರೂಪಿಯಾಗಿಹ
ರಂಜಿತ ಶಂಭುಲಿಂಗ ಚರಮೂರ್ತಿಯು ಸುಖಮಿರ್ದನು || ೨ ||

ಒರ್ಮೆ ಸಂಚರಿಸುತೆ ಮಹಾತ್ಮಂ
ಕೂರ್ಮೆಯಿಂ ಬಹುದೇಶಗಳ ಸಲೆ
ಪೇರ್ಮೆಯಂ ನೋಡುತ್ತೆ ನಲೆಯುತೆ ಮರಳಿ ಬರ್ಪಾಗ |
ಧರ್ಮರೂಪಿಗೆ ಬನ್ನೂರ್ ಬಳಿಯ
ಪೊರ್ಮೆಸೆವ ಪಳ್ಳದೆ ಕಾಣುತ್ತೆ
ಶರ್ಮಕಾರಿ ಶರೀಫನಾಗಳ್ ಬಂದು ನಮಿಸಿದನು || ೩ ||

ಆ ಶರೀಫ ಮಹಾತ್ಮನೀತನ-
ನೀಶ ಸಮನೆಂದರಿದು ಗುರುವೆಂ-
ಬಾಶೆಯುವ ತೋರುತ್ತಲಿರ್ದಂ ಪೂರ್ವಕಾಲದೊಳೆ |
ಆಶೆಯಿಂ ವೇದಾಂತ ವಿಷಯುವ
ಪಾಶವಿರಹಿತನಿಂ ತಿಳಿದಿರ್ದ-
ನಾಶಿಸುತೆ ನಮಿಸಿರ್ದನದರಿಂದೀ ಚರಮೂರ್ತಿಯು ೪ ||

ಅತ್ತೀಗೇರಿಯೊೞ್ ಶರೀಫಂ
ಚಿತ್ತಂಗೊಟ್ಟು ಶಿಕ್ಷಕನಾಗಿ
ಸತ್ತಾ ಪೂರ್ವಕಂ ಬಾಲರ್ಗೆ ಪ್ರಥಮ ವಿದ್ಯೆಯನೆ |
ವಿತ್ತಂಗೊಳದೆ ಕಲಿಸುತಿರ್ದಂ
ಚಿತ್ತೋದ್ಭವಾರಿ ಸಮನಹ ಗುರು-
ವತ್ತಲ್ ಪೋಗುತಿರುತಿರ್ದನೀ ಚರಮೂರ್ತಿಯಲ್ಲಿ || ೫ ||

ಮೆರೆವಾವೂರ ಗೌಡರೀತನ
ನೆರೆ ಶಿಷ್ಯರಾಗಿರ್ದ್ದರವರುರು-
ತರ ಭಕ್ತಿಯಿಂ ಮೀರದಲೆ ಚಿರಕಾಲವಿರುತಿರ್ದ್ದಂ ।
ಕರಮಲ್ಲಿ ನಡೆವುದು ಪ್ರವಚನಂ
ಪರಮ ಶರೀಫ ಸಾಹೇಬನದ-
ಕುರೆ ತಪ್ಪಿಸದೆ ಬರುತಿರ್ದ್ದನಧ್ಯಯನಕ್ಕಾಗಿಯುಂ ॥ ೬ ॥

ಆದುದರಿಂದಲೀ ಮಹಾತ್ಮನೊ-
ಳಾದರದ ಗುರುಭಕ್ತಿಯನಿರಿಸಿ
ಮೋದದೆ ನಡೆದುಕೊಳುವನಾ ಶಿಸುನಾಳ ಶರೀಫಂ ।
ಆದಿ ಮಹಾದಾಪುರಂ ಶಿಸುನಾ-
ಳ್ಕೈಯ್ದುದತ್ತೀಗೇರಿಗೊಂದರೆ-
ಯೂದ ಹರದಾರಿಯು ಸನಿಹವಿಹುದಿದಕೆ ಕಾರಣವು ॥ ೭ ॥

ಆಗಳಾ ಚರಮೂರ್ತಿಯು ನೋಡಿ
ಲೋಗರಂ ಕೇಳುವ ತೆರದೊಳಂ-
ಬಾಗಮುಜ್ಞಂ ಕೇಳ್ದನೆಂತೆನಲೆಲವೊ ಶರೀಫನೆ ।
ಈಗಳೆಲ್ಲಿಗೆ ಪೋಗಿರ್ದ್ದೆ ಪೇಳ್
ವೇಗದೊಳೆಲ್ಲಿ ಹೊರಟಿರುವೆಯೈ
ಲಾಗದಿಂ ಪೆಂಡದ ಗಡಿಗೆಯಂ ತಂದಿರುವದೇಕೆ ॥ ೮ ॥

ಚರಮೂರ್ತಿಯೀ ಮಾತಂ ಕೇಳ್ದು
ವರ ಶರೀಫಂ ನುಡಿದನೆಂತೆನೆ
ಗುರುವೆ ತಮ್ಮಂತಾನಾದಡುಂ ಸಂಚಾರಿಯಾಗಿ ।
ನೆರೆ ಪೋಗಿರ್ದ್ದೆ ನಿಚ್ಚಿತಮಗಿರು-
ತಿರೆ ಕೊಳ್ಳಿರುತ್ತಮ ಪೇಯಮಿದು-
ಮೊರೆದಿಂತು ಶಿಷ್ಯನ ಕೈಯಿಂದಲಿಸಿದುಕೊಡುತಿರಲು ॥ ೯ ॥

ಶಿವಯೋಗಿಯುದನುರೆ ನೋಡುತಿರೆ
ತವೆ ಗಡಿಗೆಯುದು ಬರಿದಾಗುತಿರೆ
ನವ ವಿಸ್ಮಯದೊಳಾ ಶರೀಫಂ ಶಿಷ್ಯನ ಕರದೊಳೆ ।
ಜವದೆ ಕೊಡುತಿರೆ ಮೊದಲಿನಂತೆಯೆ
ಪವಣಿಂ ತುಂಬಿ ಶೋಭಿಸುತ್ತಿರೆ
ಸುವಿನಯ:ದಿಂದೆ ಕಂಡು ಭಕ್ತಿಯೊಳಿಂತು ನುತಿಸಿದನು ॥ ೧೦ ॥

ಏನಿದಚ್ಚರಿಯಸದೃಶ ಗುರುವೆ
ಮಾನಿತನೆ ನಿನ್ನಯ ಲೀಲೆಯಿ:ದು
ಮಾನವಗೆ ತಿಳಿಯಲ್ಕಸಕ್ಯಂ ನೀಂ ಶಿವನೆ ದಿಟವು ।
ಮಾನನಿಧಿಯೆ ಇದಂ ಕಂಡೀಗ-
ಳಾನು:ರೆ ಬರ್ದುಂಕಿದೆನಯ್ಯ ಸಲೆ
ನೀನೆ ಕೃಪಾಳುಗಳರಸನರಿಯದೆಲ್ಲರ್ಕೆಡುವರು ॥ ೧೧ ॥

ಎಮ್ಮ ಶ್ರೀಗುರು ಚರಮೂರ್ತಿಯುರೆ-
ಗೊಮ್ಮನೆ ಪೂರ್ತಿಯೆಂಬ ಪದಮಂ
ತಮ್ಮ ಮನದೊಪ್ಪಿಗೆಯೋಳ್ ಶರೀಫರ್ ಪದವ ರಚಿಸಿ ।
ಒಮ್ಮೆ ಸ್ವಲ್ಪಂ ಪಾಡುವನಿತ-
ಕ್ಕೊಮ್ಮೆಗಂ ಬಿಡುವಂತೆ ಬೆದರಿಸಿ
ನೆಮ್ಮಿಗೆಯ ಮಾತಂ ಪೇಳ್ದನಿಂತಾ ಗುರುಮೂರ್ತಿಯು ॥ ೧೨ ॥

ಕೇಳು ಶರೀಫ ನಿನ್ನೀ ನುತಿಯು
ತಾಳದ ತಾಪಮಂ ಮಾಡಿತ್ತೈ
ಮೇಳವಿಸಿ ಹೊನ್ನಿನ ಶೂಲದಿಂದಿರಿವಂತಾಯಿತ್ತೈ ।
ಹಾಳುಮಧ್ಯದ ಸಹವಾಸಮಂ
ಪೇಳಿಸಿಕೊಳದೆ ನೀನೆ ಬಿಟ್ಟೊಡೆ
ಪೇಳಲಿಕ್ಕಸದಳವಾದ ಮುದಮುಹುದದು ದಿಟವು ॥ ೧೩ ॥

ಎಂದೆನುತೆ ಗಂಜೀಗಟ್ಟಿಗವ-
ನಂದು ಬಂದಲ್ಲಿಯೆ ನೆಲಸಿದನ-
ಮಂದ ಮುದದಿಂ ಬಂದಂ ಶರೀಷಂ ಸ್ವಗ್ರಾಮಕೆ |
ಛಂದದಿಂದಾತನ ಶಿಷ್ಯನಿವ-
ನಂದಿನ ಲೀಲೆಯಂ ಕಂಡುಬೆರ-
ಗಂದಳೆದು ನುತಿಸುತ್ತಲಿರ್ದಂ ಜನರ ಸಮ್ಮುಖದೆ || ೧೪ ||

ಇದನು ಕೇಳ್ದವನೋರ್ವನೆಂದಂ
ಸದಮಲನ ಕೊಟ್ಟೂರಬಸವನ
ಪದತೀರ್ಥಮಂ ಕೊಳ್ವಭಕ್ತರ ನೋಡಿ ನಗುತೋರ್ವಂ |
ಪದುಳ್ವ ಭಕ್ತಂ ಸಂಗ್ರಹಿಸಿಟ್ಟ
ಪಡೆದ ಸ್ಥಾವರ ಲಿಂಗೋದಕವ
ಮುದದೆ ಕೊಳ್ಳಲ್ ಭರಣಿಯ ಕೊಂಡು ನೋಡಲಡಂಗಿತು || ೧೫ ||

ಭಯಭಕ್ತಿಯಿಂ ಬಂದು ನಮಿಸುತೆ
ನಯದೆ ಪ್ರಾರ್ಥಿಸುತಾ ಸ್ವಾಮಿಯುರೆ
ಸ್ವಯದ ಪಾದೋದಕವ ಸೇವಿಸಿ ನೋಡಲಾ ಭರಣಿ |
ಲಯಮಾಗಿರ್ದ ತೀರ್ದದೆ ತುಂಬಿ
ಜಯಮೆನಲ್ಕೆಸೆದಿತ್ತೆಂದು ಜನ-
ಚಯದಿಂದೆ ಕೇಳಿರ್ದ ಪುರಾಣಕಥೆಯು ದಿಟಮಾಯ್ತು || ೧೬ ||

ಮತ್ತಮೋರ್ವಂ ನುಡಿದನೆಂತೆನ-
ಲುತ್ತಮ ಬಸವಸುಪುರಾಣದೊಳ್
ಸತ್ತಮನೆ ಕೇಳಿರ್ದೆ ನಾನುಂ ಬಸವೇಶನೊಲಿದು |
ಚಿತ್ತ ಜಾರಿಯ ನೆನೆದು ತನ್ನೊ-
ರತ್ತಣಿಂ ಸಂಗಮಕೆ ಬರ್ಪಾ-
ಗಿತ್ತುದು ದಾಳಿಯುಂ ನದಿಯೆಂದು ಕೇಳಿರ್ದೆನೆಂದು || ೧೭ ||

ಸತ್ಯಮಾಯ್ತೆನಲೋರ್ವಂ ಮತ್ತೆ
ಪ್ರತ್ಯಗಾತ್ಮನ ನೆನೆದು ನುಡಿದಂ
ಸ್ತುತ್ಯನಹ ಕಲಿಕೇತದ್ಬ್ರಹ್ಮಶರಣನತಿಥಿಗಳ |
ನುತ್ಯರಪೇಕ್ಷೆಯಂತೆ ವಿತ್ತಮ-
ನತ್ಯನಾದರದಿಂ ಮಣ್ಣಿನೊಳ
ಮರ್ತ್ಯರಚ್ಚರಿಪಂತೆ ತೋರಿದನೆಂದು ಕೇಳಿರ್ದೆಂ ॥ ೧೮ ॥

ಇದು ಸತ್ಯಮಾಯಿತ್ತೆಂದೆನ-
ಲ್ಕದನಾಲಿಸುತಲೆಲ್ಲರ್ ಮೆಚ್ಚಿ
ಸದಮಲನ ದರ್ಶನವ ಕೊಳ್ಳುತೆ ತಮ್ಮತಮ್ಮಗಳ |
ಪದುಳ್ದಿಷ್ಟಾರ್ಥಮಂ ಪಡೆದಪರ್
ವಿದಿತನವರವರಿಂಚ್ಛೆಯಂ ಸಲಿ-
ಸಿದನಮಲ ಚರಮೂರ್ತಿಯೆಲ್ಲವಸರಿದು ಮೊದಮೊದಲೆ ॥ ೧೯ ॥

ಮತ್ತೊಂದು ಲೀಲೆಯನೊರೆವೆನಾಂ
ಚಿತ್ತಂಗೊಡುತ ಲಾಲಿಪುದೊಲೆದು
ಸುತ್ತಾಡುತಂ ಬೆಂಡೀಗೇರಿಯವರ ಮನೆಗೊರ್ಮೆ |
ಕುತ್ತಂ ಬರುವದೈ ಪ್ಲೇಗಮೆ-
ಚ್ಚೊತ್ತಿರ್ಪುದದು ಗಡ್ಡೆಯಬೇನೆ
ಪಿತ್ತಜ್ವರವ ತೋರ್ಪುದಂದುರಿ ಕೂಗುತ್ತೈದಿದನು ॥ ೨೦ ॥

ಪಿರಿಯನಾ ಮನೆಯ ಯಜಮಾನ
ಗುರುಪಾದಪ್ಪನೆಂಬುವಾತಂ
ಸರಸರನೆಯೊಳಗಿಂದೆ ಬಂದವನಂ ಸತ್ಕರಿಸಿದಂ |
ಚರಮೂರ್ತಿಯಾತನ ಕಂಡಿಂತು,
ಕರೆದು ಕೇಳ್ದಂ ಶಿಗ್ಗಾವಿಪುರ-
ದಡೆಸು[illegible] ನೀಂ ಬಪ್ಪುದೇನೆಂಬಾಗಳಾತನ ॥ ೨೧ ॥

ಬರುವಡಾಂ ಕೊಳ್ಳುವ ಸಾಮಗ್ರಿ
ಪರಿಕರವ ನೀಂ ಕೊಳ್ಳಬೇಹುದು
ಪೊರಡುವದಂತಿರಲ್ಕೆನ್ನೊಡನೆ ಗುರುವಿಂತೆನುತಿರೆ |
ಗುರುಪಾದಪ್ಪನದಕೊಪ್ಪುತಿರೆ
ನೆರೆ ತಪ್ಪಿದೊಡೆ ನಿನ್ನ ವಂಶಂ
ಕರವಿೀ ರುಜಕ್ಕೆ ಮೊದಲು ತುತ್ತಾಗುವದೆಂದು ಯೋಗಿ || ೨೨ ||

ನುಡಿದೊಡುಂ ಗುರುಪಾದಪ್ಪನವ-
ನೊಡನೆ ತೆರಳ್ದಂ ಪೋಗುವಾಗಳ್
ಮೃಡರೂಪಿ ಚರಮೂರ್ತಿ ರೋಗದ ಸುದ್ಧಿಯ ಸಾರುತೆ |
ಬಿಡದೆ ಜನರಿಂ ಬೈಸಿ ಕೊಳ್ಳುತೆ
ತಡೆಯದದನುರೆ ಸತ್ಯಗೊಳಿಸ-
ಲ್ಕಡಿಯಿಟ್ಟನುರೆ ನಿಶ್ಚಯಿಸುತ್ತೆ ಸಿಗ್ಗಾವಿಪುರಕೆ || ೨೩ ||

ಅಂದೆಯಾ ಶಿಗ್ಗಾವಿಯ ಸಂತೆ-
ಯಂದದಿಂದಲ್ಲಿಗೆ ಚರಮೂರ್ತಿ
ಬಂದುಪೇಟೆಯೊಳುರೆ ಸುತ್ತಾಡಿ ಕಡೆಗುರು ಲೀಲೆಯೋಳ್ |
ಪೊಂದಿದಂ ಮೃತಮತ್ಸ್ಯದಂಗಡಿ-
ಗಿಂದುಧರ ಸಮನೀಕ್ಷಿಸಿ ಭರದೆ
ನಿಂದು ವ್ಯಾಪಾರವ ಮಾಡಿದಂ ಚೀಲಮೀನಗಳ || ೨೪ ||

ಗುರುಪಾದಪ್ಪನದನೀಕ್ಷಿಸುತೆ
ಪೊರಿಸುವಂ ತನಗಿವನೆಂದರಿದು
ಭರದೆ ಬಂದಂ ತಪ್ಪಿಸಿಕೊಂಡು ತನ್ನೂರಿಗಿವನು |
ಅರಿಯದವನಂತಾ ಜ್ಞಾನಿಯಿ-
ರ್ದ್ದರು ಜನರ್ ಬೆರಗಾಗುವಂದದೆ
ನೆರೆ ಕೌಪದಿಂ ರೌಪ್ಯಕಂಗಳ ತೆಗೆದಿತ್ತನವಗೆ || ೨೫ ||

ಅಚ್ಚರಿಯಿಂದಲೀಕ್ಷಿಸುತಿರಲ್
ತಚ್ಚರಮೂರ್ತಿ ಪೊರಡುತಿರಲ್ಕೆ
ಬಿಚ್ಚದಂದದೆ ಮೀನದ ಚೀಲವದು ಪೊರಟೆತಾಗ ।
ಸಚ್ಚಿದಾತ್ಮನ ಲೀಲೆಯ ಕಾಣು-
ತಚ್ಚರಿಸುತ್ತಲೆಲ್ಲ ಲೋಗರ್
ಸಚ್ಚರಿತ್ರನ ಬೆಂಬತ್ತಿದರ್ ಸರ್ವವ ನೋಡಲು ॥ ೨೬ ॥

ಗಂಜೀಗಟ್ಟಿಯೂರ ಮಧ್ಯದೊ-
ಳಂಜುತ್ತಲೆಲ್ಲರ್ ದೂರಮಿರೆ-
ಮಂಜು ಧ್ವನಿಯೊಳಿಂತೆಂದನಾ ಶಂಭುಲಿಂಗಾರ್ಯಂ ।
ನಂಜುಂಡನಾ ಪ್ರೇರಣೆಯಿಂದೆ
ಸಂಜಾತಮಾಗುವದು ರೋಗಮು-
ದಾಂ ಜಾಣತನದಿಂ ತಿಳಿಸುವೇಂ ರೋಗದ ಸ್ಥಿತಿಯನು ॥ ೨೭ ॥

ಪ್ಲೇಗವೆಂಬುವ ಪೆಸರಿಂದಕೆ ನೆರೆ
ರೋಗಮಿಲಿಗಳಿಗಿದು ಬರ್ಪುದೀ
ಲೋಗರಿಗನಂತರದೊಳೈದುವದವುಗಳ್ ಮೊದಲಿಗೆ ।
ಸಾಗುವವು ಮೃತ್ಯುವಿನ ದವಡೆಗೆ
ಪೋಗಬೇಕನಿತಕೆ ಬಿಟ್ಟೂರ
ಪೋಗದಿರ್ದೊಡೆ ನೀವು ಸಾವುದು ನಿಶ್ಚಿತವರಿಯಿ:ರಿ ॥ ೨೮ ॥

ಗಡ್ಡೆಗಳಿಂತು ಜನಿಪವು ಮೊದಲು
ದಡ್ಡತನಮಂ ಬಿಟ್ಟು ನೋಡಿರಿ
ಮಡ್ಡತನಮಂ ಬಿಡಿಸಲೋಸುಗ ಮಾಳ್ಪೆನೀ ಕೃತಿಯ ।
ಒಡ್ಡಿದ ವಾಸನೆಯನರಿವುದೆನು-
ತೊಡ್ಡಿದಂ ಕರಮಂ ದೀವಿಗೆಯ
ಕಡ್ಡಿಪೆಟ್ಟಗೆಯಂ ಬೇಡಿಸಿದುಃಕೊಳ್ಳಲ್ ಮಹಿಮನು ॥ ೨೯ ॥

ದೊರೆದ ಕಡ್ಡೀ ಪೆಟ್ಟಿಗೆಯಿಂದೆ
ನೆರೆ ಕಡ್ಡಿಯಂ ತೆಗೆದುಕೊಳ್ಳುತ್ತೆ
ಕೆರೆದಾ ಮೀನರಾಶಿಯು ಮೇಲೆ ಚಲ್ಲಲ್ಕೊಕ್ಕೆ ಗಂ |
ಉರೆ ಬೆಂಕಿ ಪತ್ತಿದುದು ಕ್ಷಣದೊಳ್
ನರರಚ್ಚರಿಪವೊಲ್ ಮತ್ಸ್ಯಗಳ್
ಭರದೆ ಸುಡುತಿಹವೊಂದಕ್ಕೊಂದು ಜಿಗಿದಾಡುತಿಹವು || ೩೦ ||

ಕೃತಿಯಿದುರೆ ತ್ರೈಮಾರ್ಗ್ಗ ಕೂಟದೆ
ಚ್ಯುತಿಯಿರದೆ ನಡೆದತ್ತೇವೇಳ್ವೆ-
ನತಿಶಯದ ದುರ್ವ್ವಾಸನೆಯರಿದು ಜನರೋಡುತಿಹರು |
ಮಿತಿಯಿಲ್ಲದಲೆ ಚೀರಿ ರೋಗದ
ಗತಿಯ ತೋರುತೆ ಕರೆದಾ ಜನಕೆ
ಮತಿಗೆ ಬಿಂಬಿಸುವಂತೆ ಪೇಳ್ದಂ ಗಡ್ಡೆ ಜನಿಪುದನು || ೩೧ ||

ಊರ ಬಿಡಬೇಕಾಗುವದು ಸ-
ರ್ವ್ವರವೆ ಬಿಡಿಸುವದು ಬಿಡದಿರಲ್
ಕ್ರೂರ ರೋಗವಿದೆಚ್ಚರಿಕೆಯಂದಲೆದು ಮನೆ ಮನೆಗೆ |
ಸಾರುತೆತ್ತಲೊ ಪೋದನಾ ಚರ-
ವಾರಧೀಶಂ ಜನರದನರಿದು
ಮೀರದೀ ಕೃತಿಯಂ ನಿಂದಿಸುತೆ ಪಾಳಾಗಲೆಂದು || ೩೨ ||

ಮೀರಿ ಸಾಪಳಿಸುತ್ತಿರಲ್ಕವ-
ನಾರುಮರಿಯದ ತೆರದೆ ಬಂದಾ
ಊರೊಳಗಲಿಯುತಿರ್ದಂ ನುಡಿಯುತಾ ಜನರ ನುಡಿಯ |
ಸಾರಿತಾ ರೋಗಂ ಕೆಲದಿನಕ-
ಪಾರ ಹಾನಿಯವಂಗಾದ್ಯಖಿಲ
ಸಾರ ಸುಪ್ರಾಂತಂಗಳೆ ಗ್ರೈಯ್ಯಿ ಲ್ಲಿಗ್ರೈಧಿಹುದು || ೩೩ ||

ಇಲಿಗಳೆಲ್ಲೆಡೆಯಲ್ಲಿ ಬೀಳ್ದುರೆ
ಚಲಿಸದೆ ಸಾಯುತಿರ್ದುದರಿಂದೆ
ಕಲಿತ ದುರ್ವಾಸನೆಯು ಪೆರ್ಚುತೆ ಜನರ ಮೈಯೊಳಗೆ |
ಮಲದಗಡ್ಡೆಗಳೇಳ್ದು ಹಾಯನು-
ತಲೆ ಸಾಯುತಿರ್ದರ್ ಸರ್ಕಾರ-
ದಲಘು ಯತ್ನದಿನುಳಿದವರ್ ಮನೆ ಬಿಡುವನಿತರಲ್ಲಿ || ೩೪ ||

ಸಾಯುತಿರ್ದರ್ ಬೀದಿಯೊಳೆ ಕೆಲ-
ರಾಯಸದಿಂದೆ ಗುಡಿಸಲಲ್ಲಿಯೆ
ಸಾಯುತಿರ್ದಪರದನೇವೇಳ್ವೆನದ್ಭುತ ರೀತಿಯ |
ಸಾಯದುಳಿದವರೂರ್ಗೆ ಬರುತಿರೆ
ಸ್ವಾಯತಾಸ್ತಿಯು ಕಳವಾಗಿರ್ದು-
ದಾಯಿತಿಂತೀ ಹಾನಿ ವರ್ಣಿಸಲಸದಳಮಾಗಿಯೆ || ೩೫ ||

ಆಗ ನೆನೆಸಿದರಿವನ ಮಹಿಮೆಯ
ಸಾಗಿ ಪೇಳ್ದನುತಾಪವ ಪಟ್ಟು
ರಾಗದಿಂ ಚರಮೂರ್ತಿಗೆ ನಮಿಸಿ ಬೇಡುತೆ ಶಾಂತಿಯ |
ಭೋಗ ಭಾಗ್ಯವ ಪಡೆದರ್ ಸರ್ವ-
ರಾ ಗುರುಪಾದಪನ ವಂಶಮೀ
ರೋಗಕುರೆ ತುತ್ತಾಯ್ತು ಮಹಿಮರ ನುಡಿಯು ಸಟೆಯಹುದೆ || ೩೬ ||

ಕಪಿಲ ಮುನಿವರ ಕೋಪದಿಂದಲೆ
ಕ್ಷಪಿತಮಾಯಿತು ಸಗರ ವಂಶಂ
ಕೃಪೆಯು ದೂರ್ವಾಸರದು ತಪ್ಪಲ್ ಯದುಕುಲಮಳಿಯಿತು ||
ತಪಿಸಿಯಹ ಜಮದಗ್ನಿ ಶಾಪದೆ
ಲುಪಿತಮಾದದು ತತ್ಸುತಾನ್ವಯ-
ಮಪರಿಹಾರ್ಯಂ ಮಹನೀಯ ಕೋಪಮಿದೆಂದರಖಿಲರ್ || ೩೭ ||

ಬರಗಾಲದ ಭವಿಷ್ಯವ ಜನಕೆ
ನೆರೆ ಸೂಚಿಸಲ್ ಬೇವಿನ ಸೊಪ್ಪಿ
ನುರೆ ಸಾರನೆಸಗಿಸುತೆಲ್ಲರಿಗೆ ರುಚಿ ಗೈದುಣಿಸಿದ ।
ಹರನ ಹಳ್ಳಿಯ ಶಿವಲಿಂಗೇಶ-
ನುರು ಲೀಲೆಯಂ ಕೇಳುತ್ತಲಾ-
ವುರೆ ಸಟೆಯೆಂದ ತಿಳಿದಿರ್ದ್ದ ವೀಗಳದು ದಿಟವಾಯ್ತು ॥ ೩೮ ॥

ಎಂದು ನುತಿಸುವ ಜನರನೀಕ್ಷಿಸು-
ತಂದದಿಂ ತನ್ನಯ ಗುರುವರ್ಯ-
ನಿಂದುಧರ ಸಮನುರೇಕೊಂಡಿಯ ಸ್ವಾಮಿಯ ಮಹಿಮೆಯ ।
ಅಂದು ಪೇಳುತೆ ಭಕ್ತಿಯ ಬೆಳಸಿ
ಛಂದದಿಂ ನುತಿಪಂತೆ ಮಾಡುತೆ
ಕಂದು ಗೊರಲನ ಸಮನೆಸೆದಿಹಂ ಶಂಭುಲಿಂಗಾಖ್ಯಂ ॥ ೩೯ ॥

ಗದುಗಿನೊಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು ।
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳ್ ಪನ್ನೆರಡನೆಯ ಸಂಧಿ ॥ ೪೦ ॥

ಅಂತು
ಸಂಧಿ ಹನ್ನೆರಡಕ್ಕಂ ಪದಗಳು ಆರುನೂರ್ಪ್ಪಾಐವತ್ತೆಂಟಕ್ಕಂ
ಮಂಗಲಂ

ಇಲಿಗಳೆಲ್ಲೆಡೆಯಲ್ಲಿ ಬೀಳ್ವುದರೆ
ಚಲಿಸದೆ ಸಾಯುತಿರ್ದುದರಿಂದೆ
ಕಲಿತ ದುರ್ವ್ಯಾಸನೆಯು ಪೆರ್ಚುತೆ ಜನರ ಮೈಯೊಳಗೆ ।
ಮಲದಗಡ್ಡೆಗಳೇಳ್ದು ಹಾಯನು-
ತಲೆ ಸಾಯುತಿರ್ದರ್ ಸರ್ಕಾರ-
ದಲಘು ಯತ್ನದಿನುಳಿದವರ್ ಮನೆ ಬಿಡುವನಿತರಲ್ಲಿ ॥ ೩೪ ॥

ಸಾಯುತಿರ್ದರ್ ಬೀದಿಯೊಳೆ ಕೆಲ-
ರಾಯಸದಿಂದೆ ಗುಡಿಸಲಲ್ಲಿಯೆ
ಸಾಯುತಿರ್ದಪರದನೇವೇಳ್ವೆನದ್ಭುತ ರೀತಿಯ ।
ಸಾಯದುಳಿದವರೂರ್ಗೆ ಬರುತಿರೆ
ಸ್ವಾಯತಾಸ್ತಿಯು ಕಳವಾಗಿರ್ದು-
ದಾಯಿತಿಂತೀ ಹಾನಿ ವರ್ಣಿಸಲಸದಳವಾಗಿಯೆ ॥ ೩೫ ॥

ಆಗ ನೆನೆಸಿದರಿವನ ಮಹಿಮೆಯು
ಸಾಗಿ ಪೇಳ್ದನುತಾಪವ ಪಟ್ಟು
ರಾಗದಿಂ ಚರಮೂರ್ತಿಗೆ ನಮಿಸಿ ಬೇಡುತೆ ಶಾಂತಿಯ ।
ಭೋಗ ಭಾಗ್ಯವ ಪಡೆದರ್ ಸರ್ವ-
ರಾ ಗುರುಪಾದಪನ ವಂಶಮೀ
ರೋಗಕುರೆ ತುತ್ತಾಯ್ತು ಮಹಿಮರ ನುಡಿಯು ಸಟೆಯಹುದೆ ॥ ೩೬ ॥

ಕಪಿಲ ಮುನಿವರ ಕೋಪದಿಂದಲೆ
ಕ್ಷಪಿತಮಾಯಿತು ಸಗರ ವಂಶಂ
ಕೃಪೆಯು ದೂರ್ವಾಸರದು ತಪ್ಪಲ್ ಯದುಕುಲಮಳಿಯಿತು ॥
ತಪಿಸಿಯಹ ಜಮದಗ್ನಿ ಶಾಪದೆ
ಲುಪಿತಮಾದದು ತತ್ಸುತಾನ್ವಯ-
ಮಪರಿಹಾರ್ಯಂ ಮಹನೀಯ ಕೋಪಮಿದೆಂದರಖಿಲರ್ ॥ ೩೭ ॥

ಬರಗಾಲದ ಭವಿಷ್ಯವ ಜನಕೆ
ನೆರೆ ಸೂಚಿಸಲ್ ಬೇವಿನ ಸೊಪ್ಪಿ
ನುರೆ ಸಾರನೆಸಗಿಸುತೆಲ್ಲರಿಗೆ ರುಚಿ ಗೈದುಣಿಸಿದ |
ಹರನ ಹಳ್ಳಿಯ ಶಿವಲಿಂಗೇಶ-
ನುರು ಲೀಲೆಯಂ ಕೇಳುತ್ತಲಾ-
ವುರೆ ಸಟೆಯೆಂದ ತಿಳಿದಿರ್ದ್ದ ವೀಗಳದು ದಿಟವಾಯ್ತು || ೩೮ ||

ಎಂದು ನುತಿಸುವ ಜನರನೀಕ್ಷಿಸು-
ತಂದದಿಂ ತನ್ನಯ ಗುರುವರ್ಯ-
ನಿಂದುಧರ ಸಮನುರೇಕೊಂಡಿಯ ಸ್ವಾಮಿಯ ಮಹಿಮೆಯ |
ಅಂದು ಪೇಳುತೆ ಭಕ್ತಿಯ ಬೆಳಸಿ
ಛಂದದಿಂ ನುತಿಪಂತೆ ಮಾಡುತೆ
ಕಂದು ಗೊರಲನ ಸಮನೆಸೆದಿಹಂ ಶಂಭುಲಿಂಗಾಖ್ಯಂ || ೩೯ ||

ಗದುಗಿನೋಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೋಳ್ ಪನ್ನೆರಡನೆಯ ಸಂಧಿ || ೪೦ ||

ಅಂತು
ಸಂಧಿ ಹನ್ನೆರಡಕ್ಕಂ ಪದಗಳು ಆರುನೂರ್ಪ್ಪಾಐವತ್ತೆಂಟಕ್ಕಂ
ಮಂಗಲಂ



# ಹದಿಮೂರನೆಯ ಸಂಧಿಯು

ಮೂಮುಲೇದಾರರಿಗೆ ಮಹಿಮೆಯ
ತಾಮುಸವ ಬಿಡಿಸಿದಂ ತೋರುತ-
ಲಾ ಮಹಾ ಚರಮೂರ್ತಿಗೆ ಮರಣ ಸೂಚನೆ ಗೈದನು ॥ ಪಲ್ಲ ॥

ಪರಮ ಪರತರ ನಿಗಮ ಗೋಚರ
ನಿರಘ ನಿರುಪಮ ಸನ್ನುತ ಮಹಿಮ
ವರಗುಣ ಪೂರ್ಣ ಭುಜಗಭೂಷಣ ಧೃತಭಸಿತಾಂಗ ಭೋ ।
ಸುರುಚಿರಾಭ ನಿರರ್ಗಲ ಶೋಭ
ಸುರನುತ ಚರಿತ ಧಿಕ್ಕೃತ ದುರಿತ
ಪುರಹರ ಸಲಹು ನಿನ್ನಯ ನೆನಹು ನಿರುತಮಿರಲೆನಗೆ ॥ ೧ ॥

ಸುಗುಣಿಗಳರಸನಗುಣರಬೆರಸ-
ದೊಗುಮಿಗೆಯೊಳಿರುತಿರ್ದನಾತಂ
ಕುಗುಣಿಗಳ ಜಸವುಡಗುತಿರ್ದತ್ತಿವನ ದರ್ಶನದೆ |
ಬಗೆದಗಣಿತ ಮಹಾಂತರಹುದೆನ-
ಲೊಗೆದಭವನಿಂ ಮಿಗಿಲು ಮಹಿಮೆಗ-
ಳಗಿಸುತಘಗಳಮಿಗೆ ಪೇಳ್ವೆನಾಲಿಪುದು ಭಕ್ತರವಂ || ೨ ||

ಒಂದು ದಿನದೆ ಚರಂತೆಪ್ಪನೊಲ-
ವಿಂದೆ ಗಂಜೀಗಟ್ಟಿಯಿಂ ಸ್ವ-
ಚ್ಛಂದದಿಂ ತೆರಳುತಲಿರ್ದನದನೇನು ಬಣ್ಣಿಪೆನು |
ಅಂದದಿಂ ಕೈಗಳಂ ಬೀಸುತೆ
ನಿಂದು ಕಾಲ್ಗಳನಗಲಿಸುತೆ ಬಗೆ-
ದಂದು ಕುಣಿಯುತೆ ಮೈಯಲಗಿಸುತೆ ನಡೆದಿರ್ದನವನು || ೩ ||

ಒರ್ಮೆ ಕೂಡ್ರುವನೊರ್ಮೆ ಮಲಗುವ-
ನೊರ್ಮೆಯುರುಳುವನೊರ್ಮೆಯೇಳುವ-
ನೊರ್ಮೆ ತಪ್ಪೆಜ್ಜೆಯ ಹಾಕುವಂ ಬಾಲನಂದದಲಿ |
ಒರ್ಮೆಯಂಬೇಗಾಲೋಳ್ ನಡೆವ-
ನೊರ್ಮೆ ಮಸ್ತಕದಿಂದೆ ಜಿಗಿಯುವ-
ನೊರ್ಮೆ ಲಾಗವ ಹೊಡೆಯುವಂ ಸಾಗಿರ್ಪನಲ್ಲಿಂತು || ೪ ||

ಇವನು ಶಿಗ್ಗಾವಿಯ ದಾರಿಯಂ
ತವೆ ಪಿಡಿದು ಕ್ರಮಿಸುತ್ತಿಹಂ ನೆರೆ
ನವಪಥಿಕರೀಕ್ಷಿಸುತಲಿವಂಗೆ ಹುಚ್ಚನೆನುತಿಹರು |
ಅವಿನೀತರಿವನನಲಕ್ಷಿಸುತೆ
ಸುವಿನೀತರಿವನಂ ವಂದಿಸುತೆ
ಕವಿದಜ್ಞಾನಮುಂ ಬಿಡುತಲಿರ್ದರ್ ಕೆಲರೀಕ್ಷಿಸಿ || ೫ ||

ಇಂತು ಚರಮೂರ್ತಿಯು ಮಾರ್ಗಮಂ
ಸಂತಸದೆ ಕ್ರಮಿಸುತ್ತಿರುವಾಗ-
ಳಂತದೇ ದಾರಿಯೊಳ್ ತಹಸಿಲ್ದಾರಂ ಸ್ವಮನದ |
ಶಾಂತಿಗಾಗಿ ದಮಣಿಗಾಡಿಯೊಳ್
ಮುಂತೆ ಕುಳ್ಳಿರ್ದ್ದರೆ ಠೀವಿಯಿಂ
ಕಂತುವಿನಪಾಂಗಿಂ ಸಾಗಿಹಂ ತತ್‌ಪಥದಲ್ಲಿಯೆ || ೬ ||

ಈ ಮಹಾತ್ಮಂ ಬಂದು ಕುಳಿತಂ
ನೇಮಮಂ ತತ್‌ಸೇವಕನುಳಿದು
ಸಾಮವಿಧಿಯಂ ಮರೆದು ಬಾರ್ಕೋಲಿಂದೊಮ್ಮೆ ಬಡೆದು |
ಕೋಮಲ ಮನನನೆಳೆದೊಗೆದವಂ
ತಾಮಸಂ ಗಾಡಿಯ ಸಾಗಿಸಿದ-
ನಾ ಮಹಿತಾಧಿಕಾರಿಗೆ ಹುಚ್ಚನೆಂದು ಪೇಳುತ್ತೆ || ೭ ||

ಭರದೆ ಗಾಡಿಯು ಶಿಗ್ಗಾವಿಗುರೆ
ಬರುವನಿತರೊಳ್ ತಹಸಿಲ್ದಾರ-
ನುರು ಸತಿಯು ಹೊಟ್ಟೆಯ ಬೇನೆಯಿಂದುರುಳಾಡುವದನೆ |
ಚರನೋರ್ವನಲ್ಲಿಗೆ ಬಂದೊರೆಯೆ
ತ್ವರದಿಂದಲಿಳಿಯುತ್ತೆ ನಿಜ ಮಂ-
ದಿರಕೈದುತೆ ವಿಚಾರಿಸಿದನಾ ಮಾಮಲೇದಾರಂ || ೮ ||

ಸತಿಯೊರೆದಳಿಂತಾಗ ತನ್ನಯ
ಪತಿಯ ಮೊಗಮಂ ನೋಡಿ ದುಃಖಿಸು-
ತತಿಶಯದೆ ಬಾರ್ಕೋಲಿನಾರೊ ಮಿಗೆ ಪೊಡೆದ ಕೃತಿಯ |
ಮಿತಿ ತಪ್ಪಿ ಹೊರಳಾಡಹತ್ತಿದ-
ಳತಿಯಾಗಿ ಹೊಟ್ಟೆಯು ನೋವುದೆ-
ನುತೆ ಬಿಕ್ಕಲಾರಂಭಿಸಿದಳಾ ಕ್ಷಣದಲ್ಲಿ ಸಾಧ್ವಿ || ೯ ||

ಕರೆಸಿದಂ ವೈದ್ಯರ ಬಳಗಮಂ
ಬರಿಸಿದಂ ಮಾಂತ್ರಿಕರ ಗಣಮಂ
ತರಿಸಿದಂ ಶಾಂತ್ಯುಪಕರಣಮಂ ತಹಸಿಲ್ದಾರನು |
ಕರಿಸಿದಂ ತಿಳಿದುಪಚಾರಮಂ
ಚರಿಸಿದಂ ದೇವರುರೆ ವ್ರತಮಂ
ಪರಿಸಿದಂ ಕಣ್ಣೀರನದಮಂ ವ್ಯರ್ಥಮಾಯ್ತೆಲ್ಲಂ ‖ ೧೦ ‖

ಈ ವಿಷಯಮೂರೋಳ್ ಕ್ಷಣಾರ್ಧದೆ
ಳೋವಿ ಪರ್ಬಿದುದಖಿಲ ಜನರೊಳ-
ಗಾ ವಿವಿದ ರೀತಿಯೊಳೆ ಮರಗುತೆ ಮಾತನಾಡುತೆ |
ತೀವಿದ ದುಃಖ ಜಲ ನಯನಗಳ
ತಾವರಿಸಿಕೊಳುತಂ ನಿಂದಿಹರ್
ಕೋವಿದಂ ಬಂದಂ ತಿಳಿದಲ್ಲಿಗೋರ್ವಂ ಧಾವಿಸಿ ‖ ೧೧ ‖

ಜನರಂ ಪ್ರಶ್ನಿಸಿದನಿಂತವ-
ನನಘರೆ ಯೇನಿದ್ಪೈ ಗರ್ದಲಂ
ಜನತೆಯೊಳಗೋರ್ವನದನಾಲಿಸುತೆಲ್ಲಮಂ ಪೇಳ್ದಂ |
ಮನದೆ ಮರಗುತಲಿಂತೊರೆದನಾ
ವಿನುತನಹ ಚರಮೂರ್ತಿಯಂ ಹು-
ಚ್ಚನಿವನೆಂದವಗುರೆ ಬಡೆದ ವಿಷಯುವ ಕೇಳುತಿದನೆ ‖ ೧೨ ‖

ತಹಸಿಲ್ದಾರನಾ ಕ್ಷಣದಲ್ಲಿ
ಗಹನ ದುಃಖದೆ ಹೊರಗೈದುತ್ತೆ
ಸಹನೆಯಿಂ ಶೋಧಿಸುತವನ ಮನೆಯೊಳಗೆ ಕರೆತಂದು |
ಮಹಿತ ಗುರುವಿನ ಚರಿತವನರಿದು
ಕುಹಕ ಮತಿಯಂ ಮರೆದು ಶೋಧಿಸಿ-
ಯಹುದೆನಲ್ ಸುಜನರ್ ಚರತೆಂಪ್ಪನ ಕಂಡೆರಗಿದಂ ‖ ೧೩ ‖

ಎರೆಗಿ ನಿಜಪದವಂ ಪಿಡಿದಳುವ
ಸರಕಾರದಧಿಕಾರಿಯು ಕಂಡು
ಕರುಣೆಯಿಂ ಪಿಡಿದೆತ್ತಿ ಭಸ್ಮವನಿತ್ತು ಪರಸುತ್ತೆ |
ನೆರೆಪ್ರಾಣಿಯೊಳ್‌ದಯೆಯಿರಲಿ ತವ
ತರುಣಿ ಬದುಕುವಳೀ ಭಸಿತವಂ
ನೆರೆಜಲಕೆ ಮುಟ್ಟಿಸಿ ಕುಡಿಸೆಂದು ಪೇಳ್ದನಾ ಗುರುವು || ೧೪ ||

ಮಾಮಲೇದಾರಂ ತತ್‌ಕ್ಷಣದೆ
ಸೋಮನವತಾರಿಗೆ ನಮಿಸುತ್ತೆ
ಕೋಮಲ ಚಿತ್ತನಾಗುತೆ ಧರ್ಮಶಾಲೆಯಿಂ ಮನೆಗೆ |
ಕಾಮಹರನಂ ನೆನೆಯುತೆ ಬಂದು
ಪ್ರೇಮದಿಂ ಜಲದೊಳ್ ಬಸ್ಮವಂ
ನೇಮದಿಂ ಮುಟ್ಟಿಸುತೆ ಕುಡಿಸಿದನವಳ್ ಬದುಕಿದಳು || ೧೫ ||

ಆಗಳ್ ಹಸನ್ಮುಖಿಯಾಗಿ ನಿಜ
ರಾಗಾತಿಶಯದಿಂ ಗುರುನುತಿಯ
ಲೋಗರ್ ಬೆರಗುಗೊಳ್ಳುವ ತೆರದೆ ಗೆಯ್ಯುತೆ ಭಕ್ತಿಯೊಳ್ |
ಪೋಗುತ್ತಲಾ ತನ್ನ ಪತಿಯೊಡ-
ನಾಗರ್ಭ ಶಿರಿವಂತಿಕೆಯು ತನ-
ಗಾಗಿರ್ದಡುಂ ಮರೆದು ತದ್‌ಗುರುವಿಂಗೆ ನಮಿಸಿದಳು || ೧೬ ||

ಆಶಿಷವ ಪಡೆಯುತ್ತಲಾ ಸತಿ-
ಯಾಶಿಸಿದ ಸಂಪದವ ಪಡೆಯುತ-
ಲಾಶೆಯಲ್ಲವ ಗುರುವಿಗರ್ಪಿಸಿ ಪತಿಯೊಡನೆ ವ್ಯಥೆಯು |
ಲೇಶಮನಾದಡುಂ ಮರೆಯುದವ-
ಳೀಶನೆಂದರಿಯುತ್ತೆ ಗುರುವಂ
ನಾಶವಿಲ್ಲದ ಶಾಂತಿಯಂ ಪಡೆದಿರ್ದಳಾ ಲಲನೆ || ೧೭ ||

ತಹಸಿಲ್ದಾರನಾದಡುಂ ಸ-
ನ್ಮಹಿತರೊಳ್ ಭಕ್ತಿಯ ವಹಿಸುತ್ತೆ
ಸಹಜ ವಿನಯವ ತಾಳಿ ಸಜ್ಜನರೊಡನೆ ಸುಖಿಯಾಗಿ|
ಗಹನ ದುಃಖವ ಮರೆದು ಕುಜನರೊ-
ಳಿಹ ದುರ್ಗುಣವ ಬಿಡಿಸುತವರೊಡ-
ನಿಹನಧಿಕಾರದುರೆ ದುಃರುಪಯೋಗವ ಮಾಡಿಕೊಳದೆ || ೧೮ ||

ಇದನರಿದವರ್ ಮಾತನಾಡಿದ-
ರದನೊರೆವೆನೀತನ ಸಮರಿಲ್ಲ
ಪದಪಿಂದರಿದನೆಂತಿವಂ ತಹಸಿಲ್ದಾರನಿಶವಂ |
ಒದಗುವಂತತಿ ವಿಸ್ಮಯಂ ಜನ-
ಕೊದವಿಸಿದನೀ ಲೀಲೆಯನರಿಯೆ
ಪದೆದೀ ಧರ್ಮಶಾಲೆಗೆ ಬಂದು ಮೆರೆದುದುರೆ ಚೋದ್ಯಂ || ೧೯ ||

ಜನರೋರ್ವ್ವಂ ನುಡಿದನೆಂತೆನೆ
ಘನಮಹಿಮ ಬಿದರೀ ಕುಮಾರೇ-
ಶನ ದೃಶ್ಯನಾಗಿಯೆ ಸತೀಪತಿಗಳಿಗೆ ಬಡೆದವರ |
ಬಿನದಮುಂ ಕೆಡಿಸುತ್ತೆ ನಿಜಮತ-
ದನಘಂ ಶುದ್ಧಿಯುಂ ಕಾಯ್ದು ಕೊಂ-
ಡನೆನಿಪ್ಪ ಚರಿತವ ಪುರಾಣದೆ ಕೇಳಿರ್ದ್ದಿನದುವೆ || ೨೦ ||

ಈ ಲೀಲೆಯಿಂ ದಿಟವಾದುದೆನೆ
ಕಾಲಾರಿ ಭಕ್ತಂ ಮತ್ತೋರ್ವ-
ನೋಲಾಡಿಸುತೆ ಜನರನಿಂತುರೆ ಪೇಳ್ದಂ ಸುಮತಿಯು |
ಫಾಲಾಕ್ಷಭಜನ ಪರ ಚವನನ
ಶೀಲಾತ್ಮನ ತಪೋ ಭಂಗದಿಂ
ಕಾಲಪ್ರಳಯ ಮಾರಾಜ್ಯ ಕೊದವಿತ್ತೆಂದು ಕೇಳಿ || ೨೧ ||

ನಗುತಿರ್ದಿನಾನೀ ಲೀಲೆಯಿಂ
ಮಿಗೆತಾಪವಮಾದುದು ದಿಟವೆನಿಸು-
ತೊಗುವಿುಗೆಯೊಳದನಾಲಿಸುತೆ ಮತ್ತೋರ್ವನಿಂತೆಂದಂ |
ಸುಗುಣಿಗಳೆ ಕೇಳಿರಿ ದಶರಥಂ
ನಿಗಮವಿದ ಮುನಿಪುತ್ರ ಶಾಪದಿ-
ನಗಲಿದ ಪುತ್ರರಂ ನೆನೆಯುತ್ತೆ ಸತ್ತನೆಂದರಿದು || ೨೨ ||

ಪಟಿಯನುತಿರ್ದೆನೀ ಮಹತ್ವಂ
ದಿಟಗೊಳಿಸಿತಾ ಚರಿತಮನಿಂದು
ಪಟುತರ ಮಹಿಮನಿದನುದಿಸದಿರಲಾ ಪುರಾಣಗಳು |
ನಟನೆಯ ಕಥೆಗಳೆನಿಸುತಿರ್ದವು
ಪಟುಮತಿಯಿಂತು ನುಡಿಯುತಿರಲಾ
ಪಟುವಾಕ್ಯಗಳ ಕೇಳ್ದಹುದೆನ್ನುತೊಪ್ಪಿದರೆಲ್ಲರು || ೨೩ ||

ಇಂತು ಜನಂಗಳೊಲೆದಾತನಂ
ಸಂತಸದೆ ಬಣಿಸುತಿರಲೊರ್ಮೆ
ಶಾಂತನಹ ಚರಮೂರ್ತಿಯಿಂ ಮತ್ತೊಂದು ಲೀಲೆಯದು |
ಶಾಂತಿಗಾಗಿಯೆ ಜರುಗಿತದನಾ-
ನಾಂತು ಹರುಷವ ಬರೆವೆನಿಲ್ಲಿಯು-
ನಂತರಾಲಿಸಿ ಭಕ್ತರಪ್ಪದು ತದ್ಗುರು ಪಾದಕೆ || ೨೪ ||

ಸಗ್ಗಕ್ಕೆ ಸಮಮೆನಿಸಿ ಮೆರೆಯುವ
ಶಿಗ್ಗಾವಿ ಪುರದಲ್ಲಿ ಮೆರೆಯುತ್ತೆ
ಭರ್ಗ್ಗಂಗೆ ಸಮನಾಗಿರ್ದನೋರ್ವಂ ಚರಮೂರ್ತಿಯು |
ಹಿಗ್ಗುತ್ತಲೀತಂಗಖಿಲ ಜನ-
ರೊಗ್ಗಟ್ಟಿನಿಂ ಭಕ್ತರಾದರ್
ಪಿರ್ಗುತ್ತವಾ ಶಿವಯೋಗಿ ಗರ್ವದೆ ಮೆರೆದಿರ್ದನು || ೨೫ ||

ಗಂಜೀಗಟ್ಟಿ ಚರಮೂರ್ತಿಯೊಳ್
ಸಂಜಾತ ಸುಸ್ನೇಹವ ಪಡೆಯು-
ತಂಜುತ್ತೆ ಬಾಳುತಲಿರ್ದನಾ ಶಿಗ್ಗಾವಿಗುರುವು |
ಮಂಜು ಪ್ರಶಾಂತವಹ ತನ್ಮಠ-
ಕಂ ಜಾವಜಾವಕೆ ಬರುತಿಹಂ
ನಂಜುಂಡಂಗೆ ಸಮನಹ ಶಂಭುಲಿಂಗ ಶಿವಯೋಗಿ || ೨೬ ||

ಅದಕೆ ನಾಗರಭಾವಿ ಮಠವೇ-
ದೊದವಿತ್ತು ನಾಮಂ ಪ್ರತಿದಿನದೆ
ಸದಮಲರಿರುತಿಹರ್ಸದ್ದೈವ ಭಕ್ತಿಯೊಳಲ್ಲಿಯೆ |
ಪದುಳ್ದ ಕ್ಷೌರದ ನೀಲಪ್ಪನುಂ
ವಿದಿತ ಶಿವಲೋಚನಿ ಮಠದವಂ
ಮುದಿತ ವೀರಾರ್ಯ ತಿಳಿಯಲಿವರೀ ಮಠಕಾಪ್ತರು || ೨೭ ||

ಒಂದುದಿನದೋಳ್ ಗಂಜೀಗಟ್ಟಿ-
ಯಿಂದೆ ಚರಮೂರ್ತಿಯು ತನ್ಮಠಕೆ
ಬಂದನೊಲೆದೀರ್ವರು ಮಠದ ಚರಮೂರ್ತಿಯಂ ಮುದದೆ |
ಅಂದದಿಂ ಸತ್ಕರಿಸಿ ಸ್ನಾನವ
ಛಂದದಿಂ ಗೈಸತ್ತೆ ಪೋಳಿಗೆ-
ಯೊಂದಿಪ ಸುಭೋಜನವ ಮಾಡಿಸಲಲ್ಲಿಯೆ ಕುಳಿತಸು || ೨೮ ||

ಸ್ವಲ್ಪಕಾಲದೊಳೊಂದು ಲೀಲೆಯ
ಕಲ್ಪನಾತೀತವೆನಲ್ ತೋರ್ದ-
ನಲ್ಪರೇನೆನೆ ಪೇಳ್ವೆನಲ್ಲಿಯೆ ವುಫ್ ಎಂದೂದಲು |
ಕಲ್ಪನೆಯಿರದನ್ನದಗಳುಗಳು
ಕಲ್ಪಿಸಲ್ಕಸದಳವೆನೆ ಸುರಿಯೆ
ಜಲ್ಪಿಸಲ್ತೊಡಗಿದನಾ ಮಠದಸ್ವಾಮಿ ನೋಡಿಂತು || ೨೯ ||

ಏನಿದ್ದೈ ಹುಚ್ಚನೆ ಎಂದೊಡನೆ
ಹೀನನೆ ವಾಂತಿಯೆನಗಿದೆ ನಿನ್ನ
ಮಾನಗೆಟ್ಟಿಹ ವರ್ತನದಿಂ ಮಠಂ ಮಲಿನಮಾಯ್ತು ।
ಮೌನಿಯುಹ ನೀಲಪ್ಪನು ಕೇಳ್ದು
ಮೌನವ ಮುರಿಯುತಿಂತು ನುಡಿದಂ
ಜ್ಞಾನಿಯೆ ಬಿಡಿದು ವಾಂತಿಯಲ್ಲಂ ಲೀಲೆಯಿರಲಹುದು ॥ ೩೦ ॥

ವಾಂತಿಯಾದೊಡೆಯುಂಡುದ ದೆಲ್ಲ
ಮಂತೆಬೀಳ್ದಿರುತ್ತಿತ್ತು ನೋಡಲ್
ಕಂತದುಮಿಲ್ಲಮನ್ನದಗಳಿರುವದುರೆ ವಿಚಾರಿಸಿ ।
ಶಾಂತಿಯಿಂ ನೋಡಿರಿ ಮಂಡಕ್ಕಿ-
ಯಂತಹುದು ತಲ್ಲೀಲೆ ಮುಗಿಯಲಿ
ಶಾಂತರೆಯಾನೆ ಶುಚಿಗೊಳಿಸುವೆಂ ಕುಪಿತರಾಗದಿರಿ ॥ ೩೧ ॥

ಇದನಾಲಿಸುತೆ ಶಾಂತನಾದಂ
ಪದುಳ್ದು ಲೀಲಾತ್ಮಂ ಮೌನದಿಂ
ಪದಪಿಂದೆ ಕುಳ್ಳಿರ್ದುದನರಿದು ನೀಲಪ್ಪನಾಗ ।
ಮುದದಿಂದೆ ನಿರ್ಮಲಗೊಳಿಸುತ್ತೆ
ಸದಮಳಿನ ಭಕ್ತಿಯೊಳೆ ಶಾಸ್ತ್ರವ
ವಿದಿತರೀರ್ವರ ಮುಖದಿಂದೆ ಕೇಳುತ್ತೆ ಕುಳಿತನವಂ ॥ ೩೨ ॥

ಶಾಸ್ತ್ರವಿಷಯುವ ಮುಗಿಸಿ ನೆರಳುತೆ
ವಸ್ತ್ರದಿಂ ಮುಖಮುಂ ಮುಚ್ಚುತ್ತೆ
ಶಸ್ತ್ರದಿಂದುರೆ ಹೊಡಿಸಿಕೊಂಡವನಂತೆ ಬೀಳ್ದನವಂ ।
ಶಾಸ್ತ್ರಿಯಂದದೆ ಪ್ರವಚನಗೆಯ್ಯು-
ತಸ್ತ್ರ ತಾಗಿದನಂತೆ ಬೀಳ್ದುರೆ
ಕುಸ್ತ್ರಿಯಂತೆ ನೆರಳ್ವೆಯೇಕೆಂದಂ ಮಠದ ಸ್ವಾಮಿ ॥ ೩೩ ॥

ನಿನಗೆ ಬೇನೆಯದೇನಾಯ್ತೆಂದು-
ಮೆನುವಾ ಮಠದ ಸ್ವಾಮಿಯ ನುಡಿಯ
ಘನಗುರುವು ಕೇಳ್ದಿಂತು ಪೇಳ್ದಂ ಕೇಳ್ ಚರಂತೆಪ್ಪ ।
ಅನಿತೇನೊರೆಯಲೆನ್ನ ಕೈಬೆರ-
ಳನೆ ನೋಡು ಗುರುಳೆಯದಾಗಿತ್ತು
ವಿನುತನೆ ಇಲಿಯು ನಿನ್ನೆ ತಿಂದುದರಿಂದ ನೋವಾಯ್ತು ॥ ೩೪ ॥

ನೋಡಿದಂ ತನ್ಮಠ ಚರಮೂರ್ತಿ
ಕೂಡಿದ ಬೆರಳಿನಗಲಿಸಿ ಮತ್ತೆ
ನೋಡಲವಂಗೆ ಗುರುಳಿಗಾಯವು ಕಾಣಿಸದಾಯಿತು ।
ಕೂಡೆ ನೀಲಪ್ಪನ ಕರೆಯುತಿರೆ
ನಾಡೆಕೀರ್ರ್ವರ ಕೈ ನೋಡೆಂದು
ಕೂಡಲೆ ಸದ್ಗುರುವು ಪೇಳುತಿರೆ ನಿರುಕಿಸಿದನಂತೆ ॥ ೩೫ ॥

ಆ ಮಠದ ಚರಮೂರ್ತಿಯ ನೋಡೆ
ಮಮಹಸ್ತದ ಕಿರಿಬೆರಳಿನೊಳ್
ಕೋಮಲವಾಗಿ ತೋರ್ದುದು ಗುರುಳೆಯೊಂದು ನೀಲಪಗೆ ।
ನೇಮದಂತೆಯೇ ತೋರಿಸಿದನವ-
ನಾ ಮಹಿತನಾಲೋಚಿಸಲಾದ-
ನೀ ಮಹಾತ್ಮಂ ನಡೆದನೆಲ್ಲಿಯೊ ಲಿಂಗ ಲೀಲೆಯಲಿ ॥ ೩೬ ॥

ನೀಲಪನಾಗಳಿಂತು ನುಡಿದಿಹ-
ನೋಲಯಿಸುತ್ತಲೈ ಮಹಾಂತನೆ
ಲೀಲೆಯನರಿದವರ್ ನೀವೆ ತನ್ಮಹಿಮಂಗದೇಕೆ ।
ಮೇಲೆನಿಸುವುಪಚಾರ ವಚನವ
ಪಾಲಕನೆ ನುಡಿಯುತ್ತ್ತಕೇಳೆ ಸು-
ಶೀಲನಾತನುಪಾಯವ ಪೇಳುತಿರ್ದಂ ದಿಟವಿದು ॥ ೩೭ ॥

ಅವನಲ್ಲ ಶೋಧಕ್ಕೆ ದೊರೆವಂ
ತವೆಯಾನೆ ಯತ್ನವ ಗೆಯ್ದು ಶೋ-
ಧವ ಮಾಡಿಕೊಂಡಾತನಂ ಕರೆತಪ್ಪೆನೀ ಪುಕಕೆ |
ಅವಗಿಂತು ಪೇಳ್ದಾ ನೀಲಪಂ
ಜವದಿನಲ್ಲಿಂದಾಗ ತೆರಳ್ದಂ
ತವಕದಿಂ ಶೋಧಿಸಲಾದನೆಲ್ಲಿಯು ದೊರೆಯಲಿಲ್ಲ ॥ ೩೮ ॥

ಗುರುಳೆಯದು ದಿನದಿನಕೆ ಬಾಯುತೆ
ನೆರೆಯೊಡೆದು ಸೋರುತಿರಲಿಲಿಯೊಂ-
ದುರೆ ಕಚ್ಚಿದುದೆ ನೆಪವಾಗಿ ಗಾಯವದು ಪೆರ್ಚುತಿರೆ |
ಕರಮದರಲ್ಲಿ ಬೀಳ್ದು ಪುಳಗಳ್
ಸರಿಯಾಗಿ ಮಂಡಕ್ಕಿಯಂದದೆ
ಪರಿದಾಡುತಿರೆ ನೀಲಪ್ಪನದನರಿಯುತೆ ಮರುಗಿದಂ ॥ ೩೯ ॥

ಭಾವಿಸಲ್ ತಿಂಗಳದೆ ಸಾಗರ
ಭಾವಿಯವುತದ ಶಿಗ್ಗಾಂವಿಯನು-
ಭಾವಿಚರಮೂರ್ತಿಯು ಶಿವನಲ್ಲಿ ಬೆರೆದನಾ ರುಜದೆ |
ಭಾವಿಕರದಂ ನೀಲಪನಿಂದ-
ಲೋವಿ ತಿಳಿಯುತೆ ಬೆರಗಾದರುರೆ
ಸಾವಧಾನದೆ ತಮ್ಮತವ್ಮೊಳು ನುತಿಸಿ ಭಕ್ತಿಯೊಳೆ ॥ ೪೦ ॥

ಗದುಗಿನೊಳ್ ಪಂಚಾಕ್ಷರನಗರ-
ವುದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳ್ ಪದಿಮೂರನೆಯಸಂಧಿ ॥ ೪೧ ॥

**ಅಂತು**

**ಸಂಧಿ ಪದಿಮೂರಕ್ಕಂ ಪದಗಳು ಆರುನೂರ್ದಾತೊಂಭತ್ತೊಂಭತ್ತಕ್ಕಂ**

**ಮಂಗಲಂ**

॥ ಶ್ರೀ ಗುರು ಬಸವಲಿಂಗಾಯನಮಃ ॥



# ಹದಿನಾಲ್ಕನೆಯ ಸಂಧಿಯು

ಕಣ್ಣ ಕಳೆದುರೆ ಮಗನನಿತ್ತುಂ
ಸಣ್ಣ ಜನರಿಗೆ ವೃತಿಯರುಪಿ ಮು-
ಕ್ಕಣ್ಣನಂದದೆ ಸೂಚಿಸಿದನುರೆ ಚಳಿಸೊಂಡಿ ಪುಣ್ಣಂ ॥ ಪಲ್ಲ ॥

ಕಾಮಿನಿಯರಂ ಸೃಷ್ಟಿಸುತೆ ಮೇಣ್
ಕಾಮಿಸಿ ಬೀಳ್ವ ಮನವ ಸೃಷ್ಟಿಸಿ
ಕಾಮನಂ ಸೃಜಿಸುತೆ ಮನದೊಳಿರುವಂತೆಸಗುತೆ ಶಿವ |
ಕಾಮ ವೈರಿಯು ನೀನೆಂತಾದೆ
ಕಾಮಿಸುತೆ ಸ್ತ್ರೀಯರೊಳೆ ಬೀಳ್ದೊಡೆ
ನೇಮಿಸುವೆ ಏಕೆನಗೆ ಶಿಕ್ಷೆಗೆ ನೀಂ ಪೇಳಭವನೆ ॥ ೧ ॥

ಮೆರೆವ ಗಂಜೀಗಟ್ಟಿಯೊಳಗುರು-
ತರಲೀಲೆಯೆಸಗುತೆ ಚರಮೂರ್ತಿ
ಪರಮ ಭಕ್ತಿಯ ಪುಟ್ಟಿಸಲ್ ಯತ್ನಿಸುತಿರ್ದನವನು |
ನೆರೆಹಾನಿಯಂ ಪೊಂದಿ ಕೆಲಂಬ-
ರುರೆ ಹಾನಿಯಂ ಪೊಂದಿ ಪಲಂಬ-
ರುರೆ ಏನು ಹಾನಿಯ ಪಡದೆ ಭಕ್ತರ್ ಕೆಲರಾದರು || ೨ ||

ಓರ್ವ ಮಾಹೇಶ್ವರನಿದ್ದನುರೆ
ಸರ್ವರಿಗೆ ಪ್ರಿಯನಾಗಿ ಭಿಕ್ಷೆಯ-
ನುರ್ವಿಯೊಳಗಲ್ಲಲ್ಲಿ ಬೇಡುತೆ ಜೀವಿಸುತಿರ್ದನು |
ಗರ್ವವಾತನ ಜನ್ಯ ಗುಣಮಿ-
ತ್ತುರ್ವರೆಯೊಳಿಹವುದ್ಯ ಮಂಗಳ
ಪೂರ್ವಕಾಲೀನರ ತೆರದೆ ತನ್ನಯ ಮನೆಗಾಗಿಯೆ || ೩ ||

ಮಾಡಿಕೊಳುತಿರ್ದಂ ತಾನೆಂದು
ಮಾಡಲಿಲ್ಲಂ ಪರರ ಸೇವೆಯ
ಕೂಡದಿರುತಿಹನನ್ಯರೋಳ್ ಕಲ್ಲಯ್ಯ ನಾಮಕನು |
ಕೂಡಲೊರ್ಮ್ಮೆತನ ಮನೆಯೊಂದು
ಗೋಡೆಯದು ಬೀಳ್ದತ್ತು ತಾನೆಯೆ
ಕೂಡಿಕಟ್ಟಲ್ತೊಡಗಿದನೊಬ್ಬನಂ ಕರೆದುಕೊಂಡು || ೪ ||

ಹಗಲಲ್ಲಿ ಕಟ್ಟಿದ ಗೋಡೆಯಂ
ಮಿಗೆ ರಾತ್ರಿಯೋಳ್. ತಚ್ಚರಮೂರ್ತಿ
ನಗುತೆ ಕೆಡಹುತಲಿರ್ದನೈದುತೆ ಸರ್ವರ್ ಮಲಗಿರೆ |
ಬಗೆದೆರಡು ಮೂರ್ಬಾರೆ ಕಟ್ಟುತ-
ಲಗಿಯದೆಲ್ಲರ್ ಬೈಯ್ಯುತಯ್ಯಂ
ಬಗೆಯೊಳಾಲೋಚಿಸುತೊರ್ಮೆ ರಾತ್ರಿಯೊಳ್ ಕಾಯುತ್ತಿರೆ || ೫ ||

ಪದ್ಧತಿಯಂತೆ ಕೆಡಹಲ್ಕೈದಿದ
ಶುದ್ಧ ಚರಮೂರ್ತಿಯವನರಿದು
ಬುದ್ಧಿಯಿಲ್ಲವೆ ನಿನಗೆನುತವನ ಬಾರ್ಕೋಲಿಂದಲೆ ।
ಸಿದ್ಧಪುರುಷಗೆ ಬಡೆಯುತಿರ್ದಂ
ಶುದ್ಧಿಮತಿ ತತ್ಸತಿ ತಿಳಿದಿದಂ
ಕೃದ್ಧಳಾದಳ್ ಧಾವಿಸಿ ಬಂದು ನೋಡಿ ಪತಿಕೃತಿಯ ॥ ೬ ॥

ಮನೆಯೊಳಗೆ ಪತಿಯಂ ಕರೆದೊಯ್ದ-
ಳನುನಯದೊಳಾ ಚರಮೂರ್ತಿಯಾ-
ಗನುವರಿದು ಜೋಗುಳವ ಪಾಡುತೆ ನಡೆದನಲ್ಲಿಂದೆ ।
ವಿನಯಮಿಲ್ಲದ ಕಲ್ಲಯನ ಲೋ-
ಚನಗಳಿಂಗಿದವಾಕ್ಷಣದೆ ತ-
ಜ್ಜನರೀಕ್ಷಿಸುತೆ ತತ್ಕೃಪೆಯ ಪಡೆಯಲ್ಬೋಧಿಸಿದರು ॥ ೭ ॥

ಮುನ್ನಗರ್ವವ ಬಿಡದಿರ್ದನವ-
ನುನ್ನತನವನ ಮನೆಗೊರ್ಮೆ ತ-
ಚ್ಚಿನ್ನಯನನೊಲವಿಂ ಬಂದು ಮೇಲಿರ್ದ ತೊಟ್ಟಿಲವ ।
ತನ್ನ ಪ್ರೀತಿಯೊಳೊಸೆದಿಳುಹುತ್ತೆ
ಚನ್ನಮೆನೆ ಕಟ್ಟುತ್ತದರೊಳಗೆ
ಸನ್ನುತಂ ಕುಳ್ಳಿರುತೆ ಜೋಗುಳಮಂ ಪಾಡಿ ತಾನೆ ॥ ೮ ॥

ಅಲ್ಪ ಸಮಯೆಂಬರನಿರ್ದು ನಿ-
ಷ್ಕಲ್ಪನಲ್ಲಿಂ ನೆರಳ್ದನೊಯ್ಯನ-
ನಲ್ಪಗುಣವತಿಯಾ ಕಲ್ಲಯನ ಸದ್ಧರ್ಮಪತ್ನಿ ।
ಕಲ್ಪನೆಯಿರದ ಭಯದಿಂದವಳ
ಕಲ್ಪವುಹಿಮನ ಕಂಡಡುಮಡಗಿ
ಕಲ್ಪಿಸಲಾಗದುರು ಭಕ್ತಿಯಿಂದೆರಗಿದಳಲ್ಲಿಯೆ ॥ ೯ ॥

ಅಲ್ಲಿಗಾಗೈದುತೆ ತೊಟ್ಟಿಲವ
ಕಲ್ಲಯ್ಯನೀಕ್ಷಿಸುತೆ ಸತಿಯಂ
ಕ್ಷುಲ್ಲಕ ಹುಚ್ಚಚರಮೂರ್ತಿ ಬಂದಿರ್ದನೇನೆಂದು ।
ಖುಲ್ಲತನದಿಂ ಕೇಳಲವಂಗೆ
ತಲ್ಲಲನೆಯುತ್ತರಿಸಿದಳಿಂತು
ತಲ್ಲಣಿಸುತ್ತಲೇನಿದ್ಧೈ ನೀವೇತಕಿಂತವರ್: ॥ ೧೦ ॥

ನಿಂದಿಸುವಿರ್ಶೈ ಬಂದಿರ್ದರವ-
ರಿಂದು ತೊಟ್ಟಿಲಮಂ ತಾವಿಂತು
ಸಂದ ಸಂತಸದಿಂ ಕಟ್ಟುತ್ತೆ ಕುಳಿತು ತೂಗುತ್ತೆ ।
ಕುಂದದಲೆ ಪೋದರ್ ಮಹಾತ್ಮರ್
ಅಂದಿನಂದದೆ ಜೋಗುಳ ಪಾಡಿ
ಕಂದನುದಯಿಪ ಶಕುನವಿರಲಹುದಿದು ಸುಮ್ಮನಿರಿ ನೀವ್ ॥ ೧೧ ॥

ಆಕೆಗೆ ಭಕ್ತಿ ಫಲವಾಗಿ ಸಲೆ
ಲೋಕಮಚ್ಚರಿಪಂತೆ ಗರ್ಭಂ
ನಾಕಿಗರ್ಪೊಗಳ್ವಂತೆ ತೋರ್ಪುದು ಕಲ್ಲಯನ ಮೋದಂ ।
ಸಾಕೆನಿಪ ಮಗುವಿನ ಬಯಕೆಯದು
ಬೇಕೆನದೆ ಫಲಿಸುದುದಂ ತಿಳಿದು
ಕಾಕು ಗರ್ವವ ಬಿಡಿಸಿ ಬೆಳೆಯಿತು ಬೆಳೆದಂತುದರವು ॥ ೧೨ ॥

ನವಮಾಸಂಗಳುರೆ ತುಂಬುತಿರೆ
ತವೆ ತದಾಪ್ತರ್ ಹಸ್ಸಿಸುತ್ತಿರೆ
ಭವಿತನವ ಕಳೆಯುತಿರೆ ಲಿಂಗವ ಧರಿಸಿ ಸದ್ಗುರುವು ।
ಜವದೆ ಕಲ್ಲಯ್ಯನ ಪತ್ನಿಯು-
ತ್ಸವಿಸಿ ಪಡೆದಳ್ ಸತ್‌ಪುತ್ರನಂ
ಕಪಿದು ಸಮನಿಸಲುತ್ತಮ [illegible] ॥ ೧೩ ॥

ಲೀಲೆಯನಿನಂ ಕಂಡು ಕಲ್ಲಯು-
ನೋಲಯಿಸುಪ ಭಕ್ತಿಯೊಳಿ ಬೆರೆದಂ
ಮೇಲೆನಿಪ ಸಂಪದವ ಪಡೆದಂ ಗರ್ವವ ತೊರೆದನು |
ಕೀಲಿಸಿದಂಥತೆಯು ಸ್ಥಿರವಾಯ್ತು
ಬಾಲಕರಿಗಾದಡುಮೀ ಮಹಿಮೆ
ಕಾಲಕಾಲಕೆ ಸ್ಮೃತ ಮಾಗುತಿರ್ದತ್ತೇನೊರೆವೆನು || ೧೪ ||

ಆಯ್ದಕ್ಕಿಮಾರಯ್ಯಂ ಸತಿಯಿಂ
ಮಾದಾರ ಹರಳಯ್ಯಂ ಪತ್ನಿಯಿ-
ನಾದಿತ್ಯ ಭೂಪಾಲಂ ತನ್ನಧರ್ಮಿಣಿಯಿಂದಲೆ |
ಮೋದಾತ್ಮರಾದರ್ ಶರಣ ಸ-
ತ್ಯಾದರ್ಶ ಪಥವಂ ಪಿಡಿಯುತ್ತೆ
ಖೇದಾಂತಕರವಾದೀ ಕಥೆಗಳಿಂದು ದಿಟವಾಗಿ || ೧೫ ||

ತೋರಿದವೆನುತ್ತೊಪ್ಪಿ ನುತಿಸು-
ತ್ತೀರಿ ಭಕ್ತಿಯ ಸೌಧವ ಜನರ
ತೋರದೆ ಮಾನಸಂಗಳಲ್ಲಿಯೆ ನಲಿದಾಡುತಿಹವು |
ಸಾರಿತನಿತರೊಳೊಂದು ಲೀಲೆಯ-
ಪಾರ ಮುದಮಂ ಕರಿಸಲೋಸುಗ
ತೀರದ ಹರುಷದಿಂದಾಲಿಪುದದೇನೆನೆ ಪೇಳ್ವೆನು || ೧೬ ||

ಒಂದು ದಿನದೋಳ್ ಬೇವಿನ ಗಿಡದ
ಭಂದವಹ ವೇದಿಕೆಯ ಮೇಲಿವ
ನಂದದಿಂ ಕುಳ್ಳಿರುತೆ ಪದಹಸ್ತಂಗಳಗ್ಗರಿಬಿಯ |
ಸಂದು ಸಂದಿಗೆ ಬಿಡದೆ ಕಟ್ಟುತ-
ಲಂದು ಗ್ರಾಮದೊಳಳುತೆ ಕೂಗುತೆ
ನಿಂದು ತಾನೆಯೆ ಮಾತನಾಡುತಲಿರ್ದನೆಂತೆನಲು; || ೧೭ ||

ಅಪ್ಪ ಕೇಳಿರಿ ಪುಣ್ಣ್ಣಿ ಚಳಿಜ್ವರ-
ವೊಪ್ಪಿ ಕಾಡುವದೆಂದು ನಡುಗುತೆ
ತಪ್ಪದಲೆ ತತ್ತ್ರರಿಸುತ್ತೆ ಕ್ಷಣಕಾಲದೊಳ್ ಮತ್ತೆ।
ಕುಪ್ಪಳಿಸುತ್ತೆ ಪಾರುತಲಿಯುತೆ
ಚಪ್ಪಳಿ ಬಡಿದು ಬಿಚ್ಚುತರಿಬಿಯ
ಸಪ್ಪಳಿಲ್ಲದೆ ಪೋದನಾ ಗುರುವೆತ್ತಲೊ ಕಾಣದೆ ॥ ೧೮ ॥

ಕೆಲರೊರೆದರಿದನೀಕ್ಷಿಸಿದವರ್
ಛಲಘು ಮಹಾತ್ಮನಿವನಾಟವಿದು
ನೆಲದೊಳರಿಯಲ್ ಸಾಧ್ಯಮಲ್ಲಂ ಭಕ್ತರಾದವರು ।
ಪಲರಿವಂ ಸಲೆಹುಚ್ಚನೀತನ
ಕೆಲಸಮಿಂತಹುದೆಂದು ನುಡಿದರ್
ಛಲದೊಳನಿಬರ್ ಸೂಚಿಸಿದಂ ಭವಿಷ್ಯವನೆಂದರು ॥ ೧೯ ॥

ಕೆಲದಿನದೊಳಾ ಗಂಜೀಗಟ್ಟೆ-
ಗುಲಿದಂತೆ ಚಳಿಜ್ವರವು ಪುಣ್ಣಿಗಳು
ಸಲೆ ಕಾಡಿದವು ಜನರಿಗೈದುತೆ ನೆನಹಾಯಿತಾಗ ।
ಮಲಮಲನೆ ಮರುಗುತ್ತಾ ಜನತೆ-
ಯಲೆವ ಚರಮೂರ್ತಿಯ ಶೋಧಿಸುತೆ
ಲಲಘು ತತ್ಪದಮಂ ಪೂಜಿಸುತೆ ಸುಖವ ಪೊಂದಿಹುದು ॥ ೨೦ ॥

ಸಿಂಗಿರಾಜಂ ಬಸವೇಶ್ವರನ
ತುಂಗ ಮಹಿಮೆಯನರಿಯದೆ ಪಳಿದು
ಭಂಗಪಡುತಂ ಕಣ್ಣಿಗಳ ಕಳೆದುಕೊಂಡು ಮತ್ತವನೆ ।
ಸಿಂಗರದೆ ನುತಿಸುತ್ತೆ ಕಣ್ಣಿಗಳ
ಭಂಗವಿಲ್ಲದೆ ಪಡೆದೆನೆಂದಾವ್
ಮಂಗಲ ಪುರಾಣದೊಳೆ ಕೇಳಿರ್ದ್ದಿವದು ದಿಟವಾಯ್ತು ॥ ೨೧ ॥

ಎಂದು ನುತಿಸುತೆ ಚರಮೂರ್ತಿಯಂ
ಕುಂದದೆ ಭಕ್ತಿಯುಕ್ತರಾದರ್
ಕಂದಿದರ್ ಕೆಲಜನರಾಗದವರದನೆ ಪೇಳುವೆನು ।
ಕಂದುಗೊರಲನ ನೆನೆದು ಕೇಳುವ-
ದೊಂದು ದಿವಸದೆ ಹುಣ್ಣಿವೆ ದಿನಂ
ಮುಂದಿರಲ್ ಗುಂಜಳದೆ ಕಲ್ಲಪ್ಪಂ ಯಾತ್ರೆಗಾಗಿ ॥ ೨೨ ॥

ಎಲ್ಲಮ್ಮ ದೇವಿಯ ಮಂದಿರ-
ಕ್ಕೆಲ್ಲರ್ ಬಂಧುಗಳ್ ನೆರೆಯುತಿರೆ
ಸಲ್ಲುತ್ತಿರಲ್ ಶೋಭೆಯು ಹಳಿಯಬಂಡಿಯನಂದದೆ ।
ಬಲ್ಲಾತನಿಂ ಸಿಂಗರಗೊಳಿಸು-
ತುಲ್ಲಾಸದಿಂ ಮಂಚವ ಬಿಗಿಸಿ
ತಲ್ಲೀನನಾಗೆತ್ತುಗಳ ಸಿಂಗರಿಸಿ ಜೋಡಿಸುತೆ ॥ ೨೩ ॥

ಇಡಿಸಿ ಸಾಮಗ್ರಿಗಳನಾಪ್ತರ
ಕಡುಹಿರಿ ಬಂಡಿ ಚಕ್ಕಡಿಗಳೊಳ್
ಶಡಗರದೆ ಕುಳ್ಳಿರಿಸಿ ಕರಡಿಯ ಮುಖ್ಯವಾದ್ಯಗಳ ।
ಗಡಣದಿಂದೆ ಸನಾದಿ ಮೇಳಂ
ನುಡಿಯುತಿರೆ ಚರಮೂರ್ತಿಯುಮಲ್ಲಿ-
ಗೊಡನೆ ತಗಡಿನ ಸಾಣಿಗೆಯ ಬಾರಿಸುತೆ ಬಂದಿಹನು ॥ ೨೪ ॥

ಟಣ್ಣಗುಡುಗುಡೆನುತ್ತೆ ಮುಂದಕೆ
ಸಣ್ಣ ಹುಡುಗನ ತೆರದೆ ಸಾಗುತೆ
ಕಣ್ಣು ಕಾಣುವ ತೆರದೆ ಸಾಣಿಗೆಯಂ ಚಲ್ಲಿ ನಡೆದಂ ।
ಬಣ್ಣಗೆಡುತಾಗಖಿಲ ಜನರುರೆ
ತಣ್ಣಗೆ ಕುಳಿತು ಯೋಚಿಸಿ ಕೆಲರ್
ಬಣ್ಣಿಸಿ ನಿಲಿಸಿದರ್ ಪ್ರಯಾಣವ ನಡೆದರ್ ಪಲಬರು ॥ ೨೫ ॥

ಹುಚ್ಚನಾ ಚರಮೂರ್ತಿಯೆಂದುಂ
ಮೆಚ್ಚಿಸುವ ಕೆಲಸವ ಮಾಡನಿವ–
ನಿಚ್ಚಯಿಂ ಪೊಗಳ್ವರ್ ಮೂರ್ಖರೆಂದೊಲೆದು ನಿಂದಿಸುತೆ |
ಪೆಚ್ಚಲುತ್ಸಾಹಂ ನಗುತೋರ್ವ–
ನಿಚ್ಚಿಸದಿರ್ದಡುಂ ನಗಿಸುತ್ತೆ
ಮೆಚ್ಚಿಸುತೆ ಜನರಂ ಕುಳಿತಿರ್ದನೊಂದು ಗಾಡಿಯಲಿ || ೨೬ ||

ನಿಂದಿಯುರು ಫಲವಾಗಿಯೋ ಮೇಣ್
ಸಂದಿಸಿದ ಕರ್ಮಫಲವಾಗಿಯೊ
ಛಂದದಿಂ ಗಾಡಿಗಳ್ ಹುಬ್ಬಳ್ಳಿ ಪುರಕೈದಲು |
ನಿಂದಕಂ ಕುಳಿತಿರ್ದ ಬಂಡಿಗೆ
ಸಂದಿಸಿದೆತ್ತು ಬೆದರ್ದಡ್ಡೆಳೆಯೆ
ಪೊಂದಿದುರೆ ಸರುವಿನೋಳ್ ಬೀಳ್ದತ್ತಾಗ ಚಕ್ಕಡಿಯು || ೨೭ ||

ಸತ್ತನಾ ಕ್ಷಣದಲ್ಲಿ ನಿಂದಕ–
ನತ್ತರವನಾಪ್ತರ್ ಸ್ನೇಹಿತರ್
ಮತ್ತಮಾಂಗುವಾವನೋವುಂ ಸಂಭವಿಸಲಿಲ್ಲ |
ಮತ್ತದೇ ಗಾಡಿಯೊಳೆ ಪೆಣಮಂ
ಸತ್ತಮರ್ ಗಂಜೀಗಟ್ಟಿಗುರೆ
ಸುತ್ತಿ ಮರಗುತೆ ತಂದು ದಪನಂಗೊಳಿಸಿದರಳುತ್ತೆ || ೨೮ ||

ಉಳಿದವರ್ ಯಾತ್ರೆಯ ಮುಗಿಸಿಕೊಂ–
ಡಿಳಿದ ಮುಖಮುದ್ರೆಯಿಂದೂರಿಗೆ
ತಳೆದನುತ್ಸಾಹದಿನನಿರ್ವಾಹದೆ ಮರಳಿ ಬಂದು |
ತಿಳಿದಾ ಶಂಭುಲಿಂಗ ಗುರುವಿನ
ಹೊಳೆವ ಪದಪಂಕಜಕೆ ಭಕ್ತಂ
ಬಳಿಕಾದನಾ ಕಲ್ಲಪ್ಪನುರು ಮಹಿಮೆಯ ನೆನೆಯುತೆ || ೨೯ ||

ಇಂದ್ರನ ಲೋಕದಿಂದೊರ್ಮೆ ನೃಪ-
ಶೀಂದ್ರ ದಿಲೀಪನೀ ಭೂಮಿಗುರೆ
ರುಂದ್ರ ಜವದಿಂ ಬರುತಿರುವಾಗ ಕಾಮಧೇನುಮದು |
ಸಾಂದ್ರ ವರಮಂ ನೀಡಲೋಸುಗ
ಕೇಂದ್ರ ಕೃಪೆಯಿಂ ನಿಂದಿರಲ್ಕೆ ಮು-
ನೀಂದ್ರನಾಕಳಮಂ ಕಾಯ್ದಂ ತಿರಸ್ಕೃತಿಯ ಗೈದು || ೩೦ ||

ಎಂದು ಕೇಳಿರ್ದ್ದವದೆಮಗೆ ದಿಟ-
ಮಿಂದೆನಿಸಿತೆನ್ನುತ್ತೆ ಜನರುರೆ
ಛಂದದಿಂ ಕೊಂಡಾಡುತ್ತಿರ್ದ್ದರ್ ತದ್ಗುರುಲೀಲೆಯ |
ನಿಂದೆಯ ನುತಿಯ ಕೇಳುತ್ತೆರಡ-
ನೊಂದುಗೊಳಿಸುತಲಾ ಚರಮೂರ್ತಿ-
ಯಂದದಿಂ ಕುಗ್ಗದೆ ಹಿಗ್ಗದಿರುತಿರ್ದ್ದಂ ಸುಮತಿಯು || ೩೧ ||

ಲೀಲೆಯಂ ಮತ್ತೊಂದನೊರೆಯುವೆ-
ನಾಲಿಪುದದೆಂತೆನಲೊಂದುದಿನ-
ನೋಲಯಿಸದಿರ್ದ್ದಡುಮೊರ್ವ ಸಭ್ಯನ ಮನೆಗೆ ತಾನೆ |
ಪಾಲಿಸಲ್ ಬಂದಲ್ಲಿ ಕುಳಿತುರೆ
ಬಾಲಕನಂದದೊಳೇನು ಧರೂಡಿ
ಶೂಲಿಯೇ ಬಲ್ಲನೆನುತೆ ಪೋದಂ ಭಕ್ತನ ನೋಡುತೆ || ೩೨ ||

ಸಿಂಪಿಗರ ನರಸಪ್ಪನೆಂಬನು-
ಕಂಪದಿಂ ಕರೆಯುತ್ತಿರ್ದ್ದರವ-
ನಂ ಪುರದ ಜನರೆಲ್ಲರೀತಂ ಚರಮೂರ್ತಿ ವರಗೆ |
ಪೆಂಪಿನ ಭಕ್ತನಾಗಿರ್ದ್ದನುರೆ
ಸೊಂಪಿನ ಲೀಲೆವೆರಸಿಪ ನುಡಿಯ-
ಲಂಪು ತದ್‌ಹೃದಯದೊಳೆ ಶಂಕೆಯ ಪುಟ್ಟಿಸಿತಾಗಳೆ || ೩೩ ||

ಕೇಳುವನಿತರೊಳಿರುತಿರ್ದಿಲ್ಲ
ತಾಳಿಲೀಲೆಯ ಮರಳುತಿರ್ದಿ-
ಲ್ಲಾಳು ಕಳಿಸುತೆ ಶೋಧಿಸಿದಡುಂ ದೊರೆಯುತಿರ್ದಿಲ್ಲ |
ಭಾಳಲೋಚನ ಸಮಚರಮೂರ್ತಿ
ಪೇಳಲೇನೀ ತರದ ಸ್ವಭಾವಿ
ಮೇಳವಿಸದವನಾದುದರಿಂದ ನರಸಪ್ಪನಾಗ || ೩೪ ||

ಆವ ಯೋಚನೆಯಂ ಮಾಡದಲೆ
ಸಾವಧಾನದೆ ಗುರುವಂ ನೆನೆಯು-
ತಾ ವಿವೇಕಿಯುಮಿರುತ್ತಿರ್ದನವನುದ್ಯೋಗಿಯಾಗಿ |
ಭಾವುಕ ಗುರುವರಂ ನುಡಿದಂತೆ
ಭಾವಿಕನ ಮನೆಗೊರ್ಮೆ ಧರೂಡಿ-
ಗಾ ವಿವಿಧ ಶಸ್ತ್ರಗಳ ಕೊಳ್ಳುತೆ ಕಳ್ಳರೈದಿದರು || ೩೫ ||

ಅವರ ಸಂಗಡಮೀ ಚರಮೂರ್ತಿ-
ಯವಿರಳ ದಯಾಪಾಂಗನೈದುತೆ
ತವೆ ತುಡುಗರ್ ನಿಖಿಲಸಾಮಗ್ರಿಗಳ ಕೊಂಡು ಪೊರಗೆ |
ಅವಿನೀತರೈದುವವರೆಗುಮಾ
ಶಿವಯೋಗಿ ಮೌನದೊಳಿರ್ದು ಜನ-
ರವಸರದಿಂದೆ ನೆರೆಯುವಂದದೆ ಕೂಗಿದನಾಗಳೆ || ೩೬ ||

ಬೆದರಿ ಕಳ್ಳರ್ ಸಾಮಗ್ರಿಗಳ
ಪುದಿದ ಭಯದಿಂದೊಗೆದು ಪೋದರ್
ಪದೆದಾ ಧ್ವನಿಯ ಕೇಳಿದ ಜನರ್ ನೋಡಿದರೈದುತೆ |
ಮುದದೆ ನರಸಪ್ಪಂ ನೋಡುತ್ತೆ
ಪದಪಿಂದೆ ಗುರುವಂ ಕಂಡು ನಮಿ-
ಸಿದನುದಾತ್ತತೆಯಿಂದೆ ಪಿಡಿದೆತ್ತುತೆ ನುಡಿದ ನಿಂತು || ೩೭ ||

ಎನಗೇಕೆ ವಂದಿಸುವೆ ನಾನೇಂ
ಘನಕಾರ್ಯಮಂ ಗೆಯ್ದಿರ್ಪೆನೈ
ನಿನಗಿನ್ನು ಲಾಭಂ ಘಟಿಪುದೈ ಶಿಗ್ಗಾವಿಯಲ್ಲಿ ।
ಮನದಿಂ ಶಿವನ ಭಜಿಸುದ್ಯಮವ
ದಿನದಿನದೆ ಮಾಡುವದೆಂದುಸುರು-
ತನಘಂ ನಡೆದನಾ ಶಂಭುಲಿಂಗಾರ್ಯಂ ನಲೆಯುತೆ ॥ ೩೮ ॥

ಈ ಲೀಲೆಯಿಂ ಕಂಡು ಜನರ್ಕ-
ಳೋಲಯಿಸುತ್ತಲಿಂತು ನೆನೆದರ್
ಕಾಲಾರಿಯವತಾರಿಯಹುದಿವನೆಂದು ಭಾವಿಸುತೆ ।
ಫಾಲಾಕ್ಷ ವಾಕ್ಯಮಿದೆಂದರಿದು
ಕಾಲ ಪ್ರಸಂಗವ ತಪ್ಪಿಸದೆ
ಶೀಲೋದ್ಯಮವ ಶಿಗ್ಗಾವಿಯೊಳ್ ಮಾಡೆಂದವಂಗೆ ॥ ೩೯ ॥

ಒರೆಯುತೆ ತಮ್ಮ ತಮ್ಮಯ ಮನೆಗೆ
ಗುರುವಂ ನುತಿಸುತಂ ಪೋದರಾ
ಊರ್ಜಿನರಿತ್ತಲೀ ನರಸಪ್ಪನುರೆ ಗುರು ಭಕ್ತನು ।
ನೆರೆ ತನ್ನುದ್ಯಮವ ಶಿಗ್ಗಾವಿ
ಪುರದಲ್ಲಿ ನೆಲೆಸುತ್ತೆ ಗೆಯ್ಯಲ್
ಕರಮಾಗಳ್ ತೊಡಂಗಲ್ ಕ್ರಮದೆ ಶಿರಿವಂತನಾದಂ ॥ ೪೧ ॥

ಅದನರಿದ ಸಜ್ಜನರೆಲ್ಲರುರಿ
ಪದಪಿಂ ಪುರಾಣ ಸುಚರಿತಮಂ
ಮುದದೆ ಸ್ಮರಿಸಿದರೆಂತೆನಲ್ ಪೇಳುವೆನಾಲಿಪುದದಂ ।
ಸದಮಲ ಶರಣಬಸವೇಶನಿಂ-
ದೊದವಿದಾಶೀರ್ವಾದದಿಂ ಸಲೆ
ಕದಿಯುದಂ ಬಿಟ್ಟು [illegible] ॥ ೪೧ ॥

ಕೇಳಿರ್ದ್ದವದು ದಿಟವಾಯಿತೀ
ಭಾಳಲೋಚನ ಸಮ ಚರಮೂರ್ತಿ
ಕೀಳನಾದಾ ನರಸಪ್ಪಂಗೆ ಭಕ್ತಿಮಾರ್ಗ್ಗವನೆ |
ಮೇಳವಿಸಿ ತೋರುತಲುದ್ಧರಿಸಿ
ಬಾಳಗಲಿಸಿದನಿಂತೆಂದವ-
ರ್ತ್ತಾಳಿ ಹರುಷವ ಮಾತನಾಡುತೆ ಭಕ್ತರಾಗಿಹರು || ೪೨ ||

ಗದುಗಿನೊಳ್ ಪಂಚಾಕ್ಷರಸಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊಳ್ ಪದಿನಾಲ್ಕನೆಯ ಸಂಧಿ || ೪೩ ||

ಅಂತು

ಸಂಧಿ ಹದಿನಾಲ್ಕಕ್ಕಂ ಪದಗಳು ಏಳುನೂರ್ಹಾನಲವತ್ತೆರಡಕ್ಕೆ

ಮಂಗಲಂ



# ಹದಿನೈದನೆಯ ಸಂಧಿಯು

ಅಗ್ನಿ ಸ್ತಂಭ ಮುಖ್ಯ ಲೀಲೆಯ
ಮಗ್ನ ಮಾನಸನಾಗಿ ಪೇಳ್ವೆಂ
ಭಗ್ನ ವಾಂಛಿತರಾಗಲಾರರು ಕೇಳಿದವರೆಂದುಂ ॥ ಪಲ್ಲ ॥

ಅಪ್ಪನ ಹೆಂಗಸಿವಳೆಂದು ತ್ಯಜಿ-
ಸಿಪ್ಪನಾವನವಂಗೆ ಭ್ರಾತೃವೆ-
ನಿಪ್ಪನಾವನವಂಗೊಲಿದು ರೌದ್ರಾವತಾರಮನೆ ।
ಒಪ್ಪುತಿಚ್ಛೈಸಿದಾಗ ಕರುಣಿಪೆ-
ನ್ನೊಪ್ಪರೆಂದಾಶಿಷವನಿತ್ತಾ
ಕಪ್ಪುಗೊರಲಂ ಶಾಂತಿಯನೆನಗೆ ತಪ್ಪದೆ ನೀಡಲಿ ॥ ೧ ॥

ಅಮಿತ ಘನ ಷಡ್ಗುಣ ಸಂಪತ್ತಿ
ರಮಣನಾಗಿಹ ಭಕ್ತಿ ಜ್ಞಾನ
ವಿಮಲ ವೈರಾಗ್ಯಾಪ್ತನಾಗಿಹ ಯೋಗಿವರನಾದ ।
ಅಮರಗಣ ಸಂಸ್ತುತ್ಯನಾಗಿಹ
ಸುಮಹಿಮನಾದ ಚರಮೂರ್ತಿ ಶಿವ
ಸಮ ಶಂಭುಲಿಂಗಾಖ್ಯನಿರ್ದಂ ಗಂಜೀಗಟ್ಟಿಯೊಳ್ ॥ ೨ ॥

ಸಾವಿರ ನಾಲಿಗೆಯ ಶೇಷಂಗೆ
ಕೋವಿದನ ನುತಿಸಲ್ಕರಿದು ವೇಣ್
ಸಾವಿರಗಣ್ಣ ಶಕ್ರಗೀ ಶಿವಯೋಗಿಯ ನೋಡಲು ।
ಓವಿಯುಸದಳವೆನುತಿರಲ್ ಶೃತಿ
ಭಾವುಕನಾದ ಚರಮೂರ್ತಿಯನ-
ದಾವ ಭಕ್ತಂ ಮಾನವನನಾಗರಿವನೀ ಜಗದೆ ॥ ೩ ॥

ಭಕ್ತೋದ್ಧಾರಕಾಗಿಯನೇಕ
ವ್ಯಕ್ತ ಪ್ರಥಿತಮಾದ ಲೀಲೆಯ
ಸೂಕ್ತ ಪ್ರಕೃತವಾಗಿ ಗೆಯ್ಯುತಲಿರ್ದಂ ಸಂತತಂ ।
ಭಕ್ತಿಶ್ರಿತಂ ಜನತೆಯಾಗುತೆ
ಯುಕ್ತೋಚಿತ ಸುಮಾರ್ಗದಲ್ಲಿಯೆ
ಸಕ್ತಾಶೆಯಿಂ ಬೆರೆಯುತಿರ್ದುದು ಸಲೆ ಕೇಳಿ ನೋಡಿ ॥ ೪ ॥

ಅನಘ ಲೀಲೆಯನೊಂದನೊರೆವೇಂ
ಘನ ಮಂತ್ರೋಡಿ ಸಿದ್ಧರಾಮಪ
ನನುಪಮಿತ ಸಚ್ಛಿಷ್ಯನಾಗಿರ್ದಂ ಮಹಾ ಮತಿಯು ।
ದಿನದಿನಕವನ ಪರಿಕಿಸುತಿರ್ದ-
ನನುಪಮ ಭಕ್ತಿ ಬೆಳೆಯಿತವನೊಳ್
ವಿನುತನೆಂದುಂ ಕುಂದದಿರ್ದಂ ಗುರು ಪರೀಕ್ಷೆಯೊಳೆ ॥ ೫ ॥

ಗುರು ಕೃಪೆಯಿಂದವಂಗಾವುದುಂ
ಕೊರತೆಯಿರಲಿಲ್ಲವನ ಪೊಲಂಗ-
ಳುರೆ ಬೆಳೆಯುತಿರ್ದವು ಪುಸಿಯಾಗದಂತೆ ಪ್ರತಿವರ್ಷಂ |
ಕರವೊರ್ಮೆ ಹತ್ತಿಯ ಬೆಳೆಯು ಜನ-
ರರಿದೆನಲ್ ಬಂದಿರ್ದುದವಂಗೆ
ನೆರೆ ಸಂತೋಷವಾಗಿರ್ದುದಾಗರಳೆಯ ಮಾಡಿಸಿ || ೬ ||

ಕಡುಪಿಂದಂಡಿಗೆಯ ಪೊಲಿಸುತೆ
ನಿಡುನಿಟ್ಟಿ ಗೆಯ್ಯಿಸುತೊಟ್ಟಿಸುತೆ
ಕಡುಹಿಂದೆಣಿಸಿದಂ ಮೂರುನೂರಂಡಿಗೆಯಿರ್ದವು |
ಸಡಗರದ ಧಾರಣೆಯು ಬರುವನ-
ಕಿಡಬೇಕೆಂದು ನಿಶ್ಚಯಿಸಿ ಮನೆ-
ಕಡೆಯ ಬಾಗಿಲದೊಳಗೊಟ್ಟಿಸಿರ್ದಂ ಗುರುಭಕ್ತನು || ೭ ||

ಪರಮ ಶಿಷ್ಯ ಸದಾಶಿವೇಂದ್ರಂ
ಬೆರೆದೀ ಶಿಷ್ಯ ಸಿದ್ಧರಾಮಪ-
ನುರು ಗೃಹದೊಳಿರುತಿರ್ದಂ ಶಿವಾನುಭವದೆ ಗುರುವರಂ |
ಪರವಶದೊಳಗಂಡಿಗೆಗಳಿಗೆ
ನೆರೆ ಸೊಪ್ಪಿಯಂ ಮೇಲೆ ಹೊದಿಸುತೆ
ಸರಿಗೊಳಿಸಿ ಬೆಂಕಿಯ ಪರ್ಚುತ್ತೆ ನಲಿದಾಡುತಿರ್ದಂ || ೮ ||

ಇದನೀಕ್ಷಿಸಿದ ಜನರುರೆ ಮರಗು-
ತದನಾ ಸಿದ್ಧರಾಮಪಗೊರೆದ-
ರುದಿತವಾದಳ್ಕರೆಯಿಂದನವನಿರ್ದಲ್ಲಿ ಪೋಗಿ |
ಸದಮಲನ ಲೀಲೆಯು ಕೇಳುತ್ತೆ
ಮುದದೆ ನಗುತಿರ್ದಂ ಮಾತನಾ-
ಡದಲಿರ್ದಪಂ ಮನದಲ್ಲಿ ಗುರುಕಾಂಕ್ಷೆಯೆಂದರಿದು || ೯ ||

ಕಣದಲ್ಲಿರ್ದ್ದದನಾಗಳಾತಂ
ಗುಣವ ಪರಿಕಿಸಲಲ್ಲಿಗಾ ಗುರು–
ವಣುಮಾತ್ರವದನರಿಯದುದವನಂದದೆ ಬಂದು ನಿಂದಂ |
ಪ್ರಣತಂಗೆ ಕುಳ್ಳಿರಿಸಿ ಮುದದಿಂ
ಮಣಿಯುತಿರೆ ಚರಮೂರ್ತಿ ನಗುತ್ತೆ
ತಣಿಯದಲೆ ಮೊಗಮಂ ನೋಡುತ್ತೆ ಕೇಳಿದೆನೆಂತೆನೆ || ೧೦ ||

ಸಿದ್ಧರಾಮನೆ ಹತ್ತಿಯಂಡಿಗೆ
ಸಿದ್ಧಮೆನಿಸಿದವೆನಿತು ಪೇಳ್ಳೆ
ಬುದ್ಧಿವಂತನೆಯಲ್ಲಿ ಮಾರುವೆಯನುತಿರಲ್ಕಾಗ |
ಶುದ್ಧಮನದಿಂ ಶಿಷ್ಯನೊರೆದಂ
ವೃದ್ಧನ ನೋಡಿ ಗುರುವೆಯುರಳೆಯು
ಸಿದ್ಧಿಸಿದೆ ನಾನದು ಮೂರುನೂರಂಡಿಗೆಯಾದುದು || ೧೧ ||

ತಮ್ಮ ಹೇಳಿಕೆಯಂತೆ ಮಾರುವೆ–
ನೊಮ್ಮೆಗಿಂತೆನುತಿರಲ್ಗುರುವರ–
ನುಮ್ಮಳಿಸದಾತನ ಮನವರಿದು ಗುರುವೆಂದನಿಂತು |
ತಮ್ಮನೀನಿಂದೇ ರಾತ್ರಿಯೊಳ್
ಸುಮ್ಮನೆ ಒಯ್ದು ಹುಬ್ಬಳ್ಳಿಯೊಳ್
ಸಮ್ಮತದೆ ಮಾರ್ಕೆ ನಿನಗಾಗುವದು ಲಾಭಮರಿಯೆ || ೧೨ ||

ನಡೆಯ್ಕೆ ನಿಮ್ಮ ಮನೆಗೆ ಪೋಗೋ–
ಣಡವಿಡದೆ ಶಿವನಂ ನೆನೆಯೆನ್ನು–
ತೊಡೆಯನಾತನ ಕರೆದು ಕೊಂಡೈದಿದಂ ತದ್ಗೃಹಕೆ |
ಒಡನೆ ನೋಡುತಲಲ್ಲಿ ಬೂದಿಯ
ಸಿಡಿಮಿಡಿಗೊಳದಲೊಳಗೈದಿದಂ
ತಡೆಯದೀ ಭಕ್ತಿಯ ಭಾವಕ್ಕೆ ಮೆಚ್ಚಿ ಗುರುವರನು || ೧೩ ||

ಕರೆದಂ ಸಿದ್ಧರಾಮು ಬಾರೆಂ-
ದುರೆ ಗುರುವಿನಾ ಧ್ವನಿಯ ಕೇಳುತೆ
ತ್ವರದಿಂದೆ ಬರಲಾತಂಗೆ ತೋರುತ್ತೆ ಬೂದಿಯುನೆ |
ಭರದೆ ಸದಾಶಿವೇಂದ್ರನ ಕರೆಯು-
ತೊರೆದನಿರ್ವರ್ ಬೂದಿಯ ತೆಗೆಯಿ-
ರರಿಯಲೆನಗಪವಾದಂ ಬಂದುದಳಿಸಿಕೊಳ್ಳುವೆನು ॥ ೧೪ ॥

ನಗುತೆ ಸದಾಶಿವೇಂದ್ರಂ ಕರವ
ಸೊಗದೆ ಬೂದಿಯೊಳಿಟ್ಟನಾಗಳೆ
ಬಗೆಯಲಂಡಿಗೆಗಳ್ ತೋರಿದವು ಸಿದ್ಧರಾಮುಪನು ।
ಮಿಗೆ ಸ್ವಚ್ಛಗೊಳಿಸಿದನೆಲ್ಲವಮಂ
ತೆಗೆಯಲ್ಕೆ ಕಂಗೊಳಿಸಿದವು ಸಲೆ
ಸೊಗಯಿಸುವವುಗಳಂ ನೋಡಿ ಜನರರಿದೆನುವಂದದೆ ॥ ೧೫ ॥

ನಿಂದಿಸಿದವರ್ ಪೊಗಳುತಿರ್ದರ್
ಕುಂದುತೆಂತೆನಲಾ ಖ್ಯಾತಯ್ಯ-
ನೆಂದೆಸೆದಿರ್ದ ಶಿವಶರಣನುರೆ ಪೊಲಗಳೋಳ್ ಖಲರು |
ಬಂದು ಬೆಳೆಗಳಿಗಿಟ್ಟು ಬೆಂಕಿಯ
ಛಂದದಿಂ ಪೋಗಲ್ಕೆ ಶರಣಂ
ಕಂದದೆ ತಿಳಿದು ಬರುತೆ ನೋಡಲ್ ಬೆಳೆಯಾದುದರಿಯೆ ॥ ೧೬ ॥

ಇಂತನೇಕ ಚರಿತ್ರಗಳ ನೆನೆ-
ದಂತವಿಲ್ಲದೆ ಸ್ತುತಿಯ ಗೆಯ್ಯುವ-
ನಂತ ಜನರ್ಗೆ ಪೇಳುತಿರ್ದ ಶಂಭುಲಿಂಗಾರ್ಯಂ |
ಎಂತೆನಲ್ಕೆ ಸದಾಶಿವೇಂದ್ರನ
ಶಾಂತಿಯಿಂ ನುತಿಸಿರಿ ಮಹಿಮೆಯಿದು
ಸಂತಸದೊಳೊರೆಯುವೆನಾತನದೆ ಸಟೆಯಲ್ಲವರಿಯೆ ॥ ೧೭ ॥

ಬೆಂಕಿಯಂ ಪಚ್ಚಲ್ ಬಲ್ಲೆನಾಂ
ಶಂಕೆಯಿಲ್ಲದಲಾ ಸದಾಶಿವ-
ನಂಕಿತವ ಪಡೆದೀತಂ ದಗ್ಧಮಂ ಸರಿಗೊಳಿಸಲು ।
ಬಿಂಕಮೇನಿವನರಿದಿರುವನಾ-
ತಂಕವಿಲ್ಲೆನೆ ಸದಾಶಿವನೆಂ-
ದಂ ಕಡುಹಿನಗ್ನಿಸ್ತಂಭಲೀಲೆಯ ಗೆಯ್ದನೆಂದು ॥ ೧೮ ॥

ಈ ಪರಿಯೊಳಾಡಿದ ನುಡಿಯ ಕೇ-
ಳ್ದೋಪರೀಶ್ವರಗೆರಗುತಂ ನಲೆ-
ದಾ ಪರಿಯ ಭಕ್ತಿಯ ಬೆಳಸಿಕೊಂಡರ್ ನುತಿಸಿ ಜನರು ।
ತಾಪಹರವಾಜ್ಞೆಯ ಶಿಷ್ಯನುರೆ
ಲೋಪವಿಲ್ಲದೆ ಪಡೆದಂಡಿಗೆಯ
ಪಾಪಹೀನಂ ಹುಬ್ಬಳ್ಳಿಗೊಯ್ದಿಲ್ಲವ ಮಾರಿದಂ ॥ ೧೯ ॥

ಬಹುಲಾಭಮಾಯಿತ್ತದರಿಂದೆ
ಸಹಜಮೆನೆ ತದ್ಭಕ್ತಿ ಬೆಳೆಯಿತು
ಮಹಿತನಂ ಪೊಗಳುತ್ತಲಿರ್ದರ್ ನೋಡಿ ಸಜ್ಜನರು ।
ಮಹದಾಶೆಯಿಂ ಸತ್ಪುರಾತನ
ಮಹಿಮೆಗಳ ನೆನೆಯುತ್ತವುಗಳೊಳ-
ಗಿಹ ವಿಶ್ವಾಸಮಂ ಬೆಳೆಸಿಕೊಂಡಿಹರೀ ಚರಿತದಿಂ ॥ ೨೦ ॥

ನೆನೆದ ಮಹಿಮೆಯನೊಂದನೊರೆವೆಂ
ಘನ ಮಹಾತ್ಮನ ಶರಣಬಸವನ
ವಿನುತ ಲೀಲೆಯದಿಂತಿಹುದು ಕೇಳಿರಿ ಸುಮನದಿಂದೆ ।
ಅನಘ ಶರಣನ ತಡೆದು ಕಳ್ಳರ್
ಧನವ ಬೇಡಿಹರದಕೆಂದನವ-
ನನುವರಿದೊಪ್ಪುತಂ ಮನೆಗೈದಿ ವಿತ್ತಮಂ ಕೊಂಡು ॥ ೨೧ ॥

ಬಂದನಾ ಶರಣಪ್ಪನಲ್ಲಿಗೆ
ಬಂದು ನಿಲಃವನಿತರೊಳಾ ಚೋರ-
ರಿಂದುಧರ ಸಮನಂ ನೋಡಿ ವಂದಿಸುತೆ ಕೊಂಡದನು |
ಛಂದದಿಂದದನಿಡಲೋಸುಗವೆ-
ಯೊಂದು ತಗ್ಗಂ ತೋಡುವಾಗೋಳ್
ಪಿಂದೆಕಂಡರ್ ಧನದ ರಾಶಿಯ ವಿಸ್ಮಯದೊಳಂದು || ೨೨ ||

ಎರಗುತ್ತಲಾ ಶರಣಬಸವೇ-
ಶ್ವರನಡಿಗೆ ಚೋರರ್ ದುಃಖಿಸುತ-
ಲೊರೆದರೆಂತೆನೆ ಭೋ ಮಹಾತ್ಮನೆ ನಿನ್ನ ಮಹಿಮೆಯನು |
ಅರಿಯದಾವ್ ನಿನ್ನಯ ದ್ರವ್ಯಮಂ
ನೆರೆ ಬೇಡಿದೆವು ಕ್ಷಮಿಸೈ ದೇವ
ಶರಣ ಭಕ್ತಿಯ ನೀಡಿ ಕಳವಿನುದ್ಯಮವ ಬಿಡಿಸೈ || ೨೩ ||

ಅವರೀ ಪ್ರಾರ್ಥನೆಗೆ ಮೆಚ್ಚುತ-
ಲವರಿಗಿಂತೊರೆದಂ ನಂದನರೆ
ತವೆಯನಗೆ ಸಂತಸಮಾಯಿತ್ತು ಸುಖಮಕ್ಕೆ ನಿಮಗೆ |
ಸವಿನುಡಿಯೊಳಿಂತಾಶೀರ್ವದಿಸಿ
ಶಿವಧರ್ಮಮಂ ಬೋಧಿಸಿದನಂ-
ದವರಾತನಂ ನೆನೆಯುತ್ತೆ ಸುಗುಣಿಗಳಾದರರಿಯೆ || ೨೪ ||

ಶರಣನುರು ದಾಸೋಹಕೆ ಧನವ
ನೆರೆ ಸಮರ್ಪಿಸಿದರ್ ದೊರೆದುದಂ
ಕರಮದು ಮತ್ತೆ ಬೆಳೆಯುತಿರ್ದತ್ತುರೆಯಧಿಕಮಾಗಿ |
ಚರಮೂರ್ತಿ ಈ ಮಹಿಮೆಯಿಂದಿದು
ನೆರೆ ಸತ್ಯಮಾಯಿತು ತಿಳಿಯಲ್ಕೆ
ಕರೆಕರೆದು ಪೇಳುತ್ತೆ ವರ್ಣಿಸುತಿರ್ದಪರ್ ಬಿಡದೆ || ೨೫ ||

ಮತ್ತವೊಂದುರು ಲೀಲೆಯಂ ಸಲೆ
ಚಿತ್ತವಿಟ್ಟಾಲಿಪುದು ಪೇಳ್ವೆಂ
ಸತ್ತಮನ ಮಂಶ್ರೋಡಿಯು ಸಿದ್ಧರಾಮನ ವಿರೋಧಿ।
ನುತ್ತನಹ ಸಿದ್ಧಪ್ಪನೆಂಬುವ
ನುತ್ತಮ ಗುಣವಿನಾಶಿಯಿರ್ದಂ
ಕಿತ್ತಡಿಯು ವರಶಿಷ್ಯನೆಂಬುದನವನಲಕ್ಷಿಸುತೆ ॥ ೨೬ ॥

ಸಿದ್ಧರಾಮಪ್ಪನ ಬಣವಿಗವ-
ನುದ್ಧರಣ ಕರ್ತನ ನಿಂದಿಸುತೆ
ಸಿದ್ಧನಾದಂ ಬೆಂಕಿಯನಿಕ್ಕಲಾ ಮೂಢಮತಿಯು।
ಶುದ್ಧವಹ ತತ್ಕೃಷಿಯ ಬಾಳನ-
ಬದ್ಧಗೊಳಿಸಲ್ಕಾ ಸಿದ್ಧಪಂ
ಬುದ್ಧಿಯೊಳ್ ನಿಶ್ಚಯಿಸುತೆ ಬಂದನೊಂದು ರಾತ್ರಿಯೊಳೆ ॥ ೨೭ ॥

ಆಗಳಾ ಚರಮೂರ್ತಿ ತದ್ಗೃಹ
ಭಾಗದ ಮುಂದಿನಾ ಕಟ್ಟೆಯೊಳ್
ರಾಗದಿಂ ಕುಳಿತಿರ್ದನವನೀ ಸಿದ್ಧಪನ ನೋಡಿ।
ಯೋಗದಿಂದವನಿಂಗಿತವನರಿ-
ದಾಗ ಸಿದ್ಧಪ್ಪನೆ ಭಾರೆಂದು
ಯೋಗಿ ಕರೆಯಲ್ ಬಂದು ನಮಿಸುತೆ ಕುಳಿತನಾ ಕಪಟಿ ॥ ೨೮ ॥

ಆವನಂ ನೋಡಿ ನುಡಿದನೆಂತೆನೆ
ಜವದೆ ಬಂದಿಹೆ ಸಿದ್ಧಯೇಕ-
ಯ್ಯವಸರದೆ ಪೋದಂ ಸಿದ್ಧರಾಮಂ ಪಿತ್ತಲದೊಳೆ।
ತವೆ ಸಮಾಧಾನದೆ ಕುಳ್ಳಿರೈ
ನವ ವಾರ್ತೆಯಂ ನಿನಗೆ ಪೇಳ್ವೆಂ
ಸುವಿನಯುದೆ ಕೇಳೆಂದು ಪೇಳಲ್ ತೊಡಗಿದಂ ಗುರುವು ॥ ೨೯ ॥

ವಿವಿಧ ದೇಶದ ವಾರ್ತೆಯು ಕೇಳ್ವ
ತವಕಂ ಪೆರ್ಚಿತಾ ಸಿದ್ಧಪನೊ-
ಳವಿನೀತನೊಳ್ ಬಣವಿಯು ಸುಡುವ ಬಯಕೆಯು ಪೆರ್ಚಿತು |
ತನೆ ಸಿದ್ಧರಾಮಪನನಿತರೊಳ್
ಭವನಕ್ಕೆ ಬಂದಾಗ ಸುದ್ದಿಗಳ
ಸುವಿನಯದೆ ಕೇಳುತ್ತೆ ಕುಳಿತು ಬಹುಭಕ್ತಿಯಿಂದೆ || ೩೦ ||

ಬಹುವಾಗಿ ಪೇಳ್ದೀಕ ಕಾಲದೆ
ಮಹಿತನಾ ಸಿದ್ಧಪ್ಪನ ನೋಡಿ
ಬಹಳ ಮಾತೇಕೆಲೆ ಸಿದ್ಧ ನಡೆ ನಿನ್ನ ಕೆಲಸಕ್ಕೆ |
ಬಹುಸಮಯಮಂ ಕಳೆಯಲಾಗದು
ಮಹದುರು ಕಾರ್ತಿಕಂ ಪಿತ್ತಲದೆ
ಸಹನೆಯಿಲ್ಲದೆ ನಡೆಯಲಿ ಬಣವಿಗಳ ಮಧ್ಯದಲ್ಲಿ || ೩೧ ||

ಬರುತಿಹೆವಾವೆನಲ್ ಸಿದ್ಧಪ್ಪ
ನುರೆ ಬೆದರಿ ತನ್ನಯ ಕೃತಿಗವಂ
ಪರಮ ಪಶ್ಚಾತ್ತಾಪವ ಪಡುತೆ ಸರ್ವಜ್ಞನೆಂದು |
ಅರಿದಾ ಗುರುವಿಗೆರಗುತಾತಂ
ಕರುಣಾಕರನೆ ಕ್ಷಮಿಸೆಂದವಗೆ
ನೆರೆಬೇಡಿದಂ ಬೆಂಕಿಯಿಕ್ಕುವ ಸಾಧನವ ಕೊಟ್ಟು || ೩೨ ||

ಗುರುವೊರೆದನಾತಂಗೆ ಪುತ್ರನೆ
ತರಮಲ್ಲಮಿದುಮಾರ್ಗ್ಗಂ ತಿಳಿಯ-
ಲುರೆ ಜನಂಗಳ್ಗಲ್ಲ ಹಾನಿಯು ಪಾಪಮಿದರಿಂದೆ |
ನೆರೆ ಸಂಘಟಿತಮಪ್ಪುದಾಗಳು-
ಮರಿಯೆ ಪಶುಗಳಪ್ಪದು ಕೇಡು
ತೊರೆವುದೆ ಲೇಸು ಕೆಟ್ಟಚಟಮಿದು ಲಾಭಮಿಲ್ಲೇನುಂ || ೩೩ ||

ಪಶುಗಳಾಹಾರವ ಸುಟ್ಟರೇಂ
ಯಶಮಹುದೆ ಪೇಳ್ನಿನ್ನ ವೈರಂ
ನಶಿಸುವದೇನು ಮತ್ತಾವ ರೀತಿಯ ಶಾಂತಿಯಹುದು ।
ವಶಮಹುದೆ ನಿನಗರಿಯವಿಭವಂ
ಶಶಿಧರನ ಕೃಪೆಯಹುದೆ ಜನತೆಯು–
ವೊಶಿದಹುದೆಂದು ಬಣ್ಣಿಪುದೆ ನಿನ್ನಯ ಚರಿತ್ರಮನೆ ॥ ೩೪ ॥

ಬಣವಿಗಳ್ ಸುಡುವಾಗ ಗಾಳಿಯ
ದಣಿಯರಂ ಬೀಸಿದಡೆ ನಿನ್ನಂ
ತಣಿಪ ಗೆಳೆಯರ ಬಣವಿಗಳ್ಸುಟ್ಟಡೆ ಮನ್ನಿಸುವರೆ ।
ಕುಣಿಯುತೂರಂ ಸುಟ್ಟಡಗ್ನಿಯು
ಗಣಿಸಲ್ದೊರೆಯುವದೆ ನಿನ್ನ ಮನೆ
ಗುಣಿಸಲ್ ನೀನೆ ಸುಟ್ಟವನೆಂದು ತಿಳಿಯಲುಳಿಯುವೆಯಾ ॥ ೩೫ ॥

ಪಾಪದೊಳಗಿದು ಘೋರಪಾಪಂ
ಪಾಪಮಿದು ನಿನಗೆಂದು ತಪ್ಪದು
ವೈಪರೀತ್ಯವ ಭಾವಿಸದಿರೆನ್ನಯ ಮಾತಿನಲ್ಲಿ ।
ಈ ಪರಿಯ ಭಾಷಣವನಾಲಿಸಿ
ಕೋಪವಿರಹಿತನಾಗಿ ನಮಿಸುತೆ
ಲೋಪವಿಲ್ಲದೆ ಚರಮೂರ್ತಿಯಂ ನುತಿಸತೊಡಂಗಿದಂ ॥ ೩೬ ॥

ದೇವ ದೇವ ಗುರೂತ್ತಮ ವಿಭವ
ಭಾವ ಭಾವ ಮಹತ್ತ್ವಮರುಭವ
ಜೀವ ಜೀವರ ಸತ್ತ್ವಮ ಹರವಶೀಕೃತಧೀಕ್ರಿಯ ।
ದೈವ ದೈವ ಕಲಾತ್ಮ ಪ್ರಭವ
ಶೈವ ಶೈವ ಸುಧರ್ಮ ಸಂಭವ
ಜಾವ ಜಾವಕೆ ಸತ್ತ್ವಮ ಗುಣವ ನೀಂ ಕರುಣಿಸು ಜೀಯಾ ॥ ೩೭ ॥

ಎಂದು ನಮಿಸುತೆ ಚರಮೂರ್ತಿಯಡಿ-
ಗಂದು ಮಣಿಯುತೆ ಸಿದ್ಧರಾಮಪ-
ಗಿಂದು ಮೌಳಿಯ ಲೀಲೆಯಂ ನುತಿಸುತೆ ಮನೆಗೈದಿದಂ |
ಕುಂದದೆ ಶೈವಯೋಗ ನಿದ್ರೆಯೊ-
ಳಂದದೆ ಬೆರೆದನಾ ಗುರುವರಂ
ಛಂದದಿಂ ಸದ್ಭಕ್ತನಾದಂ ಸಿದ್ಧರಾಮಪನು || ೩೮ ||

ಗದುಗಿನೋಳ್ ಪಂಚಾಕ್ಷರ ನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತ ಯೋಗಸಮಾಧಿಯುದಲ್ಲಿ
ಮುದದೆ ಬರೆದ ಪುರಾಣದೋಳ್ ಪದಿನೈದನೆಯ ಸಂಧಿ || ೩೯ ||

**ಅಂತು**

**ಸಂಧಿ ಹದಿನೈದಕ್ಕಂ ಪದಗಳು ಏಳುನೂರ್ದಾ ಎಂಭತ್ತೊಂದಕ್ಕಂ**

**ಮಂಗಲಂ**



# ಹದಿನಾರನೆಯ ಸಂಧಿಯು

ಮುರುಘಯ್ಯನೆಂಬುವ ಮಾಹೇಶ-
ಗುರುರೋಗ ಸೂಚನೆಯ ಗೆಯ್ಯುತೆ
ಪರಿಹಾರ ಮಾರ್ಗವ ತೋರಿದಂ ಬಡತನವ ಕಳೆದು ॥ ಪಲ್ಲ ॥

ಹರಿಯಜರೊಳುರು ಕಲಹವನೀಯ
ನೆರೆ ಪುಟ್ಟಿಸುತೆ ಲಿಂಗರೂಪವ
ಧರಿಸುತುದ್ಭವಿಸುತ್ತೆ ಪೊರೆದಂತೆನ್ನ ಪೊರೆಯಲ್ಕೆ ।
ನೆರೆ ಎನ್ನ ಮಸ್ತಕದಿಂದಲುರೆ
ಪೊರಮಟ್ಟು ಗುರುಯೋಗಶಕ್ತಿಯ-
ನುರುತರೇಪ್ಸುಸುಲಿಂಗದೊಳ್ನೆಲಿಸಿದೆಯಲ್ತೆ ಶಿವನೆ ॥ ೧ ॥

ಮೆರೆವ ಗಂಜೀಗಟ್ಟೆಯೊಳ್ಳೋರ್ವ
ಮುರುಘಶೌರ್ಯ ನಾಮಕ ಮಾಹೇಶ-
ನುರು ಬೃಹನ್ಮಠದೊಡೆಯನತಿ ಶಾಂತಂ ಮಹಾ ಗುಣಿಯು।
ನೆರೆ ಸುಶೀಲಂ ಪರಮಾಚಾರ್ಯ-
ನರಿವಿಗಾಶ್ರಯಮಿತ್ತು ನಿಖಿಲರಿ-
ಗರಿದೆನಲ್ಪ್ರಿಯನಾಗಿ ಬಾಳುತಲಿರ್ದ್ದಂ ವಿವೇಕಿ ॥ ೨ ॥

ಈತನುರೆ ಬಡವಂ ಮತಿಯುತಂ
ಖ್ಯಾತನಾಗಿರ್ದ್ದಂ ಜ್ಯೋತಿಷ್ಯ
ಪೂತ ವೈದಿಕ ವಿದ್ಯೆಗಳಲ್ಲಿ ನಿಷ್ಣಾತನೆನಿಸಿ।
ನೀತಿ ಶಾಸ್ತ್ರದೆ ಬಲ್ಲಿದನಾಗು-
ತೋತು ದೈನ್ಯವ ಕಳೆದುಕೊಂಡಂ
ಪ್ರೀತಿಯಂ ಸಂಪಾದಿಸುತೆ ತದ್ಗ್ರಾಮದ ಜನತೆಯ ॥ ೩ ॥

ಜನರೆಲ್ಲರೀತನೋಳ್ ಪ್ರಾರ್ಥಿಸು-
ತನುದಿನಂ ತಮ್ಮಯ ಮಕ್ಕಳಂ
ವಿನಯದಿಂ ಕಳಿಸುತ್ತಿರ್ದ್ದರವನವರಿಗೊಲಿಯುತ್ತೆ।
ಅನುನಯದೆ ಪ್ರಾಥಮಿಕ ವಿದ್ಯೆಯ
ತನಯರೆಂದರಿಯುತ್ತೆ ಕಲಿಸುವ-
ನನುವರಿದು ಧನಧಾನ್ಯಂಗಳಂ ಕೊಡುತಿಹರ್ಮುದದೆ ॥ ೪ ॥

ಸುತ್ತಣ ಗ್ರಾಮ ಜನರಾದಡುಂ
ಚಿತ್ತಮದು ಮೆರ್ಚ್ಚುತಿರೆ ತಮ್ಮಯ
ಸೂತ್ತಮ ಪುತ್ರರಂ ವಿದ್ಯೆಯಂ ಕಲಿಯಲ್ಕೆ ನಯದೆ।
ಸತ್ತಮನ ಬಳಿಯಲ್ಲಿ ತಂದಿರಿ
ಸುತ್ತಲಿರ್ದ್ದರ್ ಧನಧಾನ್ಯಗಳ
ಪೊತ್ತವರಿದೀಯುತ್ತಲಿರ್ದ್ದರ್ ಭಕ್ತಿ ಭಾವದಲಿ ॥ ೫ ॥

ಈತನ ಭಕ್ತಿ ಭಾವಕೆ ಮೆಚ್ಚಿ
ಖ್ಯಾತನಹ ಚರಮೂರ್ತಿಯಿವನುರು
ಪೂತ ಶಾಲೆಗವೊಲೆದು ಮನೆಗಂ ಪೋಗುತಲಿರ್ದನು |
ಪ್ರೀತಿಯಿಂದಾ ಬಾಲಕರೊಡನೆ
ನೀತಿಯೊಳಾಟವಾಡುತಿರ್ದಂ
ರೀತಿಯ ಮರೆತು ಜಗಳವಾಡುತಲಿರ್ದನೋರೋರ್ಮೆ ‖ ೬ ‖

ಒಂದು ದಿನಮಾ ಮುರಿಘಯ್ಯನಿದಿರೊ-
ಳೊಂದಿ ಬಾಲರ ಪುಸ್ತಕಂಗಳ
ನಂದದೆ ಪಾಟಗಳನಯ್ಯನ ಕಡೆಗೊಗೆಯುತಿರ್ದಂ |
ಛಂದದೆ ಕುಳಿತ ಹುಡುಗರ ಹೊಡೆವ
ನಂದದೆ ನಟಿಸಲದನರಿಯದಲೆ
ಕಂದಿ ಮುರುಘಾರ್ಯಂ ಚುಳಿಕಿಯಿಂ ಗುರುವಿಗೆ ಹೊಡೆಯಲು ‖ ೭ ‖

ಆ ಕ್ಷಣದೆ ಬಾಸಳಂ ಮೂಡಿದು-
ದೀಕ್ಷಿಸದೆ ಚರಮೂರ್ತಿಯೋಡಿದ-
ನೀಕ್ಷಿಸುತೆ ಮರಗುತೆ ಮುರುಘಯ್ಯನೈದಿ ಸ್ವಾಲಯಕೆ |
ಲಕ್ಷಿಸಿ ಪುಡುಕಿದೊಡುಮಾ ಗುರುವು-
ವೀಕ್ಷಕಂಗುರೆ ದೊರೆಯಲಿಲ್ಲಂ
ಭಿಕ್ಷುವಲ್ಲಿಗೆ ಬಹುದಿನಗಳೊರೆಗುಂ ಬಾರದಾದಂ ‖ ೮ ‖

ಕೆಲ ದಿನಂಗಳ ನಂತರದಲ್ಲಿ
ಸಲೆ ಕನ್ನಡದ ಸಾಹಿತ್ಯದೊಳ-
ಗಲಘು ಪಾಂಡಿತ್ಯಮುದೊದಗಿಹುದು ಮುರುಘಾರ್ಯಗಾಗ |
ಚಲಿಸದಾಲೋಚಿಸಿ ತಿಳಿದನಿಂ-
ತೊಲೆದು ಬಾಲರ ಪುಸ್ತಕ ಪಾಟ-
ಗಳನೆನ್ನ ಕಡೆಗೆಸೆದ ಲೀಲೆಯಿದೆಂದು ಮನದಲ್ಲಿ ‖ ೯ ‖

ಮತ್ತೆ ಫಲವು ದಿನಂಗಳೊಳ್ಬೆ-
ನ್ನೊತ್ತಿ ಭಾಯುತೆ ಬಾಸಳಮಲ್ಲಿ
ಕೆತ್ತಿದಂತಿರೆ ರೋಗಮದುಮಾವೌಷಧದಿಂದಲುಂ ।
ಬಿತ್ತರಿಸಿದ ಗುಣಮಾಗದಿರುತಿರೆ
ಕುತ್ತದಿಂದಡಸಿತು ಚಿಂತೆಯದು
ತತ್ತರಿಸಿದನುಪಾಯ ಗಾಣದೆ ಸಹಿಸಿ ಕೊಂಡಿಹನು ॥ ೧೦ ॥

ಶಂಭುಲಿಂಗಾಖ್ಯ ಚರಮೂರ್ತಿ
ಶಂಭುವಿನಲ್ಲಿ ಬೆರೆದ ಬೆಳಿಕಂ
ಶಂಭುಸಮ ಶಿವಯೋಗಿಯೋರ್ವನ ಸಂದೇಶದಂತೆ ।
ಶಾಂಭವಯೋಗ ಗುರು ಸಮಾಧಿಗೆ
ಶಾಂಭವ ಭಕ್ತಿಯಂ ಸಮರ್ಪಿಸಿ
ಶಾಂಭವ ಧೂಪದಾರತಿಯೊಳಿಹ ಭಸ್ಮವ ಕೊಳ್ಳುತೆ ॥ ೧೧ ॥

ರೋಗವಿಮುಕ್ತನಾದಂ ನೋಡಿ
ಯೋಗಿಗಳ್ ಮರುಘಾರ್ಯ ಸುಕೃತವ
ರಾಗದಿಂಡಿಂತುರೆ ಬಣ್ಣಿಸುತನಿರ್ದರ್ ತಿಳಿಯುತೆ ।
ಆಗಳುಂ ಬಿಡದೀ ಕುತ್ತಮಂ
ವೇಗದಿಂ ಬಿಡಿಸಲ್ಕೆ ತಾಂ ಶಿವ-
ಯೋಗಿಯಾಗುತೆ ಬಂದನಾ ಲಿಂಗೈಕ್ಯ ಚರಮೂರ್ತಿ ॥ ೧೨ ॥

ಏನು ತಪ್ಪುಪೆಯಿದು ಚುಳಕಿಯಿಂ-
ದೂನಮುಳಿವಂತುರೆ ಬಡಿದುದಂ
ಸ್ವಾನುರಾಗದೆ ಲಕ್ಷಿಸದದಂ ದೈವದಿಂ ಬಂದಂ ।
ಹೀನರೋಗವ ಪರಿಹರಿಸಲ್ಕ-
ನೂನ ಲೀಲೆಯ ತೋರಿದನಿದಂ
ಮಾನವನಲ್ಲವಿವನೆ ಶಿವನೆಂದಲ್ಲಿ ಬಣ್ಣಿಪರು ॥ ೧೩ ॥

ಈತನ ಭಕ್ತಿ ಭಾವಕೆ ಮೆಚ್ಚಿ
ಖ್ಯಾತನಹ ಚರಮೂರ್ತಿಯಿವನುರು
ಪೂತ ಶಾಲೆಗಮೊಲಿದು ಮನೆಗಂ ಪೋಗುತಲಿರ್ದನು |
ಪ್ರೀತಿಯಿಂದಾ ಬಾಲಕರೊಡನೆ
ನೀತಿಯೊಳಾಟವಾಡುತಿರ್ದಂ
ರೀತಿಯ ಮರೆತು ಜಗಳವಾಡುತಲಿರ್ದನೋರೋರ್ಮೆ || ೬ ||

ಒಂದು ದಿನವಮಾ ಮುರಿಘಯ್ಯನಿದಿರೊ-
ಳೊಂದಿ ಬಾಲರ ಪುಸ್ತಕಂಗಳ
ನಂದದೆ ಪಾಟಿಗಳನಯ್ಯನ ಕಡೆಗೊಗೆಯುತಿರ್ದಂ |
ಛಂದದೆ ಕುಳಿತ ಹುಡುಗರ ಹೊಡೆವ
ನಂದದೆ ನಟಿಸಲದನರಿಯ:ದಲೆ
ಕಂದಿ ಮುರುಘಾರ್ಯಂ ಚುಳಿಕಿಯಿಂ ಗುರುವಿಗೆ ಹೊಡೆಯಲು || ೭ ||

ಆ ಕ್ಷಣದೆ ಬಾಸಳಂ ಮೂಡಿದು-
ದೀಕ್ಷಿಸದೆ ಚರಮೂರ್ತಿಯೋಡಿದ-
ನೀಕ್ಷಿಸುತೆ ಮರಗುತೆ ಮುರುಘಯ್ಯನೈದಿ ಸ್ವಾಲಯಕೆ |
ಲಕ್ಷಿಸಿ ಪುಡುಕಿದೊಡುಮಾ ಗುರುವು-
ವೀಕ್ಷಕಂಗುರೆ ದೊರೆಯಲಿಲ್ಲಂ
ಭಿಕ್ಷುವಲ್ಲಿಗೆ ಬಹುದಿನಗಳೊರೆಗುಂ ಬಾರದಾದಂ || ೮ ||

ಕೆಲ ದಿನಂಗಳ ನಂತರದಲ್ಲಿ
ಸಲೆ ಕನ್ನಡದ ಸಾಹಿತ್ಯದೊಳ-
ಗಲಘು ಪಾಂಡಿತ್ಯಮುದೊದಗಿಹುದು ಮುರುಘಾರ್ಯಗಾಗ |
ಚಲಿಸದಾಲೋಚಿಸಿ ತಿಳಿದನಿಂ-
ತೊಲೆದು ಬಾಲರ ಪುಸ್ತಕ ಪಾಟಿ-
ಗಳನೆನ್ನ ಕಡೆಗೆಸೆದ ಲೀಲೆಯಿದೆಂದು ಮನದಲ್ಲಿ || ೯ ||

ಮತ್ತೆ ಫಲವು ದಿನಂಗಳೊಳ್ ಬೆ-
ನ್ನೊತ್ತಿ ಭಾಯುತೆ ಬಾಸಳಮಲ್ಲಿ
ಕೆತ್ತಿದಂತಿರೆ ರೋಗಮದುವಾವೌಷಧದಿಂದಲುಂ ।
ಬಿತ್ತರಿಸಿದ ಗುಣವಾಗದಿರುತಿರೆ
ಕುತ್ತದಿಂದಡಸಿತು ಚಿಂತೆಯದು
ಠತ್ತರಿಸಿದನುಪಾಯ ಗಾಣದೆ ಸಹಿಸಿ ಕೊಂಡಿಹನು ॥ ೧೦ ॥

ಶಂಭುಲಿಂಗಾಖ್ಯ ಚರಮೂರ್ತಿ
ಶಂಭುವಿನಲ್ಲಿ ಬೆರೆದ ಬೆಳಕಂ
ಶಂಭುಸಮ ಶಿವಯೋಗಿಯೋರ್ವನ ಸಂದೇಶದಂತೆ ।
ಶಾಂಭವಯೋಗ ಗುರು ಸಮಾಧಿಗೆ
ಶಾಂಭವ ಭಕ್ತಿಯಂ ಸಮರ್ಪಿಸಿ
ಶಾಂಭವ ಧೂಪದಾರತಿಯೊಳಿಹ ಭಸ್ಮವ ಕೊಳ್ಳುತೆ ॥ ೧೧ ॥

ರೋಗವಿಮುಕ್ತನಾದಂ ನೋಡಿ
ಯೋಗಿಗಳ್ ಮರುಘಾರ್‍ಯ ಸುಕೃತವ
ರಾಗದಿಂಡಿಂತುರೆ ಬಣ್ಣಿಸುತನಿರ್ದರ್ ತಿಳಿಯುತೆ ।
ಆಗಳುಂ ಬಿಡದೀ ಕುತ್ತಮಂ
ವೇಗದಿಂ ಬಿಡಿಸಲ್ಕೆ ತಾಂ ಶಿವ-
ಯೋಗಿಯಾಗುತೆ ಬಂದನಾ ಲಿಂಗೈಕ್ಯ ಚರಮೂರ್ತಿ ॥ ೧೨ ॥

ಏನು ತಪ್ಪುಪೆಯಿದು ಚುಳಕಿಯಿಂ-
ದೂನಮುಳಿವಂತುರೆ ಬಡಿದುದಂ
ಸ್ವಾನುರಾಗದೆ ಲಕ್ಷಿಸದದಂ ದೈವದಿಂ ಬಂದಂ ।
ಹೀನರೋಗವ ಪರಿಹರಿಸಲ್ಕ-
ನೂನ ಲೀಲೆಯ ತೋರಿದನಿದಂ
ಮಾನವನಲ್ಲಮಿವನೆ ಶಿವನೆಂದಲ್ಲಿ ಬಣ್ಣಿಪರು ॥ ೧೩ ॥

ಪರಶಿವನೆ ಶಿವಯೋಗಿಯಾಗುತೆ
ಪರಮ ಚರಮೂರ್ತಿಯ ಶಿವಯೋಗ
ವರ ಸಮಾಧಿಯ ಮಹಿಮೆಯಂ ತೋರಿದನಲ್ಲದಿನ್ನು ।
ಪರರಾರು ಬರ್ಪರ್ಮುರುಘೆಯಂ
ಮರೆದು ಬಡೆಯುತೆ ಮರುಗಿದನದರ
ಪರಿಣಾಮಮಿರಲಹುದೆಂದು ನುತಿಸಿದರ್ತಿಳಿದವರು ॥ ೧೪ ॥

ಭಕ್ತರಾಲಿಪುದಿನ್ನೊಂದು ಬಹು
ಶಕ್ತನಾಗಿಹ ಶಂಭುಲಿಂಗನ
ಸೂಕ್ತಮಾಗಿಹ ಲೀಲೆಯದು ಬಿತ್ತರದೆ ಜರುಗಿಹುದು ।
ವ್ಯಕ್ತಮಾಗಿಹುದೆಂತೆನೆ ದೀನ
ರಕ್ತನಹ ಮುರುಘಾರ್ಯಂ ದೈನ್ಯ
ಮುಕ್ತನಾಗಲ್ ಯೋಚಿಸುತಿರ್ದನಾಗಳುಂ ತಾನುಂ ॥ ೧೫ ॥

ಪಿರಿಯ ಮಠದವನಾದ ಮುರುಘೆಯ-
ನರಿದವಂ ವಿದ್ಯಾವಂತನುಂ
ಸರಿದೊರೆಯಿಲ್ಲಮೀತಂಗೆಂದು ಪೆಸರ್ವಡೆದಿರ್ದಡುಂ ।
ಗುರುವಾಗಿರ್ದಡುಂ ಸಕಲರ್ಗೆ
ಮೆರೆ ದರಿದ್ರತೆ ಕಾಡುತಲಿರ್ದು-
ದರಿಯಲದು ತದ್ಗುರು ಲೀಲೆಯಿಂ ತೊಲಗಿದುದೆಂತೆನೆ ॥ ೧೬ ॥

ಈ ಮುರುಘಾರ್ಯನುರೆ ಸ್ನೇಹಿತಂ
ನೇಮದಿಂ ಪಂಚಾಳ ಮತೀಯ-
ನಾ ಮನೋಜ್ಞನ ನಾಮಮಿರ್ದುದು ಬಾಳಪ್ಪನೆಂದು ।
ಶ್ರೀಮದೂರ್ಜಿತನಿರ್ದನೀತಂ
ಪ್ರೇಮಿಗಳಿರ್ದರಿವನಾಪ್ತರುರೆ
ರಾಮಣೀಯಕನೆನಿಸಿಹನಿವಂ ಮನೆಯ ಜನರಲ್ಲಿ ॥ ೧೭ ॥

ಈತನೀ ಮುರುಘಾರ್‍ಯನ ಮಠದೊ-
ಳಾತನೊಡನಿಸ್ಪೇಟಿನಾಟವ
ಖ್ಯಾತಿಯಿಂದಾಡುತಲಿರ್ದನದನೊಂದು ದಿನದಲ್ಲಿ ।
ಭೂತಪತಿ ಸಮನರಿದಲ್ಲಿ ಗೈ-
ದೀ ತೆರದೊಳಾನುಂ ನಿಮ್ಮೊಡನೆ
ಸಾತಿಶಯ ರಾಗದೊಳಾಡುವೇಂ ಕರೆದು ಕೊಳ್ಳುವದು ॥ ೧೮ ॥

ನುಡಿಯುತೀ ಪರಿ ತಾನುವಾಗವ-
ರೊಡನಾಡಲುರೆ ಬೇಡೆಂದಡುಂ
ವೃಡರೂಪಿ ಚರಮೂರ್ತಿ ಕುಳಿತಂ ಶಂಭ.ಲಿಂಗಾಖ್ಯಂ ।
ನಡುವೆ ಕಲಹಂ ಬರಬಾರದೆನು-
ತೊಡನೆ ನುಡಿಯುವ ಮುರುಘಾರ್‍ಯಂಗೆ
ತಡೆಯುದಾಗಲೆನುತ್ತುತ್ತರಿಸುತಾಡ ತೊಡಗಿದನು ॥ ೧೯ ॥

ಒಂದು ಕ್ಷಣ ಕಾಲಂಬರ ಮಾಡಿ
ಕುಂದದೆ ಕಲಹಮುಂ ಬೆಳೆಯಿಸುತೆ
ಕಂದದಿಸ್ಪೇಟುಗಳ ಕಸೆಯುತೆ ಸೂರೆಗಯ್ಯುತಿರೆ ॥
ನೊಂದದನೀಕ್ಷಿಸುತೆ ಮುರುಘಯ್ಯ-
ನಂದು ಪೇಳ್ದಂ ಹೋಗು ಚರಂತಿ-
ಯೆಂದಿಗುಂ ಬರಬೇಡಿಲ್ಲಿಗೆನಲವನೆಂದನಿಂತು ॥ ೨೦ ॥

ಅವಳಿರುವನಕಮಾಂ ಬರುವವನೆ
ಜವದೊಳಾಲಿಸಿ ಮರುಘಯನೊರೆದ-
ನವಿರತಂ ಕಾಲ್ಗೆರಗುವೇಂ ಪೋಗೈ ಮಹಾರಾಯಾ ।
ತವೆ ಗುರುವೆಂದನೀ ನುಡಿಯರಿಯು-
ತವಳೆ ಪೋದಡನೆನ್ನಡಿಗಳ್ಗೆ
ಸುವಿನಯದೆ ನೀನೆರಗೆ ಯೆರಗುವೆ ಯೆನುತೆ ಪೋದನವಂ ॥ ೨೧ ॥

ಅಂದಿನಿಂ ತದ್ದಾರಿದ್ರ್ಯಮುರೆ
ಛಂಡದಿಂ ಕಾಲ್ದೆಗೆಯಲಾದುದು
ಮಂದತನಮದು ಸರಿದು ಮುರಘಾರ್ಯಂ ಭಕ್ತನಾದಂ।
ಮುಂದೆ ಗುರುವು ಶಿವೈಕ್ಯನಾದಡು-
ಮಂದಿನ ಭಕ್ತಿ ನೆರೆ ಬೆಳೆಯುತಂ
ಕುಂದದೆ ತತ್ಸಮಾಧಿಗೆ ಪೋಗಿ ಬರುತಿರ್ದನೆರಗಿ ॥ ೨೨ ॥

ನಿತ್ಯದೊಳವಂ ಪ್ರಾರ್ಥಿಪನಿಂತು
ಸತ್ಯಮೂರ್ತಿಯೆ ನಿನ್ನನಾಮ್ನೆರೆ
ಮರ್ತ್ಯನೆಂದರಿಯುತ್ತೆ ಬಯ್ಯುತೆ ಪೊಡೆಯುತಿರ್ದೆನದಂ ।
ಸತ್ಯಮಾಗಿಯೆ ಮರೆಯುತ್ತೆ ನೀಂ
ಸ್ತುತ್ಯನೆನಿಸಿದೆ ದೈನ್ಯವ ಕಳೆದು
ಪ್ರತ್ಯಗಾತ್ಮನೆ ನಿನಗಿಲ್ಲ ಸಮರೆಂದು ನುತಿಸುವನು ॥ ೨೩ ॥

ಇಂತು ಪ್ರಾರ್ಥಿಸುತುರು ಭಕ್ತಿಯಿಂ
ಶಾಂತಿಯಂ ಕಂಡಿಹನುದ್ಯಮವ
ಭ್ರಾಂತಿಯನಳಿದು ಗೆಯ್ಯುತಲಿರ್ದನಾ ಮುರುಘಯ್ಯನು ।
ಶಾಂತನಹ ಚರಮೂರ್ತಿಯ ನೆನೆದು
ಚಿಂತೆಯದೆಲ್ಲಮಂ ನೀಗಿದಂ
ಸಂತಸದೊಳೆಲ್ಲರ್ ಬಣ್ಣಿಸಿದರೀ ಲೀಲೆಯನುರೆ ॥ ೨೪ ॥

ಬಯ್ದಡುಂ ಬಡಿದಡುಂ ನಿಂದೆಯ
ಗೆಯ್ದಡುಂ ಜನತೆಗೆ ಸೌಖ್ಯಮಂ
ಗೆಯ್ದಪಂ ತಾನ್ಲಿಂಗೈಕ್ಯನಾಗಿರ್ದಡುಂ ಸತತಂ ।
ಮೋದದಿಂ ವಿಸ್ಮಯ ಭಾವದಿಂ
ವೇದನುತನಂ ಬಣ್ಣಿಸುತಿರ್ದ-
ರಾದರದಿಂದೆ ಸರ್ವ ಜನರದನೇನು ಬಣ್ಣಿಪೆನು ॥ ೨೫ ॥

ಗದುಗಿನೊೞ್ ಪಂಚಾಕ್ಷರನಗರ-
ಮುದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು ।
ಪದುಳ್ದಿನ್ನ ಪಂಚಾಕ್ಷರ ಗುರುವಿ-
ನುದಿತಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೊೞ್ ಪದಿನಾರನೆಯ ಸಂಧಿ ॥ ೨೬ ॥

ಅಂತು
ಸಂಧಿ ಹದಿನಾರಕ್ಕಂ ಪದಗಳು ಎಂಟುನೂರ್ಡಾಪಿಳಕ್ಕಂ
ಮಂಗಲಂ



# ಹದಿನೇಳನೆಯ ಸಂಧಿಯು

ಬಾಳಪ್ಪಂಗಶುಭ ಸೂಚನೆಯ
ತಾಳುತ್ತೆ ಕೋಪವ ತೋರಿದಂ
ಬಾಳಾಕ್ಷ ಸಮನಾ ಮುರುಘಾರ್ಯಗುಭಯ ಸೂಚನೆಯ ॥ಪಲ್ಲ॥

ಶಿವನೆ ಚಳಿಮಳೆ ಬೇಸಿಗೆಗಳಂ
ತವೆ ಹಿತಕ್ಕಾಗಿಯೆ ಸೃಷ್ಟಿಸಿದೆ
ಕವಿದ ಹಿತಮೇಕವುಗಳೊಳ್ ತೋರ್ಪುದೊ ನಾನರಿಯೆನು ।
ಭುವನದೊಳ್ ಸಮನಾಗಿ ತಿಳಿವುದೆ
ಶಿವಯೋಗಿಗಳ್ ಯೋಗವೆನಃತೊರೆ-
ಯುವರೆನಗಧಂ ನೀನರುಹು ಗುರುವಾಗಿ ಬಂದೀಶ ॥ ೧ ॥

ನೆಲವ ಮೇಲುಪ್ಪರಿಗೆಯು ಮಣಿಯು
ಶಿಲೆಯುನೊಂದಾಗಿಯೆ ತಿಳಿಯುವಿ
ಕಲೆಯಿರ್ದುದಾ ಶಂಭುಲಿಂಗಾಹ್ವಯ ಚರಮೂರ್ತಿಯೊಳ್ |
ಫಲದಾಶೆಯಿಲ್ಲದೆ ಜನರೊಡನೆ
ಛಲದಿಂದೆ ಗೆಳೆತನವ ಮಾಡುವ-
ಚಲಗುಣಂ ತನ್ಮಹಿಮನೊಳಿರ್ದುದೇನೆಂಬೆನಹಹ || ೨ ||

ಪಾಪ ಪುಣ್ಯಗಳವುಮಿಲ್ಲಮುರೆ
ಪಾಪಿಯಾಗುವ ನೆಲವುಯೆಂದೊಡೆ
ತಾಪವನಳಿಪ ಪುಣ್ಯಮೊದಗುವದಯ್ಯ ಎಂದೆನಲು |
ಲೋಪವಿಲ್ಲದ ಬಸವ ವಚನವ
ಕೋಪ ವಿರಹಿತನರಿಯುತಂ ನಿ-
ರ್ಲೇಪನಾಗಿಯೆ ಚರಿಸುತಿರ್ದಂ ಜನಹಿತಕಾಗಿಯೆ || ೩ ||

ವಿಹಿತಂ ನಿಷಿದ್ಧಂ ಶಾಸ್ತ್ರದೊಳ್
ಗಹನಕರ್ಮಮದೆರಡು ವಿಧಮಹು-
ದಿಹದಲ್ಲಿ ತಿಳಿದಾಚರಿಸುವದೆ ನರ ಕರ್ತವ್ಯವು |
ಮಹಿತನಾಗುವನುರೆ ನಿಷಿದ್ಧವ-
ನಹಿತಮೆನೆ ಶಾಂತರ್‌ತ್ಯಜಿಸುವಂ
ಮಹಿಮರೊಪ್ಪಲ್ ವಿಹಿತಮುಂ ಚರಿಸುವಂ ಸುಖಕಾಗಿ || ೪ ||

ಎಂದು ಬೋಧಿಸುತಿರ್ದನೀತಂ
ಛಂದದಿಂ ತಾನೆರಡುಕರ್ಮವ-
ನೆಂದಿಗುಂ ಗೆಯ್ಯುತಲಿರ್ದಪಂ ಜನಹಿತಕಾಗಿಯೆ |
ಆಂದದಿಂ ನಿರ್ಲಿಪ್ತನಪ್ಪಂ
ಬಂದ ಫಲಗಳನಾವಾವ ಜನ-
ರೊಂದರಿಂದೊಂದಂ ಪಡೆಯುವರ್ ಪ್ರತಿದಿನದಲ್ಲಿಯೆ || ೫ ||

ಒರ್ಮೆ ಬಿನದದೆ ರಾಡಿಮಣ್ಣಿಂ
ಪರ್ಮೆಯಿಂ ಕಲೆಸುತ್ತೆ ತಂದದ-
ನೊರ್ಮೆಗಂ ಮುರುಘಾರ್ಯನ ಮೇಲೆ ಚೆಲ್ಲುತಲಾತನ |
ಕೂರ್ಮೆಯಿಂದಂಗಕೆ ಮೆತ್ತುವಂ
ಶರ್ಮಕರನೀ ಲೀಲೆಯ ಕಂಡು
ನೆರ್ಮ ನಗುತಿರ್ದಂ ಮುರುಘಯಂ ತನ್ನ ಮನೆಯಲ್ಲಿ || ೬ ||

ಆ ಮುರುಘಯನ ಸನಿಹದೊಳಿರ್ದ
ಪ್ರೇಮಿ ಬಾಳಪ್ಪನ ವಸ್ತ್ರಕದು
ನೇಮದಿಂ ಸಿಡಿಯುತಿರಲಾತಂ ಕೋಪದೊಳೇಳುತೆ |
ಸೋಮಧರ ರೂಪಿಗೆ ಕೆರದಿನಾ
ಧಾಮದಲ್ಲೆಸೆಯುತಿರಲದು ಸಲೆ
ಈ ಮಹಿಮಂಗೆ ತಪ್ಪುತಿರಲೋಡಿದನು ಬಾಳಪನು || ೭ ||

ಓಡುತಂ ಮುರುಘಯನ ಮನೆಯೋಳ್
ಕೂಡುತಂ ಮುರುಘಾರ್ಯನೊಡನೆಯೆ
ಕೂಡೆ ಕೋಣೆಯೊಳ್ಪೆದುತಡಗಿದನವಂ ಬೆದರುತಲೆ |
ಕಾಡುವನೆಂದು ಕದವ ಮುಚ್ಚುತೆ
ನೋಡಿ ಭದ್ರಂಗೊಳಿಸುತಿರೆ ಗುರು-
ವೋಡಿ ಬಂದಾ ಕದವನೊದೆಯಲ್ ಮುರಿದುದಾಗಳದು || ೮ ||

ಅದನೀಕ್ಷಿಸುತಲಾ ಬಾಳಪಂ
ಬೆದರ್ದೋಡಿದಂ ತನ್ನಾಲಯಕೆ
ಬೆದರಿ ಮುರುಘಯನಲ್ಲಿಯೆ ನಡುಗುತಲಡಂಗಿರ್ದನು |
ಸದಮಲಾಂಗಂ ನಿಂದು ಕ್ಷಣಾರ್ಧ-
ಮೊದವಿದ ಕೋಪದಿಂದಲೆತ್ತಲೊ
ಪೊದೆದೀಕ್ಷಿಸುತಲೋಡಿದಂ ಚರಮೂರ್ತಿ ಗುನುಗುಟ್ಟೆ || ೯ ||

ಕೆರುವಿನಿಂ ತಾಡಿಸಿದ ತಪ್ಪಿಂ-
ಗುರೆ ಬಾಳಪನ ಕಣ್ಗಳ್ಪೋಗಿ
ನೆರೆ ಸಹಿಸಲಸದಳಮಾದ ಕಷ್ಟವ ಭೋಗಿಸಿದನು ।
ಕರಮಾವೌಷಧವ ಕೊಂಡಡುಂ
ವರದೇವರ್ಗ್ಗೆ ನಡೆಕೊಂಡೊಡುಂ
ಬರಲಿಲ್ಲಮಾತನ ನೇತ್ರಂಗಳೇನಂ ಗೈದಡುಂ ॥ ೧೧ ॥

ಏನು ಮಾಡಿದಡುಂ ಬಾಳಪಗೆ
ಮಾನಿತಗೆ ವ್ಯಥೆಯಳಿಯಲಿಲ್ಲಂ
ತಾನೆ ಚಿಂತೆಯ ಚಿತೆಯಲ್ಲಿ ಬೇಯುತ್ತೆ ಮಡಿದನವಂ ।
ನೂನವೆನಲಾತನ ಸಂಪದಂ
ಮಾನವರ್ ತಿಳಿಯಲ್ಕೆ ಪೋದುದು
ಜ್ಞಾನಿಗಳ್ ತಿಳಿದರ್ರಾಡಿ ಸಿಡಿದುದರಿಂದಲೆಂದು ॥ ೧೨ ॥

ಮುರುಘೆಯುಗೆ ರಾಡಿಯ ಮೆತ್ತಿದುರೆ
ಪರಿಣಾಮದಿಂದಾತಂಗವನ
ನೆರೆ ಪುತ್ರರಾ ಪೀಡೆ ತಪ್ಪದಲಿರ್ದ್ದಪುದು ಸತತಂ ।
ಉರೆ ಭಾಗಿಲದ ಕದಮಂ ಗುರುವು
ಮುರಿದುದಂ ಸರಿಪಡಿಸುವದಾರ್ಗ್ಗ-
ಮರಿಯೆ ಸಾಧಿಸಲಿಲ್ಲ ಸರಿಪಡಿಸಿದೊಡಿತ್ತು ಹಾನಿ ॥ ೧೩ ॥

ಇದನರಿಂದ ಸುಜನರ್ಕಳೀತನ
ಪದುಳ್ದ್ದ ಲೀಲೆಯ ನುತಿಸುತಿರ್ದ್ದರ್
ಪದಪಿಂದದೆಂತೆನೆ ಪೇಳ್ವೆನಾಲಿಪುದುರೆ ಭಕ್ತರು ।
ಮುದದೊಳೆವ್ಮಿಗೆನೂರ ಜಡೀಶ-
ನೊದವಿದ ದಂಟುಗಳ ಕರದಲ್ಲಿ
ಸದಯಂ [illegible] ನೋರ್ವಗೆ ಸುತ ಕಲಹವ ॥ ೧೪ ॥

ಕೇಳಿರ್ದ್ದಿಮಿದು ಸತ್ಯಮಾದುದು
ಭಾಳಾಕ್ಷನಿವನಹುದೆನುತ್ತಿರೆ
ಮೇಳಂಗೊಳುತೆ ಬಣ್ಣಿಸುತಿರ್ದ್ದರಲ್ಲಿ ಕೆಲ ಜನರು ।
ಪೇಳುತ್ತಿಹರ್ ಮತ್ತೆ ಕೆಲಂಬ-
ರಾಳುತ್ತಿರಲ್ಕುರೆ ಕರಿಕಾಲ
ಚೋಳಾಧಿಪಂಗಗಜಾಧಿಪಂ ಹೊನ್ನಮಳೆಗರಿಸಿ ॥ ೧೪ ॥

ಬಡತನದ ಭೂತವ ಕಳೆದನೆಂ-
ದೊಡನೆ ಕೇಳಿರ್ದ್ದಿಮಿದುಮೀಗಳ್
ಕಡುದಿಟಮಾದುದೆನುತಿರ್ದ್ದರಾ ಜನರಲ್ಲಿ ಕೆಲರು ।
ನುಡಿಯನಿದನಾಲಿಸಿದ ಜನರ್ಕ-
ಲಡಿಗಡಿಗೆ ಪೊಗಳಿದರೆಂತೆನಲ್
ಬಡವನಹ ಮುರುಘೆಯಂ ಬಾಗಿಲ ಮುರಿಯೆ ಶಿರಿಗಂಡಂ ॥ ೧೫ ॥

ನಯದೆ ಕರೆಯುತೆ ಶಂಭುಲಿಂಗಾ-
ಹ್ವಯ ಚರಮೂರ್ತಿಯಾ ಜನರನನು-
ನಯದೆ ತತ್ವವನವರ್ಗ್ಗೆ ಬೋಧಿಸಿದಂ ಮಹಿಮನಿಂತು ।
ಭಯ ಭಕ್ತಿಯಿಂ ತಿಳಿಯಿರೆಂದಿಗ-
ಭಯನಿ:ಲ್ಲೆನ್ನ ನುತಿಸುವದರೋಳ್
ಜಯಮಹುದು ಶಿವನಂ ಸ್ತುತಿಸುವಲ್ಲಿಯೆ ಸತ್ಯಮಿದುವೆ ॥ ೧೬ ॥

ಕೋವಿದರೆ ನೀವೆನ್ನ ಗುರುವೆಂ-
ದೋವಿ ನುತಿಸುವಿರಾಂ ಗುರುವಲ್ಲ
ಸಾವಧಾನದೆ ತಿಳಿಯಿರಾನುಂ ಗುರುವೇಷಧಾರಿ ।
ಭಾವಿಸುತೆ ಮರುಳಾಗಿ ವೇಷಕೆ
ದೇವನೆಂದರಿದಿಹರರಿದವರ್
ಭಾವಿಪರ್ ಸಲೆ ಹುಚ್ಚನೆಂದುರೆಯುವರ್ಗೆ ಸುಖಮಿಹುದು ॥ ೧೭ ॥

ಗುರುವಿನೊಳ್ ಶಿವಗುಣಗಳಿರವೇ-
ಳ್ಕರಿಯಲವುನೆನ್ನೊಳಗೆಲ್ಲಿಹವು
ಹರನ ನೆನೆಯುತೆ ನಿಮ್ಮಜನ್ಮವ ಸಫಲಂಗೊಳಿಸಿಂ ।
ನೆರೆ ನಿಮ್ಮಪ್ರಾರ್ಥನೆಯ ಬಲದಿಂ-
ದುರು ಸುಗುಣಂಗಳೆನ್ನೊಳಾದಡು-
ಮುರೆ ಬರಲಿ ಭಕ್ತಿಯ ನೆನಹು ನಿಮಗಿರಲಿ ತಿಳಿಯಿರದಂ ॥ ೧೮ ॥

ವರ ಯಜುರ್ವೇದದೊಳ್ಶ್ರೇಷ್ಠಂ
ಪರಮ ರುದ್ರಾಧ್ಯಾಯಮರಿಯಲ್
ನೆರೆ ತದಧ್ಯಾಯದೊಳೆಂಟನೆಯದಾದನುವಾಕವು ।
ಮೆರೆವುದದರೊಳ್ ಮನುಷಡಕ್ಷರ-
ಮುರೆಯಿದರೊಳ್ ಶಿವಾಕ್ಷರಂಗಳ್
ನೆರೆ ಶೋಭಿಸುವವವು ಕೂಡಿ ಶಂಕರನ ಪೆಸರಹುದು ॥ ೧೯ ॥

ಇದೆ ಮುಖ್ಯ ನಾಮಂ ಶಂಭುವಿಂ-
ಗಿದನೆ ಪಠಿಸಲ್ ಮಂತ್ರದ ನೆನಹು
ಪದುಳ್ದಪ್ಪುದೈ ಶಿವನ ಸಹಸ್ರನಾಮ ಪಠಣಮದು ।
ಮುದದ ಸಿದ್ಧಿಯು ಸರ್ವಕಾರ್ಯದೆ
ವಿದಿತವಹೆ ನೀನಖಿಲ ಲೋಕದೆ
ಪದಪಿನಂತಃಕರಣ ಶುದ್ಧಿಯು ಶಾಂತಿಯೊದಗುವದು ॥ ೨೦ ॥

ಶಿವಯನೆ ಸಪ್ತ ಜನ್ಮ ಕಲುಷಂ
ಜವದೆ ತೊಲಗುವದಿದು ಸಟೆಯಲ್ಲ-
ಮವನಿಯೊಳ್ ಶಿವನಾಮಕಾವುದುಮರಿಯೆ ಸಮನಲ್ಲ ।
ತವೆ ಪಾಪಿಯುಹ ಶ್ವೇತಂ ಭಕ್ತಿ
ಲವಲೇಶವಿಲ್ಲದಲೊರ್ಮೆ ನೆನೆ-
ದವಿರಳ ಪರಂಧಾಮವ ಪೊಂದಿ ನಿತ್ಯ ಸುಖಿಯಾದಂ ॥ ೨೧ ॥

ಈ ಪರಿಯುದಾಹರಣವನೀಯು–
ತಾ ಪವಿತ್ರದ ಶಿವನಾಮದುರೆ
ಲೋಪ ವಿರಹಿತ ಮಹಿಮೆಯ ಪೇಳ್ದು ಮೌನಮುದಾಳ್ದಿರೆ ।
ತಾಪ ವಿರಹಿತ ಶಾಂತಿಯ ಪಡೆಯು–
ತೀ ಪುನೀತನ ಕೃಪೆಯಾಶಿಷವ
ಪಾಪ ರಹಿತರ್ ಪಡೆದು ನಡೆದರ್ ಸ್ವಾಲಯಂಗಳ್ಗೆ ॥ ೨೨ ॥

ಗದುಗಿನೋಳ್ ಪಂಚಾಕ್ಷರನಗರ–
ಮದರಲ್ಲಿ ನಿರ್ಮಿತಮಾಗಿಹುದು
ಪದಪಿಂದೆ ವೀರೇಶ ಪುಣ್ಯಾಶ್ರಮಮಲ್ಲಿಸೆವುದು ।
ಪದುಳ್ದಿನ್ನ ಪಂಚಾಕ್ಷರ ಗುರುವಿ–
ನುದಿತ ಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೋಳ್ ಪದಿನೇಳನೆಯ ಸಂಧಿ ॥ ೨೩ ॥

**ಅಂತು**

**ಸಂಧಿ ಹದಿನೇಳಕ್ಕಂ ಪದಗಳು ಎಂಟುನೂರ್ದಾಮುವ್ವತ್ತೆಕ್ಕಂ**

**ಮಂಗಲಂ**



# ಹದಿನೆಂಟನೆಯ ಸಂಧಿಯು

ಗುರುವು ಸ್ವಸಮಾಧಿಯ ವಿಧಿಯ ತ-
ನ್ನುರು ಶಿಷ್ಯಗೆ ಸದಾಶಿವೇಂದ್ರಂ-
ಗರುಪುತ್ತೆ ರುದ್ರಾಭಿಷೇಕವ ನಡೆಸಿದಂ ತಾನೆ ॥ ಪಲ್ಲ ॥

ನಾಮರೂಪಂಗಳನೀ ಜಗದೆ
ಪ್ರೇಮಿಃಪರನೇಕರ ಮಾನವರ್
ಪ್ರೇಮಿಸರ್ ಜ್ಞಾನಿಗಳವುಗಳಂ ನಿಮ್ಮನೆ ಶೋಧಿಸಿ ।
ಪ್ರೇಮಿಸುವರಾ ಜ್ಞಾನ ಶಕ್ತಿಯ
ಪ್ರೇಮದಿಂದೆನಗಿತ್ತು ಕಾಯ್ವೆ
ಪ್ರೇಮಿಗಳರಸನಾಗಿಹೆ ನೀನೆ ಕಿಂಕರ ಶಂಕರ ॥ ೧ ॥

ಶಂಭುಲಿಂಗಾಹ್ವಯ ಚರಮೂರ್ತಿ
ಶಂಭುವಿನೊಳಡಗಿರ್ದು ಲೌಕಿಕ
ಶುಂಭರಿಗೆ ತೋರದ ಸಚ್ಚಿದಾನಂದಂಗಳೆಂಬ |
ಜೃಂಭಿಪ ನಿತ್ಯಪೂರ್ಣಗಳೆನಿಪ
ಸಂಭೃತ ಪಂಚ ಲಕ್ಷಣಂಗಳ
ಕುಂಭಿನಿಯೊಳಳವಡಿಸಿಕೊಂಡಿಹನೆಂತೆನೆ ಪೇಳ್ವೆನು ‖ ೨ ‖

ಶಿವನೆಮ್ಮ ಪರಮಾತ್ಮ ರೂಪಂ
ಸವೆಯದಿರ್ಪಂ ಚೇತನನೆನಿಸಿ
ಶವೆ ಸರ್ವ ಪಿಂಡಾಂಡದೋಳ್ ಬ್ರಹ್ಮಾಂಡದೊಳಗಾತ್ಮಂ |
ಅವಿರಳ ಸತ್ಯದಾಧಾರದಿಂ–
ದವನಿ ಪ್ರಮುಖ ಪಂಚಭೂತಗ–
ಳವಿರತಂ ಬೆಳಗುತ್ತಿಹವು ತಮ್ಮಯ ಕೃತಿಯ ಗೆಯ್ದು ‖ ೩ ‖

ಮತ್ತೆ ಚಿಲ್ಲಕ್ಷಣಮೆ ಶಿವನದು
ಚಿತ್ತಿನರ್ಥಂ ಚೇತನಮುಕ್ಕು
ಸತ್ತಿನೊಳಗದು ವ್ಯಾಪಿಸಿಹುದು ಪ್ರಕಾಶಾರ್ಥಮದಕೆ |
ಬಿತ್ತಿದು ಪಂಚಭೂತಂಗಳ್ಗೆ
ಸತ್ತಮರೊರೆವರದಕರಿವೆಂದು
ಸುತ್ತಿಹುದು ಬ್ರಹ್ಮಾಂಡ ಪಿಂಡಾಂಡಂಗಳಂ ಸತತಂ ‖ ೪ ‖

ಜಗದ ಭೋಗದ ಸುಖಮಿದೆಲ್ಲಂ
ಮಿಗಿಲೆನಿಪ ಬ್ರಹ್ಮಾನಂದದಣು–
ಮಿಗೆ ವಿಚಾರಿಸೆ ತಿಳಿವುದಿದು ಸಜ್ಜನರ ಸುಹೃದಯಕೆ |
ಸ್ವಗಯಿಪುದು ಪಿಂಡಾಂಡದೊಳಗಾ–
ತ್ಮಗಮಾಗಿ ಕಂಗೊಳಿಪುದನಿಶಂ
ಸೊಗಯಿಪಾ ಬ್ರಹ್ಮಮೆ ತಾನೆಂದು ಬಗೆಗರುಹುತಿಹುದು ‖ ೫ ‖

ಈ ವಾದದ ರೂಪವೆ ಬ್ರಹ್ಮಮದು
ರಾಮಣೀಯಕಮದುವೆ ನಿತ್ಯಂ
ಕಾಮಿಸಲ್ಕಾಣದು ಮತ್ತೊಂದುಮದರ ಹೊರತಾಗಿ।
ಧಾಮಮೀ ವಿಶ್ವಕ್ಕದುವೆ ಸಲೆ
ನೇಮದಿಂದಾವಗಮೆಂಬರ್ಥ-
ಮಾ ಮಹಿತ ಶಬ್ದದೊಳಡಗಿಹುದು ಪೇಳ್ವುದೇನಿದನು ॥ ೬ ॥

ಪರಿಪೂರ್ಣವೆನೆ ತುಂಬಿಹುದೆಂಬ
ಮೆರೆವರ್ಥವಿಡಿದೀ ಲಕ್ಷಣದಿ
ನುರೆ ಶೋಭಿಸುವದಾ ಬಹ್ಮಮೀ ಜಗಮದರಿಂದಲೇ।
ಪರಿಕಿಸಲ್ ವ್ಯಾಪ್ತಿಯಂ ಪಡೆದುದು
ಪರಮಾನುಭವಿಗಳ್ಗೆ ತೋರ್ಪುದು
ಚಿರಮಜ್ಞಾನಿಗಳದಂ ತಿಳಿಯರೀ ಭೂಮಿಯಲ್ಲಿ ॥ ೭ ॥

ವಿಮಲವೆನಿಪೀ ಪಂಚಲಕ್ಷಣ-
ಮಮಳಿನ ಶಂಭುಲಿಂಗ ಚರಮೂ
ರ್ತಿ ಮನವ ತೀವಿ ಬ್ರಹ್ಮಕಲೆಯಂ ಕೊಟ್ಟಿಹುದಾಗಳೆ।
ಸಮನಾಗಿ ಭಾವದ ಪಥದಿಂದ-
ಲಮಿತ ತನುವಂ ವ್ಯಾಪಿಸುತ್ತಲೆ
ಸಮತೆಯಿಂ ಸರ್ವರ್ಗೆ ಶಿವನೆಂಬುವ ಮತಿಯ ಕೊಡಗುಂ ॥ ೮ ॥

ಜ್ಞಾನಂ ಪರಜ್ಞಾನಂ ಮಹಾ-
ಜ್ಞಾನಂ ವರಜ್ಞಾನಂ ಶಿವಂ-
ಜ್ಞಾನಂ ಪರತರಾನುಭವದಾಜ್ಞಾನಮಿವೀತನಂ।
ಜ್ಞಾನಿಹಿತ ಜ್ಞಾನೀಶ್ವರ
ಜ್ಞಾನೀರಿತ ಜ್ಞಾನೀಡಿತ
ಜ್ಞಾನೀಷ್ಟದಾನುಭವ ಜ್ಞಾನಿಯೆಂದೆಲ್ಲರಿಂದೆ ॥ ೯ ॥

ಪೊಗಳಿಸುತಿರ್ದುದೇನೆಂಬೆನದು
ಮಿಗಿಲೆನಿಪ ತದ್‌ಜ್ಞಾನ ಬಲದಿಂ
ಸ್ವಗಯಿಪನೇಕ ಲೀಲೆಗಳಿವನೊಳುರೆ ತೋರಿ ತೋರಿ |
ಸೊಗಸುತಡಗುತಲಿರ್ದಪವರಿಯ-
ಲೊಗೆದು ಸಾಗರದಲ್ಲಿ ತೆರೆಗಳ್
ಬಗೆಯ ಮೆಚ್ಚಿಸುತಡಗುವಂದದೆ ಜನರೊಪ್ಪಿ ನಲಿಯೆ ॥ ೧೦ ॥

ಇಂತು ಲೀಲಾತ್ಮಕನಾದ ಗುರು
ಶಾಂತ ಚರಮೂರ್ತಿಯು ನಲೆದು ತ-
ತ್ಪ್ರಾಂತ ಜನತೆಯನುದ್ಧರಿಸಲೋಸುಗ ಬಂದ ಬಗೆಯ |
ಸಂತರೊಪ್ಪಲ್ ತಾನೆ ತಿಳುಹುತೆ
ಶಾಂತನಿರ್ದಂ ಹುರಿದಾ ಬೀಜ-
ದಂತೆ ಶಿವೈಕ್ಯನಪ್ಪ ರೀತಿಯನರುಹಲಾ ಮಹಿಮಂ ॥ ೧೧ ॥

ಒಂದು ದಿನದೋಳ್ ಶಿಷ್ಯನಾದಾ-
ನಂದದ ಸಿದ್ಧರಾಮಪ್ಪನುರೆ
ಚಂದಮಾಗಿಹ ಪಕ್ಕಲದ ಮಾವಿನ ಗಿಡದಡಿಯೋಳೆ |
ಒಂದು ಕುಳಿತು ಶಿವಾನುಭವ ಮನ
ಮಂದ ಮುದದಿಂ ಪೇಳುತೊರ್ಮೆಗ-
ಮಂದು ಸದಾಶಿವೇಂದ್ರನಂ ನೋಡುತ್ತೆ ಕೈವಿಡಿದು ॥ ೧೨ ॥

ಚಟ್ಟನೆ ಏಳ್ದದೇ ಪೊಲದಲ್ಲಿ
ತಟ್ಟನೆಯುತ್ತರಾಭಿಮುಖನಾ-
ಗಿಟ್ಟು ಪಾದಮನಲ್ಲಿಯೆ ಕುಳಿತು ಸಂಜ್ಞೆಯ ಗೆಯ್ಯುತೆ |
ಪಟ್ಟನೆ ತಿಂಗಳೊಳೆ ಶಿವನೊಳಗೆ
ದಿಟ್ಟನೆ ಬೆರೆದವರ ಸಮಾಧಿಯ
ಕಟ್ಟಬೇಕಿಲ್ಲಿಯೆ ಯೆಂದೊರೆದು ಮತ್ತೊರೆದನಿಂತು ॥ ೧೩ ॥

ಅವರ ಪೆಸರಿಂ ತೇರ್ಸ್ಸಗುವದು
ತವೆ ಪನ್ನೆರಡನೆಯ ಬರಿಸಕೆ
ನವಮೆನಲ್ ಕಲ್ಲಿನ ಗಾಲೆಗಳ ಹೊಂದಿ ಶೋಭಿಪುದು |
ಸ್ತವನಕೆ ಪಾತ್ರಮಾದ ಕಟ್ಟೆಗೆ
ಸ್ತವನೀಯಮೆನೆ ಹೊಂದಿಕೆಯಾಗಿ-
ಯವಿರತಂ ಕಳಸಂ ಕನ್ನಡಿಯು ಚಿತ್ರಗಳೆಸೆವವು || ೧೪ ||

ಮಾಘ ಬಹುಳದಮಾವಾಸ್ಯೆಯೊಳ್
ಶ್ಲಾಘಿಪಂದದೆ ಯಾತ್ರೆ ನಡೆವುದ-
ಮೋಘಮಾದಾ ಬನ್ನಿಗಿಡದೆ ನಾವು ನಿರ್ಮಿಸಿದ |
ಸಂಘಟಿತ ವೇದಿಕೆ ತೇರಿಗುರೆ
ಶ್ಲಾಘಿತಮಾದ ಪಾದಗಟ್ಟೆಯು
ಶ್ರೀಘನವನೀವುದು ನೋಳ್ಪರಿಗೆ ಸಂತತಮಾಗಿಡು || ೧೫ ||

ಈ ನುಡಿಯನಾಲಿಸಿ ಸದಾಶಿವ
ಮಾನಿತಯತಿಯು ಗುರುವಿನಿಚ್ಛೆಯ
ಜ್ಞಾನಿಗಳರಸನಿರದ ಕಾಲದೆ ಸಿದ್ಧರಾಮಪಗೆ |
ಜ್ಞಾನದಿಂದರಿದಿಂತು ಪೇಳ್ದಂ
ಮಾನನಿಧಿಯಮ್ಮಯ ಗುರುವಿನ್ನು
ನೂನಮಾಗಿಯೆ ತಿಂಗಳೊಳ್ ಲಿಂಗೈಕ್ಯಮನ್ನೆದುವಂ || ೧೬ ||

ತತ್ಸಮಾಧಿಯನುತ್ತರ ದೆಸೆಗೆ
ಸತ್ಸಖನೆಯಭಿಮುಖಮಾಗಿ ಸಲೆ
ಕುತ್ಸಿತಾಜ್ಞಾನವ ತೊರೆದು ಗೈಸುವದು ವಿಧಿವಿಡಿದು |
ಚಿತ್ಸಥೆಯಿತ್ತು ಗುರುಶರೀರವ
ಮತ್ಸರವಳಿದು ಪೂರ್ವದಿಕ್ಕಿಗೆ
ವಿತ್ಸಮಾಜಂ ಮೆಚ್ಚುತಿರೆ ಮುಖಮೆಸೆಯೆ ಕುಳ್ಳಿರಿಸಿ || ೧೭ ||

ನಲಿದೆಲ್ಲ ಸಂಸ್ಕಾರಂಗಳಂ
ಸಲುವಂತೆ ಗೈಸುವದೆಲ್ಲಮಂ
ಮಲಿನ ಮಾನಸರಂತೆ ನೀಂ ಮರೆಯದಿರ್ಕಾರ್ಯದೊಳೆ ।
ನಲೆಯುತೆ ಸಿದ್ಧರಾಮಪ್ಪಂಗೆ
ಸಲುಗೆಯಿಂದೊರೆಯುತ್ತೆ ಮತ್ತಂ
ನಲೆದೊರೆದನೆಂತೆನಲಾನಾಗಳಿರುವದಿಲ್ಲೆನಗೆ ॥ ೧೮ ॥

ಎಮ್ಮ ಲಿಂಗೈಕ್ಯದ ಕಾಲದೊಳ-
ಗುಮ್ಮಳಿಸುತ್ತಲೆಲ್ಲಿಗಾದಡು-
ಮಿಮ್ಮನದೆ ಪೋಗಿರಲಹುದೆಂದನ ಜ್ಞೆಯಾಗಿಹುದು ।
ಉಮ್ಮನದೊಳಾಂ ಕುರ್ತಕೋಟಿಗೆ
ನೆಮ್ಮಿಧ್ಯಾನಿಸುತಲ್ಲಿ ಪೋಗಿಹೆ-
ನೊಮ್ಮೆ ಪೇಳಿಹೆರೆನಗದಂ ನಿನಗಿಂದು ಪೇಳಿಹೆನು ॥ ೧೯ ॥

ಇಂತೊರೆಯುತ್ತೆ ಗುರುಸೇವೆಯಂ
ಸಂತತಂ ತಪ್ಪದೆ ಮಾಡೆಂದು
ಚಿಂತೆಯಿಂ ಪೇಳುತೆ ಸದಾಶಿವ ಯೋಗಿಯಲ್ಲಿಂದೆ ।
ಕಂತುವಿನ ಹರನಂ ಧ್ಯಾನಿಸುತ-
ಲಿಂತು ನಡೆದಂ ಕುರ್ತಕೋಟಿಗೆ
ಕಾಂತ ಗುರುವಾ ಸಿದ್ಧರಾಮಪನಂ ಕರೆಯುತ್ತಲೆ ॥ ೨೦ ॥

ಈ ತೆರದೆ ಪೇಳ್ದಪನೆಲೆ ಶಿಷ್ಯ
ಪ್ರೀತಿಯಿಂದೆಮ್ಮಾಜ್ಞೆಯ ನಡೆಸು
ನೀತಿಯಂ ಮರೆಯದಿರಾವಿನ್ನು ಪದಿನೈದು ದಿನದೆ ।
ಪೂತಲಿಂಗದೆ ಬೆರೆವೆವದರಿಂ-
ದೋತು ಶ್ರೀರುದ್ರಾಭಿಷೇಕವ
ಖ್ಯಾತಿಯಿಲ್ಲದೆ ಮಾಡುವೆವು ಪನ್ನೊಂದು ದಿನದನಕಂ ॥ ೨೧ ॥

ಸಿದ್ಧರಾಮಪನದನಾಲಿಸುತೆ
ಶುದ್ಧಮನದಿಂ ಕೇಳ್ದನೆಂತೆನೆ
ಸಿದ್ಧಗುರುವೆ ಮಹಾಭಿಷೇಕಕ್ಕುಪಕರಣಂಗಳ ।
ಬುದ್ಧನೆ ಪೇಳವಾವಿರವೇಳ್ಕು
ಸಿದ್ಧಗೊಳಿಸುವೆನೆನುತಿರೆ ನಗುತೆ
ವೃದ್ಧ ಚರಮೂರ್ತಿ ವರನಿಂತೊರೆದಂ ಮಹಾಮುದದೆ ॥ ೩೨ ॥

ಪೇಳಿದನಿಂತು ಸದ್ಗುರುವವಗೆ
ಭಾಳಲೋಚನನಾಜ್ಞೆಯಿದು ತಿಳಿ
ನಾಳೆಗಾ ರುದ್ರಾಭಿಷೇಕದ ಸಿದ್ಧತೆಯ ಮಾಡೈ ।
ತಾಳಿದ ವ್ರತಂ ಚಿತ್ರಮಹುದೈ
ಕೇಳು ಪನ್ನೊಂದುರೆ ನೌಟಾಕು
ಕಾಳುಮೆಣಸಂ ತರಿಸು ದಿನದ ಪ್ರಸಾದಮಹುದದರೊಳ್ ॥ ೩೩ ॥

ಒಂದು ತುಂಬಿದ ಹಂಡೆಯ ಜಲವ-
ನಂದು ಸಳಮಳನೆ ಹೊಯ್ದಾಡು-
ವಂದದೆ ಕಾಯಿಸಿಡವೇಳ್ಕು ಗುರುವಾರದೆ ನಡೆಸುವೆಂ ।
ವಂದಿಸುತೆ ಗುರ್ವಾಜ್ಞೆಯ ಪಡೆಯು-
ತಂದದಿಂ ಸಾಹಿತ್ಯಮೆಲ್ಲವ
ತಂದಿರಿಸಿಕೊಂಡಂ ಸಿದ್ಧರಾಮಪ್ಪನತಿ ಮುದದೆ ॥ ೩೪ ॥

ಗುರುವಾರದೊಳ್ ಪದ್ಧತಿಯಂತೆ
ಗುರುವಿನಪ್ಪಣೆಯಂತೆ ಗೋಮಯ-
ದುರು ಜಲದಿಂದೆ ಬಚ್ಚಲವ ಸಲೆ ತೊಳೆಯುತ್ತಲಾಗ ।
ಪರಮನಿಚ್ಛೆಯನರಿದು ಸ್ನಾನಕೆ
ಕರೆದಂ ತದಾಜ್ಞೆಯ ಪಡೆದು ಸಲೆ
ನೆರೆ ಹಂಬಿಗೆಗೆ ಬಿದಿರ ಸೇರಿಸಿ ಹಗ್ಗವ ಕಟ್ಟುತೆ ॥ ೩೫ ॥

ಕಾದು ಪೊಯ್ದಾಡುವ ಜಲಮನುರೆ
ವಾದಿಸದ ಸ್ಪರ್ಶಿಸದ ಶಿಷ್ಯನ
ವೋದದೆ ಗುರುವು ನೋಡಿ ಬಚ್ಚಲಪಲ್ಲಿ ಕುಳ್ಳಿರ್ದು ।
ಮೋದಕರನೊರೆದನದೆಂತೆನೆ ವಿ-
ನೋದಿಯಾಂ ರುದ್ರಾಭಿಷೇಕವ
ವೇದದೋಳ್ ಪೇಳ್ದಂತೆ ಗೆಯ್ವವನಲ್ಲ ಮಮ ಲಿಂಗಂ ॥ ೨೬ ॥

ಒಳಗಿರುವದದರಿಂದಲಾನುರೆ
ತಿಳಿವಂತೆ ಬಾಯ್ದೆರೆದು ಧ್ಯಾನಿಸು-
ತುಳಿದ ಲೌಕಿಕರುರೆ ಮೆಚ್ಚುವಂದದೆ ಕುಳ್ಳಿರುವೆನು ।
ಬಳಿಕ ಬಾಯೊಳಗೆ ನೀರೆರೆವು-
ದಳಿಯೆನಾಂ ಬೆದರಲ್ಬೇಡೆಂದು
ತಿಳುಪಿ ಬಾಯ್ದೆರೆಯುತ್ತೆ ಕುಳಿತಂ ಶಂಭುಲಿಂಗಾರ್ಯಂ ॥ ೨೭ ॥

ಸಳಮಳನೆ ಹೊಯ್ದಾಡುವ ಜಲವ
ಸುಳಿವ ಭಯದಿಂ ಸಿದ್ಧರಾಮಪ-
ನಳಿದಮುದದಿಂ ಮೆಲ್ಲನೆ ತಡೆದು ಸುರಿಯಲೊಡರ್ಚಿದಂ ।
ತಳೆದ ಧ್ಯಾನದೊಳಲುಗಾಡದಲೆ
ಕುಳಿತಿರ್ದನದನೀಕ್ಷಿಸುತೆ ಸಲೆ
ಕಳವಳಮಿಲ್ಲದಲೆ ಸುರುವ ತೊಡಂಗಿದನುದಕವ ॥ ೨೮ ॥

ಸುರಿದ ಸಲಿಲವ ಗುದದಿಂದೆ ಬಿಡು-
ತಿರುವನಾ ಯೋಗೀಶನದನೀ
ವರ ಶಿಷ್ಯನೀಕ್ಷಿಸುತೆ ಭಕ್ತಿಯ ತಳೆದನತಿಶಯದೆ ।
ಕರಮಭಿಷೇಕಮಂ ಮುಗಿಸುತಿಂ-
ತರಿದೇಳ್ದು ಕಡೆಗೈಯ್ದುತ್ತೆ ತ-
ದ್ಗುರುವಮಳೈಕ್ಯ ಕರಿಸಿದಿಷ್ಟಸುಲಿಂಗವ ತೆಗೆಯುತೆ ॥ ೨೯ ॥

ಕರದೊಳಿಡುತಂ ಪೂಜಿಸುತ್ತಂ
ನಿರುಕಿಸುತ್ತಂ ಮನಮಿರಿಸುತಂ
ಕರಮೆಸೆಯುತಂ ಧ್ಯಾನಿಸುತ್ತಂ ಕುಳಿತಿರ್ದನವನು |
ನೆರೆ ನುತಿಸುತಂ ವಂದಿಸುತ್ತಂ
ಚಿರಮೊಲೆಯುತಂ ಮೇಣ್‌ನಲಿಯುತ್ತಂ
ನೆರೆದಗಣಿತಂ ಮೆಚ್ಚಿಸುತ್ತಂ ಪೂಜೆಯ ಮುಗಿಸಿದಂ || ೩೦ ||

ಲಿಂಗ ತೀರ್ಥವ ಸೇವಿಸುತ್ತಂ
ಕಂಗೊಳಿಪ ಶಿವನಂತೆಸೆಯುತಂ
ಮಂಗಲ ಸುಪ್ರಸಾದಕಾಗಿಯೆ ನೌಟಾಕು ಮೇಣಸಂ |
ಪಿಂಗದೆ ಪಿಸ್ಪವೆಸಗಿಸುತ್ತಂ
ಭಂಗಿಸದೆ ಯಡಿವಮಾಡಿಕೊಳುತಂ
ಜಂಗಮುವ ಸ್ಮರಿಸುತೆ ಕೊಂಡಂ ಪ್ರಸಾದಂಗೊಳಿಸುತೆ || ೩೧ ||

ಪರತರನುರೇಕೊಂಡಿ ಗುರುವಿನ
ಸ್ಮರಣೆಯು ಗೆಯ್ದು ಪೊರಗೆ ಬರುತಂ
ಪರಶಿವಾನುಭವಾನಂದಾಬ್ಧಿಯೊಳೆ ಮಗ್ನನಾದಂ |
ಹರಸಮನಿಂತು ಪನ್ನೊಂದುದಿನ-
ದುರೆ ವ್ರತದೊಳಿರ್ದಂ ಮಹಾಮತಿ-
ಯುರು ರುದ್ರಾಭಿಷೇಕಮಿದು ಲೋಕಾತೀತಮಿಹುದು || ೩೨ ||

ಗದುಗಿನೋಳ್ ಪಂಚಾಕ್ಷರನಗರ-
ಮದರಲ್ಲಿ ನಿರ್ಮಿತಮಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರಗುರುವಿ-
ನುದಿತಯೋಗಸಮಾಧಿಯುದಲ್ಲಿ
ಮುದದೆ ಬರೆದ ಪುರಾಣದೋಳ್‌ಪದಿನೆಂಟನೆಯಸಂಧಿ || ೩೩ ||

ಅಂತು
ಸಂಧಿ ಹದಿನೆಂಟಕ್ಕಂ ಪದಗಳು ಎಂಟುನೂರ್ಪಾರವತ್ತೊಂರಕ್ಕಂ
ಮಂಗಲಂ

॥ ಶ್ರೀ ಗುರು ಬಸವಲಿಂಗಾಯನಮಃ ॥



# ಹತ್ತೊಂಭತ್ತನೆಯ ಸಂಧಿಯು

ನಿರತಿಶಯ ಲೀಲೆಗಳ ತೋರುತೆ-
ಪರಮಯೌಗಿಕ ಮಾರ್ಗದಿಂದಲೆ
ಹರನೋಳ್ ಬೆರೆದನಾ ಶಂಭುಲಿಂಗಾಖ್ಯ ಚರಮೂರ್ತಿ ॥ ಪಲ್ಲ ॥

ಜೀವ ಚೇತನದಿಂದಲಾಗಸ-
ವ್ಯೋವಿಯದರಿಂ ವಾಯುವದರೋ-
ಳ್ತೀವಿಯಗ್ನಿಯುಮದರಿಂದೆ ಜಲಮದರಲ್ಲಿ ನೆಲವು ।
ಆವರಿಸಿತಿದರೊಳ್ವನಸ್ಪತಿ-
ಯಾ ವಿವಿಧಮನ್ನಮದಿದರಲ್ಲಿ
ಜೀವರವರೋಳ್ವೀರ್ಯಮುದಿಸಿತು ಶಿವನೆ ಕಾಯರುಪಿ ॥ ೧ ॥

ಈ ಚರಮೂರ್ತಿರೀತಿ ಪೊಸತಿದು-
ಮೀ ಚರಮೂರ್ತಿನೀತಿ ಪೊಸತಿದು-
ಮೀ ಚರಮೂರ್ತಿ ರುದ್ರಾಭಿಷೇಕಂ ಪೊಸತಿದರಿಯೆ |
ಈ ಚರಮೂರ್ತಿಭಾಷೆ ಪೊಸತಿದು-
ಮೀ ಚರಮೂರ್ತಿಲೀಲೆ ಪೊಸತಿದು-
ಮೀ ಚರಮೂರ್ತಿ ಲಿಂಗದಮಳೈಕ್ಯದ ಸ್ಥಿತಿಯು ಪೊಸತು || ೨ ||

ಜನತೆಯೀ ಪರಿ ಶಂಭುಲಿಂಗಾ-
ಖ್ಯನ ಚರಮೂರ್ತಿವರನ ಚರಿತವ
ಘನವಾಗಿ ಪೊಗಳುತ್ತೆ ದರ್ಶನಕಾಗಿ ಬರುತಿಹುದು |
ಅನಘನ ಸಮಾಗಮವಿದುವೆಮಗೆ
ನೆನೆಯುತ್ತೆ ದುರ್ಲಭವೆಂದಲ್ಲಿ
ಮನಕೆ ದಣಿವಿಲ್ಲದೆ ನೋಡುತ್ತೆ ನೆಲಿಸುತಿರ್ದಪುದು || ೩ ||

ಒಂದು ದಿನದೋಳ್ ಜನದ ಸಂದಣಿ
ಹೊಂದಿರಲ್ಕಾ ಕಾಲದಲ್ಲಿಯೆ
ಬಂದನಲ್ಲಿಗೆ ಬಡಿಗೇರ ಲಕ್ಷಪ್ಪನೆಂಬುವನು |
ವಂದಿಸುತೆ ಚರಮೂರ್ತಿ ಪಾದಕೆ
ನಿಂದರಲ್ಕಾತನ ನೋಡುತ್ತೆ
ಕಂದು ಗೊರಲನ ರೂಪನೊರೆದಿಹನೆಂತೆನೆ ಪೇಳ್ವೆನು || ೪ ||

ಎಲವೊ ಬಿಡು ಚಿಂತೆಯನೆ ಲಕ್ಷ್ಮಣ
ಚಲುವ ದನಗಳ್ತಾವೆ ದೊರೆವವು
ಸಲೆ ಪ್ರಯತ್ನವ ನೀನೇಕೆ ಮಾಡುತ್ತೆ ದಣಿಯುವದು |
ಚಲಿಸದಿರಲೈ ನಿನ್ನ ಚಿತ್ತಂ
ಚಲಿಸುತಿಂದೇ ಬರುವವು ನೀಲ-
ಗಲನ ಧ್ಯಾನಿಸುತಂ ನಿಶ್ಚಿಂತನಾಗಿರು ಸಂತತಂ || ೫ ||

ಪೋಗೆನಲ್ ಹರುಷಿತನಾಗುತ್ತೆ
ಸಾಗಿದಂ ಮರುಮಾತನಾಡದೆ
ಭೋಗಿಭೂಷಣನಪರಾವತಾರಂಗೆ ಬೆದರುತ್ತೆ ।
ರಾಗಮಿತ್ಯಂದಿಗೆ ಬರುವವೆಂ-
ದಾಗ ಕೇಳಲ್ವೇಳ್ಕೆಂಬುದುರೆ
ವೇಗದಿಂದಾ ಕಲ್ಪನೆಯ ಹತ್ತಿಕ್ಕುತ್ತೆ ಮನದೆ ॥ ೬ ॥

ಪನ್ನೊಂದನೆಯ ದಿವಸದಲ್ಲಿಯೆ
ತನ್ನಂತ್ಯ ರುದ್ರಾಭಿಷೇಕವ
ಚನ್ನಾಗಿ ನುಡಿಸುತ್ತೆ ದಿವಸದ ಪದ್ಧತಿಯ ಬಿಡದೆ ।
ಮುನ್ನಂ ಬಂದ ಜನರೆಲ್ಲರಂ
ಬನ್ನಂಬಡುವದಂ ತಪ್ಪಿಸಲು
ಸನ್ನಾಥನೀಕ್ಷಿಸುತೆ ಕೈಲಾಸಕ್ಕೆ ಕರೆದನವಂ ॥ ೭ ॥

ಎಲ್ಲರೊಪ್ಪದೆ ಸುಮ್ಮನಿರುತಿರೆ
ಲಲ್ಲೆಯಿಂ ಕೇಳ್ದಂ ಮತ್ತೆ ಸ-
ದ್ವಲ್ಲಭಂ ನಿಜಶಿಷ್ಯನಾಗಿಹ ಸಿದ್ಧರಾಮಪನ ।
ಸೊಲ್ಲಿಸು ಸಿದ್ಧರಾಮನೆ ಈಗ-
ಳುಲ್ಲಸದೆ ನೀನಾದಡುಮೆಮ್ಮ
ಸೊಲ್ಲ ಮೀರದೆ ಶಿವನ ಲೋಕಕೆ ಬರುವಿಯೇಂ ಪೇಳ್ಳೆ ॥ ೮ ॥

ಅದನಾಲಿಸುತೆ ಸಿದ್ಧರಾಮಪ-
ನುದಿತ ಹರುಷದೆ ಸಮ್ಮತಿಸಿದಂ
ಮುದದೆ ಕೇಳುತೆ ನುಡಿದನೀ ಪರಿಯುವನ ಭವಿಷ್ಯವ ।
ಸದಮಲನೆ ನಿನಗಿನ್ನುಂ ದುಃಖ-
ಮೊದಗುವದು ಕಟ್ಟಿಗೆಯ ಮಾರುವ
ಪದುಳ್ದ ಬಡತನವೊದಗುತಿರ್ಪುದು ಭೋಗಿಸಿ ಬರ್ಪುದು ॥ ೯ ॥

ಕಷ್ಟವಿಃದುರೆ ಸದಾಶಿವೇಂದ್ರನ
ಸಿಷ್ಟರೊಪ್ಪುವ ತೆರದೆ ಸೇವಿಪು-
ದಿಷ್ಟಭೋಗಂ ಸ್ಥಿರವಮಾಗಿರುವದೆಂದು ಪೇಳುತ್ತೆ ।
ಅಷ್ಟಮೂರ್ತಿಯೆ ಸ್ಮರಿಸಿ ಮತ್ತು-
ದ್ದಿಷ್ಟ ಪೂರ್ವಕವಮಾಗಿಂತೊರೆದ-
ನಿಷ್ಟು ತಡಮಾಡದೆ ಭೋಜನಕೆ ಸಿದ್ಧಗೊಳಿಸೀಗ ॥ ೧೦ ॥

ಈ ನುಡಿಯನಾಲಿಸುತೆ ಶಿಷ್ಯಂ
ಸ್ವಾನುರಾಗದೊಳಿಂತು ಬಗೆದಂ
ಜ್ಞಾನಿಯಿವನೀ ಪನ್ನೊಂದು ದಿವಸಂಗಳೊಳಗರಿಯೆ ।
ಮಾನಿತಂ ಮೆಣಸುಗಳ ಹೊರತಾ-
ಗೇನನುಂ ಸಲಿಸಿಲ್ಲಮದರಿಂ
ಜ್ಞಾನ ನಿಧಿಯ ಪ್ರಸಾದಕ್ಕೆ ಶಾವಿಗೆಯೆ ಹಿತಮಹುದು ॥ ೧೧ ॥

ಎಂದು ಸಿದ್ಧಂಗೊಳಿಸಿ ಗುರುವಿನೆ
ಸಂದು ಪೂಜೆಯು ಮುಗಿದೊಡನವಂ
ತಂದಿರಿಸಿದಂ ಮಾಡಿದ ತತ್ರ್ರಸಾದಮನಾಗಳೆ ।
ಬಂದ ಜನರಂ ಸಿದ್ಧರಾಮಃಪ-
ನಂದು ಯೋಗಿ ನಿದೇಶದಂತುರೆ
ಛಂದದಿಂ ಕರೆದಂ ಭೋಜನಕ್ಕಾರುಂ ಬರದಿರೆ ॥ ೧೨ ॥

ಗುರುವು ಕರೆದಂ ಬರಲಿಲ್ಲಾರು
ಮರಿದಿದಂ ತಾನೋರ್ವನುಣದಲೆ
ಚರಮೂರ್ತಿಯೇಳ್ಪಂ ಮೆಣಸಿನಾ ಚೂರ್ಣವ ಸೇವಿಸಿ ।
ಪೊರೆಗೆ ಬಂದೆಲ್ಲರಂ ಕರೆಯುತ-
ಲೊರೆದನಿಂತುರು ನೀತಿ ಪಾಠವ
ವರಭಕ್ತರಾಗಿರಿ ಜನರ್ ನೀವರಿಯಿರಿ ಶಾಂತಿಯ ॥ ೧೩ ॥

ಪರಮ ಭಕ್ತಿಯ ಬಿಡದಿರಿ ನಿತ್ಯ
ವರವಿವೇಕವ ಮರೆಯದಿರಿ ಮೇಣ್
ಕರವೆಸೆವ ಸುಗುಣಂಗಳಂ ತೊರೆಯದಿರಿ ಸತತವೆನೆ |
ದುರಿತಕರ್ಮವ ನೋಡದಿರಿ ನೀವ್
ಪರರ ದುಃಖವ ಕೇಳದಿರಿ ನೀವ್
ಗುರುದೈವತದ ನಿಂದೆಯನೆಂದುಮಾಲಿಸದಿರಿಹದೆ || ೧೪ ||

ಮದ್ಯಪಾನವ ಮಾಡದಿರಿ ಮಾಂ-
ಸಾದ್ಯಭಕ್ಷವ ತಿನ್ನದಿರಿ ನೀವ್
ಖಾದ್ಯವಸ್ತುವನಾದಡಂ ದೈವಕೆ ನಿವೇದಿಸದೆ |
ವೇದ್ಯರ ನೆರೆ ತಿರಸ್ಕರಿಸದಿರಿ
ಸ್ವಾದ್ಯರ ವಚನಮಂ ಮೀರದಿರಿ
ಚೋದ್ಯಮೆನಿಸುವ ನರಜನ್ಮಂ ಪಾಳುಗೆಯ್ಯದಿರಿ || ೧೫ ||

ಜ್ಞಾನಮಿಹುದೀ ನರಜನ್ಮದೊಳ-
ನೂನಮೆನಲಧಿಕಂಗೊಳಿಸುತ್ತೆ
ಮಾನನೀಯ ಮಹಾಂತ ಶಿವನಂ ಕೂಡುವದೆ ಫಲವು |
ಜ್ಞಾನನಿಧಿ ಗುರುವನದಕ್ಕಾಗಿ
ಸ್ವಾನುರಾಗದೆ ಸೇವಿಸವೇಳ್ಕ-
ಧೀನವಹ ತತ್ಪ್ರೀತಿಯೆ ಭಕ್ತಿಯದಿರವೇಳ್ಪದಕೆ || ೧೬ ||

ಭಕ್ತಿಯೊಂದಿರೆ ಗುರುಸೇವೆಯಿದು
ಭಕ್ತಿಯೊಂದಿರೆ ಸತ್‌ಕ್ರಿಯೆಯು ಮೇಣ್
ಭಕ್ತಿಯೊಂದಿರೆ ಸುಜ್ಞಾನಮದು ಸಿದ್ಧಿಯನೇಕವು |
ಭಕ್ತಿಯೊಂದಿರೆ ಸಿದ್ಧಿ ಪುದರಿಯೆ
ಭಕ್ತಿಯೊಂದಿರೆ ಹೃದಯ ಶುದ್ಧಿಯು
ಭಕ್ತಿಯೊಂದಿರೆ ಭೋಗಮೋಕ್ಷಂಗಳ್ ಸಾಧಿಸುವವು || ೧೭ ||

ಭಕ್ತಿಯಿದು ಕಾಮ್ಯ ನಿಷ್ಕಾಮ್ಯ
ಸಕ್ತಿಯಿಂದೆರಡಾಗಿಹುದು ತಿಳಿ
ವ್ಯಕ್ತಿಗಳಿದನನೇಕರರಿಯುತೆ ಸಾಧಿಸಿ ಲೋಕದ ।
ಭಕ್ತಿಯಂ ಮುಕ್ತಿಯನುರೆ ಪಡೆದ-
ರುಕ್ತಿಯಿದು ಸಟೆಯಲ್ಲಮರಿಯಲ್
ಶಕ್ತಿಯಿಂ ಸಾಧಿಸಿರಿ ನೀವೆ ಕೃತಾರ್ಥರೆನಿಸುವಿರಿ ॥ ೧೮ ॥

ಕಾಮ್ಯವೆಂದೊಡೆ ಫಲದಾಶೆನಿ-
ಷ್ಕಾಮ್ಯವೆಂದೊಡೆ ವರನಿರಾಶೆಯು
ಸೌಮ್ಯರೆ ಸ್ಮೃತಿಯು ನಿಷ್ಕಾಮ್ಯಭಕ್ತಿಯೆನೆ ಪೊಗಳುವದು ।
ಸಾಮ್ಯವನದುವೆ ನೀಡುವದು ವೈ-
ಷಮ್ಯಮಂ ಕಳೆಯುವದದರಿಂದೆ
ರಮ್ಯವಾಗಿಹುದಿದುವಿದನೆ ನಂಬುತ್ತೆ ಬಾಳಿರಿ ನೀವ್ ॥ ೧೯ ॥

ಇನ್ನು ಶಿವನಲ್ಲಿ ಬೆರೆಯುವೆವು ನಿಮ-
ಗುನ್ನತ ಸುಖಂ ಲಭಿಸಲೆನುತಿರೆ
ಮುನ್ನವೆರಗುತೆ ಭಕ್ತನೋರ್ವಂ ಕೇಳ್ದನೆಂತೆನಲು ।
ಮನ್ನಣೆವೆತ್ತ ಗುರುವೆ ಪೇಳೈ
ಸನ್ನುತನೆಯುಮ್ಮುದ್ಧರಣಮಂ
ಚಿನ್ನಿಧಿಯೆ ಮಾಡುವರಾರ್ ತಥ್ಭವಿಷ್ಯಮನೆಂದೆನೆ ॥ ೨೦ ॥

ಅದನಾಲಿಸುತೆ ನುಡಿದಂ ಗುರುವು
ಪದಮಲರೆ ಕೇಳಿರಿ ಶಾಂತಿಯಿಂ-
ದಿದರ ಚಿಂತೆಯು ಬೇಡ ಸದಾಶಿವೇಂದ್ರನಿರುತಿಹನು ।
ಪದುಳ್ದುದ್ಧಾರಮವನಿಂದೆ ನಿಮ-
ಗೊದಗುವದು ಸಟೆಯಲ್ಲವೆನ್ನಯ
ಪದುಳ್ದ ಯೋಗಸಮಾಧಿಯಮಠಂ ನಿರ್ಮಿತಮಪ್ಪುದು ॥ ೨೧ ॥

ಆ ಸದಾಶಿವ ಲೀಲೆಯಿಂದಲೆ
ಲೇಸನೀವ ಮಠಾಧಿಕಾರಿಯು
ಭಾಸುರದ ಯಳವತ್ತಿ ಗ್ರಾಮದೊಳುದಿಪಂ ಯೋಗಿಯು ।
ನೇಸರನಂತೆ ತೇಜಸ್ವಿಯವ-
ನೋಸರಿಸದೆಮ್ಮಯ ಪುರಾಣವ-
ನೀ ಸಮಸ್ತ ಜನರ್ಕ್ಕಳೊಪ್ಪುವ ತೆರದೆ ಬರೆಯಿಸುವಂ ॥ ೨೨ ॥

ಇವನ ತಾಯ್ತಂದೆಗಳ ಪೆಸರಿದೆ
ತವೆ ಸಿದ್ಧರಾಮವ್ವ ಗುಂಡಪ-
ನಿವರು ಗೌಡರು ನಿಜಬಾಲಂಗೆ ಚರಮೂರ್ತಿಯೆಂಬ ।
ತವಿಪ ನಾಮವನಿಟ್ಟು ಬೆಳೆಸುವ-
ರವತಾರಿಯಾ ಪ್ರಥಮಾಭ್ಯಾಸ-
ಮವರಿಂದೆ ಪ್ರಾರಬ್ಧಮಪ್ಪುದೆ ತದ್ಗ್ರಾಮದಲ್ಲಿ ॥ ೨೩ ॥

ಪಿರಿಯ ಮಲ್ಲೂರ್ ಮಹಾಂತಯ್ಯಗಳೊ-
ಳುರೆ ಶಿಕ್ಷಣವ ಮುಂದುವರಿಸುತೆ-
ನೆರೆ ಪಾಲಕೆರೆಯನ್ನದಾನೀಶ್ವರರ ಮಠದಲ್ಲಿ ।
ಉರು ಶಿವಯೋಗಮಂದಿರದಲ್ಲಿ
ಕರವೋದಿ ಮುಗಿಸುತ್ತಲೀತಂ
ಸರಸ ವೈರಾಗ್ಯದೊಳ್ಬೈದುತೀಯೂರೊಳೆ ನೆಲಿಸುವಂ ॥ ೨೪ ॥

ಪರಮ ಸಂಚಾರವ ಕೈಕೊಂಡು
ಪರತರ ಸದಾಶಿವ ಯೋಗಿಯಿವ-
ನುರು ಜನಕಾಗ್ರಹದಿಂದಲೆಳವತ್ತಿಯೊಳಗಿರಲು ।
ನೆರೆ ಮಲ್ಲರಡ್ಡಿಯ ಮನೆಯೊಡೆಯ-
ರುವನೆಲ್ಲಪನವನ ಪತ್ನಿಯು-
ಮಿರಿಯಲಿವರ ಸುತರ್ಮರಿಯಪ್ಪ ಫಕೀರಪನವರು ॥ ೨೫ ॥

ಸೋದರರ್ ಸನ್ನುತ ಸದ್ಗುಣರ್
ವೇದವಿನುತೆ ಸದಾಶಿವೇಂದ್ರಂ-
ಗಾದರದ ಭಕ್ತರಿವರೆನಿಸುತಲೀಊರ ಮಠದೆ |
ಮೋದದೊಳಮಾವಾಸ್ಯೆಗೊಮ್ಮೆಯ-
ಭೇದದಿಂ ದಾಸೋಹವ ನಡೆಸಿ
ಖೇದವಿಲ್ಲದೆ ಮಮಸಮಾಧಿಯ ಮಠವ ನಿರ್ಮಿಸರು || ೨೬ ||

ಇವರಿಗೆ ಸಹಾಯಕರು ಗುಂಡಪ
ಗವಡಗೋಣಿಯ ಸ್ವಾಮಿಮರಿತಮ
ನವರು ಮೇಲಾಗಿಹರು ಸರ್ವರ್ ಸಿರಿವಂತರಹರು |
ಸಿವಭಕ್ತನುತರಹ ಫಕೀರಪ-
ನವರನಘಭಕ್ತಿಯ ಬಲದಿಂದೆ
ಶಿವರಾತ್ರಿ ಸಮಯದೆ ಶಿವೈಕ್ಯವ ಪೊಂದುವರಮಲರು || ೨೭ ||

ಆಮಿತ ಸದಾಶಿವೇಂದ್ರರ ಬಳಿಕ-
ಮಮಲ ಚರಮೂರ್ತಿಗಳಾದಡುಂ
ನಿಮಗೆ ಸದ್ಭಕ್ತಿಯ ಬೋಧಿಸುತೆ ಪೂತರನೆಸಗುತೆ |
ಸಮತೆಯಿಂ ಮೇಲಾಗಿ ಮೆರೆವರ್
ಸುಮಹಿಮರನುಗ್ರಹವ ಪಡೆಯುವಿ-
ರೆಮಗಪ್ಪಣೆಯನೀಯಿರೆನ್ನುತೆ ಪೊರಗೆ ಗಮಿಸಿದನು || ೨೮ ||

ಸಿದ್ಧರಾಮಪನಾ ಚರಮೂರ್ತಿ
ಸಿದ್ಧನಾಗಿಹ ಶಂಭುಲಿಂಗನ
ಸದ್ಧಿತನ ಪದಮಂ ಪಿಡಿಯುತ್ತೆ ಬೇಡಿದನೆಂತೆನೆ |
ಬುದ್ಧಿಗಳೆ ತಮ್ಮೀ ದೇಹಮಂ
ಸಿದ್ಧಿಯಿಂ ಮನೆಯೊಳಗೆ ಬಿಡುತ್ತ-
ಲುದ್ಧರಿಪುದೆನ್ನಂ ತಾವೆಂದು ಬೇಡಿದನನಘನು || ೨೯ ||

ಅದನಾಲಿಸುತೆ ನುಡಿದನೆಂತೆನೆ
ಸದಮಲನೆ ಕೇಳ್ ಸರ್ವರೆಮ್ಮಯ
ಪದುಳ್ದ ಲಿಂಗೈಕ್ಯದ ಸ್ಥಿತಿಯ ಕಾಣಲ್ಕೆ ಬಂದಿಹರು ।
ಅದಕಾಗಿ ಈ ತನುವಂ ಬಿಡುವೆ-
ವಿದೆ ಚಾವಣಿಯ ಬಂಕದಲ್ಲಿಯೆ
ಪದಳ್ದ ಶಿವಯೋಗದ ಮಾರ್ಗಕ್ಕೆ ಬೇಹುದೇಕಾಂತಂ ॥ ೩೦ ॥

ಯೋಗಮಾರ್ಗವಂಸಂಗೀಕರಿಸಿ
ಸಾಗುತಿಹೆವೀ ತನುವತೊರೆಯುತೆ
ಸಾಗಿ ಬರುತಿಹರೆಮ್ಮ ದೇಹಸಮಾಧಿಯ ಮುಗಿಸಲು ।
ಯೋಗಿನುತ ಪಂಚಗಣಾಧೀಶ-
ರಾಗಮಜ್ಞರ್ ನೀನವರ ಮಿಗಿ-
ಲಾಗಿರುವ ಭಕ್ತಿಯ ತಾಳಿ ಪೂಜೆಯ ನೆರವೇರಿಸು ॥ ೩೧ ॥

ಇಂತೊರೆದು ಶಿಷ್ಯನನೊಪ್ಪಿಸುತೆ
ಶಾಂತನಾಶೀರ್ವದಿಸಿ ಗೌರೀ
ಕಾಂತನಂ ಸ್ಮರಿಸುತಲುತ್ತರಾಭಿಮುಖನಾಗುತ್ತೆ ।
ಶಾಂತಿಯಿಂ ಕುಳ್ಳಿರ್ದು ಸರ್ವ
ಭ್ರಾಂತಿ ವಾಸನೆಯಂ ತ್ಯಜಿಸುತ್ತ
ಲಂತರರಹಿತಂ ಪ್ರಾಣವಾಯುವನಾ ವಿಧಿಯ ಬಿಡದೆ ॥ ೩೨ ॥

ನೆರೆವಾಧಾರದಿಂದಾಗ್ನೇಯ
ಸುರುಚಿರ ಚಕ್ರದವರೆಗುಮವಂ
ಮರುತಮನೇರಿಸುತೆ ನಿಲ್ಲಿಸುತೆ ಜನಕಚ್ಚರಿಯದು ।
ನೆರೆಪುಟ್ಟುವಂದದೆ ಮನವೆಂಬ
ಪರಮವೀರನ ಪ್ರಾಣವೆಂಬುವ
ತುರಗಮಂ ಪಿಡಿಯುತ್ತೆ ತದ್ವಿಷಯಾಶಾಸೇನೆಯ ॥ ೩೩ ॥



ಪೂಜ್ಯ ಲಿಂ. ಶಂಭುಲಿಂಗ ಚರಮೂರ್ತಿಗಳ ಯೋಗಸಮಾಧಿ ಮಂದಿರ

ಸುವಿರಾಗವೆಂಬುವ ದೂತಂಗೆ
ತವೆಜ್ಞಾನವೆಂಬಸಿಯನೀಯುತೆ
ಜವದೆ ಸಂಹಾರವ ಮಾಡಿಸುತೆ ವೀರನನುಳಿಸುತೆ |
ತವಿಸಂತರ್ಬಹಿರ್ದ್ದೇಶಗಳೊ-
ಳವಿರತಂ ಚರಿಸಲ್ಕೊಡದಂತೆ
ತವಿಸುವ ಬ್ರಹ್ಮಚಕ್ರಕೇರಿಸಿ ಮುದಮೃತವನುಣಿಸಿ || ೩೮ ||

ಮಸ್ತಕದಸ್ಥಿಯಂ ಭೇದಿಸಲ್
ವ್ಯಸ್ತಮಾಗದೆ ತೆಂಗಾಯಿಯಂ
ಸಿಸ್ತಿನಿಂ ಮೀರಿಸುತಲುರ್ಬಿದ ಚರ್ಮವನೊಡೆಯಿಸಿ |
ಅಸ್ತ್ರವನ್ನೈದಲಾ ಬ್ರಹ್ಮಾಬ್ಧಿ-
ಗಾಸ್ತೆಯಿಂ ಕಳುಹಿಸುತೆ ಯೋಗಿಯು
ವಿಸ್ತರಿಸಿದಾ ಕಡಲಿಳಿದು ತಲ್ಲಿಂಗದೆ ಬೆರೆದನು || ೩೯ ||

ಅವನ ಮಸ್ತಕ ಚಿನ್ಹವ ನೋಡಿ
ತವೆ ವಿಶ್ಮಯುದೆ ಸ್ನಾನವ ಮಾಡಿ
ನವ ಮುದದೆ ಸಿಂಹಾಸನವ ರಚಿಸುತ್ತೆ ತಜ್ಜನತೆ |
ಪವಮಾನ ಸನ್ಮೂರ್ತಿಯ ಪಿಡಿದು
ಪವಣಿಂದಲೆತ್ತಲ್ ಹಗುರಾಗಿ
ಕವಿದಚ್ಚರಿಯ ಪೆರ್ಚಿಸಂತೆಸೆದತ್ತು ತದ್ದೇಹಂ || ೪೦. ||

ಶಿರಮದುಂ ಬೀಳ್ದಂತೆ ನಿಂದುದ-
ನರಿದಚ್ಚರಿಯ ಜನತೆ ತಾಳ್ದುದು
ಕರಮೆಸೆಯಲಾ ಸಿಂಹಾಸನದೆ ನೋಡಿ ಭಕ್ತಿಯದು |
ಉರೆ ಮಿಗಿಲಾಗೆ ತೆಂಗಾಯಿ ಕ-
ಪ್ಪುರವ ಮಿಗೆಯರ್ಪಿಸುತಲಿರ್ದುದು
ಸರಭಸದೆ ನೆರೆಯುತ್ತೆ ಗ್ರಾಮಪರಗ್ರಾಮದಿಂದೆ || ೪೧ ||

ವರ ಶಿಷ್ಯನಹ ಸಿದ್ಧರಾಮಪ-
ನುದು ಗುರುಚರಣದಳತೆಯ ಕೊಳ್ಳ-
ತರಿಂದ ಜನರಿಂ ತತ್ತ್ಯನುವನಡಗಿಪ ಸಮಾಧಿಯನೆ |
ಕರಮೆಸೆವಂತೆ ಗುರ್ವಾಜ್ಞೆಯಿಂ
ಮರೆದು ಪೂರ್ವಾಭಿಮುಖಮಾಗಿಯೆ
ನೆರೆ ನಿರ್ಮಿಸಿದನಾ ವಿಧಿಯ ಮೀರದಲೆ ಸೊಗಸಾಗಿ || ೩೮ ||

ರಂಗವಲ್ಲಿಯ ರಚಿಸಿ ಮುತ್ತುರು
ತುಂಗವಹ ಚಪ್ಪರವ ನಿರ್ಮಿಸಿ
ತೆಂಗಿನಗರಿಯ ಹೊದಿಸಿ ಬಾಳಿಯ ಸ್ತಂಭಂಗಳಿಂದೆ |
ಸಿಂಗರಿಸಿ ಮಾವಿನ ತಳಿರುಗಳ
ಕಂಗೊಳಿಪಂತೆ ಬಂಧಿಸುತೊಳಗೆ
ಸಾಂಗಮೆನೆ ದೀಪವಪರ್ಚಿಮಾಡಂಗಳೊಳಿಟ್ಟರು || ೩೯ ||

ಅನಿತರೊಳ್ ಪಂಚಗಣಾಧೀಶ-
ರನಘನಪ್ಪಣೆಯಂತ್ಯೆದುತ್ತೆ
ಘನ ಸಮಾಧಿಯನೋಡಿ ಹರ್ಷಿಸಿ ಮಾಮರದಡಿಯೊಳೆ |
ನೆನೆದು ಕುಳಿತರ್ ಶಿವನನೆಲ್ಲರ್
ಜನರರಿಯದಾದರ್ ಮಹಾತ್ಮರ
ವಿನುತರಾಗಮನಮದೆಲ್ಲಿಂದವಾದುದೆಂಬುದನೆ || ೪೦ ||

ಬಡಿಗೇರ ಲಕ್ಷ್ಮಪ್ಪನೆಂಬುವ-
ನೊಡೆಯನಹ ಚರಮೂರ್ತಿಯ ಭಕ್ತ-
ನಡಿಯ ಸ್ಮರಣೆಯ ಗೆಯ್ದು ಗುರುವಿನ ಮೂರ್ತಿಯಪ್ಪೊಯ್ಯಲು |
ಸಡಗರದೆ ಕೈವಾಲಿಯ ಮಾಡ-
ಲೊಡನೆ ಬರುತಿರಲಾತನ ಕಳೆದ
ಕಡುಪಿಂದೆಸೆವ ಗೋವುಗಳಾಗ ಬಂದುದನೀಕ್ಷಿಸಿ || ೪೧ ||

ಗುರುವಿನಪ್ಪಣೆ ದಿಟವಮಾದುದೆಂ-
ದರಿದು ಸಂತಸದಿಂ ಮನೆಯುವರ್-
ಗರುಪುತ್ತೆ ಬಂದಾ ವಿಮಾನವ ಬಂಧು ಜನರೊಡನೆ।
ಬೆರೆದು ರಚಿಸದನೆಲ್ಲ ಜನರ್ಕ-
ಳುರೆ ಮೆರ್ಚುತಿರೆ ನೋಡಿಭಕ್ತರ್
ಗುರುವಿನ ಮೂರ್ತಿಯಂ ಮುಹೂರ್ತಂಗೊಳಸಿದರದರೊಳೆ ॥ ೪೨ ॥

ಎತ್ತಲಾರತಿಯೆಂ ಮೆುತ್ತೈದಿ
ಮೊತ್ತಮದು ಭಕ್ತರ ಜಯಘೋಷ-
ಮೊತ್ತರಿಸುತಿರೆ ಭಜನಾಮೇಳ ಗಣಮುಘ್ಘ್ ಡಿಸಲು।
ಬಿತ್ತರಿಸುತಿರೆ ವಾದ್ಯಸಮೂಹ-
ಮೆತ್ತಿದರಾ ವಿಮಾನವ ಜನರ್
ಸತ್ತಿರಲ್ತೆಂಗಾಯಿ ಪಣ್ಗಳನರ್ಪಿಸಲ್ ಶರಣರ ॥ ೪೩ ॥

ಮೆರವಣಿಗೆಯೆಂ ಕೈಮುಗಿದು ಬಾ-
ಲರ ಮೊದಲ್ಗೊಂಡರಿಯೆ ವೃದ್ಧರ-
ವರಿಗುಮೆಲ್ಲರ್ ಭಕ್ತಿಯಿಂ ಸಲೆ ನುತಿಸುತಿರೆ ನೋಡಿ।
ಚರಮೂರ್ತಿಯ ಶರೀರಂ ಶಿವನ
ಪರತರ ಕಳೆಯ ಶೋಭೆಯ ಜನಕೆ
ನೆರೆ ತೋರುತಿರೆ ಬಂದುದು ತತ್ಸಮಾಧಿಯ ಸ್ಥಳಕದು. ॥ ೪೪ ॥

ಶಿವಲಿಂಗ ಧಾರಣದಿಂದಲೊ-
ಪ್ಪುವ ಭಕ್ತನಿಚಯಂ ಶೋಭಿಸಲ್
ನವಭಸಿತ ಧಾರಣೆಯುರಹ ಲಿಂಗಾಂಗಿ ಸುದತಿಯುರು।
ತವೆಯೆಸೆಯಲಾರತಿಯ ಪಿಡಿಯುತೆ
ಸುವಿನೀತಲಿನ್ನುಳಿದ ಪುರುಷರ್
ಪ್ರವಿಮಲ ನಾರಿಯರ್ ಮೆರೆಯುತಿರೆ ಬಹು ರಮ್ಯಮಾಗಿ ॥ ೪೫ ॥

ಪರಶಿವಲೋಕ ದೇವಲೋಕಗ-
ಳುರೆ ಸೊಗಮನಾಂತಾ ತಾಣಮುರು-
ತರಮಾಗೆಸೆದು ತೋರುತಿರ್ದತ್ತದನೇವೇಳ್ವೆನು |
ತ್ವರದೆ ಪಂಚಗಣಾಧೀಶರದ-
ಕರಿಯೆ ಮಿಗೆ ಶೋಭೆಯು ಕಲ್ಪಿಸಲ್
ನೆರೆ ಬಂದರೊಯೆನಲ್ಪಂದು ಚರಮೂರ್ತಿಯು ಕಾಯಕೆ || ೪೬ ||

ಶರಣೆನ್ನುತ್ತಲೈಕ್ಯ ವಿಧಿಯಂ
ನೆರೆಗೆಯ್ಯುತಾಗಮ ನಿಯಮದಂ-
ತರಿಯೆ ಸರ್ವರ್ ಸೂರ್ಯಾಸ್ತ ಸಮಯದೆ ಸಮಾಧಿಯೊಳೆ |
ಚರಮೂರ್ತಿಯಂಗಮನಿರಿಸಿ ಸುರು-
ಚಿರ ಭಸ್ಮಂಗಳಂ ಬಿಲ್ವಪ-
ತ್ತುರಿಯನೊಟ್ಟಿ ತ್ರಿಕೋನದ ಬಾಗಿಲಕ್ಕೆ ಕಲ್ಲಿಟ್ಟು || ೪೭ ||

ಮೃತ್ತಿಕೆಯನೊಟ್ಟುತೆ ಮುಚ್ಚುತ್ತೆ
ಸುತ್ತಲುಂ ಭೂಮಿಗೆ ಸಮಗೊಳಿಸಿ
ಚಿತ್ತವೊಪ್ಪುವ ತೆರದೆ ಮೇಲುರೆ ವೇದಿಕೆಯ ಗೆಯ್ಸಿ |
ಸುತ್ತಿರುವ ಜನರೊಡನೆ ಗ್ರಾಮಕೆ
ಚಿತ್ತಜಾರಿಯ ನೆನೆಯುತೆ ಬಂದು
ಕಿತ್ತಡಿಗಳೊಲವಿಂ ಮಂತ್ರೋಡಿ ಸಿದ್ಧರಾಮಪನ || ೪೮ ||

ಮನೆಯಲ್ಲಿರ್ದರವನಾ ಗುರುವಿ-
ನನಘಾಜ್ಞೆಯಂತಾ ಪಂಚಗಣ-
ರನನುರಾಗದೊಳುಪಚರಿಸಿ ಲಿಂಗಾರ್ಚೆಯು ಗೆಯ್ಸುತೆ |
ಬಿನದದಿಂ ಗುರು ಶಂಭುಲಿಂಗಾ-
ಖ್ಯನ ಚರಮೂರ್ತಿಯುರು ಲೀಲೆಗಳ
ವಿನಯದಿಂದವರಿಗೆ ಪೇಳುತೆ ಮಲಂಗಿದನಾತನು || ೪೯ ||



ಗಂಜೀಗಟ್ಟೆಯಲ್ಲಿ ಪ್ರತಿವರುಷ ಶಿವರಾತ್ರಿಯಂದು ಜರಗುತ್ತ ಬಂದಿರುವ
ಶ್ರೀ ಚರಮೂರ್ತಿಶ್ವರರ

**ರಥೋತ್ಸವದ ದೃಶ್ಯ**

ಬೆಳಗಾಗುವನಿತರೊಳೆ ಗಣವರ-
ರಿಳೆಯ ಜನರಚ್ಚರಿಸಲಡಂಗ-
ಲುಳಿದಾತ್ಮ ನಿದ್ರೆಯ ಸಿದ್ಧರಾಮಪನಾಗ ತಿಳಿದು |
ಗಳಿಲನಾ ಬಾಗಿಲವ ನೋಡುತೆ
ತಳಿದಚ್ಚರೆಯನಿರೆ ಮೊದಲಂತೆ
ಬಳಿಕ ಶೋಕಿಸುತಿರ್ದ್ದಂ ಶೋಧಿಸುತ್ತಲೊಳಹೊರಗೆ || ೫೦ ||

ಬಂದನಾಗ ಸದಾಶಿವೇಂದ್ರಂ
ವಂದಿಸುತ್ತಿಹ ಸಿದ್ಧರಾಮಪ-
ಗಂದು ಬೋಧಿಸುತಾ ಶೋಕಮಂ ಕಳೆದಂ ಸುಮತಿಯು |
ಇಂದುಧರಸಮ ಗುರುಲೀಲೆಯಂ
ಬಂದು ಕೇಳುತೆ ಭಕ್ತವೃಂದಂ
ಛಂದದಿಂ ಮರೆಯುತೆ ದುಃಖಮಂ ಬೆರೆದರ್ ಭಕ್ತಿಯೊಳ್ || ೫೧ ||

ಈ ಪುರಾಣವ ಕೇಳ್ದ ಜನಂಗ-
ಳಾ ಪುನೀತ ಸುಭಕ್ತಿಯ ಪಡೆದು
ಪಾಪಮಂ ನೀಗುವರೋದುವವರಖಿಲ ಭೋಗಗಳ |
ಸಂಪದ ಸಿದ್ಧಿಯಂ ಪಡೆಯುವರ್
ಲೋಪಮಿಲ್ಲದೆ ಮುಕ್ತಿಯ ಪೊಂದಿ
ತಾಪ ವಿರಹಿತ ಮಾರ್ಗ್ಗವ ತೋರುವರನ್ಯ ಜನಾಂಗಕೆ || ೫೨ ||

ಶಾಲಿವಾಹನ ಶಕೆಗೆ ಕ್ರಮದಿಂ
ಕೀಲಿಸಿದ ಪದಿನೆಂಟು ನೂರಕೆ
ಮೇಲೆನಿಪ ತೊಂಬತೊಂದರೊಳ್ ಸೌಮ್ಯವತ್ಸರದೆ |
ಮೇಲವಿಸೆ ಬಸವೇಶ ಜಯಂತಿ-
ಯೊಲಯಿಸಲೀ ವರ ಪುರಾಣವ
ಕಾಲಕಾರಂಭಿಸಿ ಮುಗಿಸಿರುವೆನೆರಡುವರ್ಷದುರೆ || ೫೩ ||

ಮಂಗಲಂ ಗುರುಲಿಂಗ ಚರರ್ಗೆ
ಮಂಗಲಂ ಪಂಚಾಕ್ಷರಾರ್ಯಗೆ
ಮಂಗಲಂ ಶ್ರೀಗುರುಕುಮಾರಗೆ ಬಸವಲಿಂಗಂಗೆ |
ಮಂಗಲಂ ಎಡೆಯೂರಸಿದ್ಧಗೆ
ಮಂಗಲಂ ಗುರುಶಂಭುಲಿಂಗಗೆ
ಮಂಗಲಂ ಗಂಜೀಗಟ್ಟಿಚರಮೂರ್ತಿವರ್ಯಂಗೆ || ೫೮ ||

ಗದುಗಿನೋಳ್ ಪಂಚಾಕ್ಷರನಗರ-
ಮದರಲ್ಲಿ ನಿರ್ಮಿತವಾಗಿಹುದು
ಪದಪಿಂದೆ ವೀರೇಶಪುಣ್ಯಾಶ್ರಮಮಲ್ಲೆಸೆವುದು |
ಪದುಳ್ದಿನ್ನ ಪಂಚಾಕ್ಷರಗುರುವಿ-
ನುದಿತ ಯೋಗ ಸಮಾಧಿಯದಲ್ಲಿ
ಮುದದೆ ಬರೆದ ಪುರಾಣದೋಳ್ ನವದಶಮಸಂಧಿಯಿದು || ೫೯ ||

ಅಂತು
ಸಂಧಿ ಹತ್ತೊಂಭತ್ತಕ್ಕಂ ಪದಗಳು ಒಂಭತ್ತುನೂರ್ಹದಿನೆಂಟಕ್ಕಂ
ಮಹಾ ಮಂಗಲಂ
ಶ್ರೀ ಶ್ರೀ ಶ್ರೀ





ಗಂಜೀಗಟ್ಟೆ ಶ್ರೀ ಲಿಂ. ಸದಾಶಿವ ಚರಮೂರ್ತಿಗಳ ಯೋಗಸಮಾಧಿ ಮಂದಿರ

## — ಅರ್ಥಕೋಶ —

### ಮೊದಲನೆಯ ಸಂಧಿ

ಪರದುರ್ವಾದಿ=ಪರಮತದ ಹೀನವಾದಿ
ಅಘೋರವಁಖ=ಶಿವನ ಇನೇ ಮುಖ
ದಂಡಿತಷಡರಿ=ಶಿಕ್ಷಿಸಲ್ಪಟ್ಟ ಆವೈರಿಗಳು
ತತ್ಪುರುಷಾನನೋದ್ಭವ=ಶಿವನ ನಾಲ್ಕನೇ ಮುಖದಿಂದ ಹುಟ್ಟಿದಂಥ
ವಿಶಾನಕ್ಯ=ಈಶಾನನೆಂಬ ನಾಮವುಳ್ಳ
ರಾಜ್ಞಿ=ರಾಣಿಪೀಠ
ಸೂನುವಾದ=ಮಗನಾದ
ಷಟ್ಪದಿಕಂ=ಗುಂಗೀಹುಳ, ಕನ್ನಡ ಸಾಹಿತ್ಯದ ಒಂದು ಛಂದಸ್ಸು
ರಸಾ=ಭೂಮಿ
ಪೂಗವುಂ=ಸಮುದಾಯ
ಪದಪು=ಸೊಗಸು
ಸದುಳ್ಳ=ಚನ್ನಾಗಿ

### ಎರಡನೆಯ ಸಂಧಿ

ಖೇದಾಗ್ನಿ=ದುಃಖವೆಂಬ ಅಗ್ನಿ
ಲಸಿತ=ಒಪ್ಪುವ
ಸಸಿನ=ಸರಳ
ತೆಂಕಣ=ದಕ್ಷಿಣ
ಅನಘ=ನಿರ್ದೋಷ
ಪಾಂಥಸ್ಥ=ದಾರಿಕಾರ
ಪವಣ=ಅಳತಿ
ಮಹೌಜ=ಅಧಿಕವಾದ ತೇಜಸ್ಸು
ನಿರಘ=ನಿರ್ದೋಷ
ತ್ರಿವಳಿ=ಹೊಟ್ಟೆಯ ಮೇಲಿನ ಮೂರು ಗೆರೆ
ಕಂಟಕಿತ=ಮುಳ್ಳು, ವಿಘ್ನ
ಗುಹ=ಷಣ್ಮುಖಸ್ವಾಮಿ
ಸ್ಕಂದ=ಹಗಲು
ಮಿಸುನಿ=ಭಂಗಾರ

### ಮೂರನೆಯ ಸಂಧಿ

ಅನವದ್ಯ=ನಿರ್ಮಲವಾದ
ಅಗಿಯಿತ್ತೋತು=ಅಂಜಿತು
ಕೂರ್ಮೆ=ಪ್ರೀತಿ

### ನಾಲ್ಕನೆಯ ಸಂಧಿ

ಭಾರ್ಗವ=ಒಡೆಯ, ಪರಶುರಾಮ
ಅಗ್ರ=ತುದಿ
ವಿರಿಂಚಿ=ಬ್ರಹ್ಮ
ಜ್ಞೇಯ=ತಿಳಿಯಲು ಯೋಗ್ಯವಾದ
ಹಾಗ=ಹಣ
ದಂದುಗ=ಕಷ್ಟ
ಮೇದಿನಿ=ಭೂಮಿ
ಸರ್ಪದಷ್ಟ=ಹಾವು ಕಚ್ಚಲ್ಪಟ್ಟ
ಘುಟಿಕೆ=ಗುಳಿಗೆ, ಘಟ್ಟಿ
ಅಸಿ=ಖಡ್ಗ
ಓರ್ವಿ=ಭೂಮಿ
ತವಿಸ=ಉತ್ತಮವಾದ
ನ್ಯಾಸ=ಪ್ರಣವ ಸ್ಥಾಪನಾ
ಶಕ್ರ=ಇಂದ್ರ
ಶಂಧನ=ರಥ
ಉಣ್ಮಿರೆ=ಹುಟ್ಟಲಾಗಿ
ಮಂದಾರ=ಕಲ್ಪವೃಕ್ಷ

### ಐದನೆಯ ಸಂಧಿ

ಸನಕ=ಸನಕನೆಂಬ ಹೆಸರಿನ ಮುನಿ
ಮೇಯವಹ=ಊಹಿಸಲಿಕ್ಕೆ ಯೋಗ್ಯವಾದ
ಬೋಳೈಸು=ಸತ್ಕರಿಸು

## ಆರನೆಯ ಸಂಧಿ

ತ್ರ್ಯಂಭಕ=ಶಿವ
ಪೆರ್ಮೆ=ಹೆಚ್ಚಳ
ಆಮ್ರ=ಮಾವು
ಆಮಳಕ=ನೆಲ್ಲಿಗಿಡ
ಜ್ವಲನೆ=ಪ್ರಕಾಶಮಾನಳಾದ
ಜಿತಮದನೆ=ಗೆಲ್ಲಲ್ಪಟ್ಟಂಥ
ನುತರದನೆ=ಸ್ತುತಿಸಲ್ಪಟ್ಟ ಹಲ್ಲುಳ್ಳ
ತಳಿಗೆಯ=ತಾಟು
ಆಂದೋಲಿಕೆ=ಅಡ್ಡ ಪಲ್ಲಕ್ಕಿ

## ಏಳನೆಯ ಸಂಧಿ

ಹಂಸಮನು=ಹಂಸಮಂತ್ರ
ರೋಮೋದ್ಗಮಂ=ರೋಮಾಂಚನ
ಉಣ್ಮಲ್=ಉನ್ನತವಾದ
ಈಡಿತ=ಸ್ತುತಿಸಲ್ಪಟ್ಟ
ಅಮಳೈಕ್ಯ=ಗಂಟಲಿನಲ್ಲಿರಿಸಿ ಕೊಳ್ಳುವದು

## ಎಂಟನೆಯ ಸಂಧಿ

ಪ್ರಣತ=ನಮಸ್ಕರಿಸಲ್ಪಟ್ಟ
ವೃಜಿನಹ=ಪಾಪವನ್ನು ನಾಶಮಾಡುವ

## ಒಂಬತ್ತನೆಯ ಸಂಧಿ

ಕೋವಿದ=ಪಂಡಿತ

## ಹತ್ತನೆಯ ಸಂಧಿ

ಆರೂಢ-ಏರಿದ
ವಾಗತೀತಾಘವ=ಮಾತಿಗೆ ಮೀರಿದ ಪಾಪ
ಮಿಹಿತ=ಸೂರ್ಯ
ಮಿಹಿರ=ಗೂಗೆ

## ಹನ್ನೊಂದನೆಯ ಸಂಧಿ

ಗೋವಾಸ=ಕೈಲಾಸ ಪರ್ವತದಲ್ಲಿರುವವ
ಗೋ=ದೇವತೆಗಳು
ವಾರ=ಸಮುದಾಯ
ಗೋವಾಹ=ಎತ್ತಿನವಾಹನ
ಗೋ=ಸರ್ಪ
ಗೋವೇಶ್ಮ=ಹೃದಯವೇ ಮನೆಯಾಗುಳ್ಳವನು
ಗೋ=ದಿಕ್ಕು
ಗೋ=ಸೂರ್ಯ, ಚಂದ್ರ, ಅಗ್ನಿ,
ಉರು=ಅಧಿಕ
ಹಮ್ಮಿರ್ಪ=ಸಿದ್ಧನಾಗಿರು
ಪಾರ್ವ=ಬ್ರಾಹ್ಮಣ

## ಹನ್ನೆರಡನೆಯ ಸಂಧಿ

ಮಂಜುಭಾಷ್ಪ=ಮಧುರನುಡಿ
ಶರ್ಮಕಾರಿ=ಸುಖಕರ
ಚಿತ್ತೋದ್ಭವ=ಕಾಮ
ಪವಣಿ=ಆಳತೆ

## ಹದಿಮೂರನೇ ಸಂಧಿ

ಆಭಾ=ಕಾಂತಿ
ಕಂತುವನಪಾಂಗಿಂ=ಮನ್ಮಥನಂತೆ
ಜ್ವಲಿಸು=ಬಡಬಡಿಸು

## ಹದಿನಾಲ್ಕನೆಯ ಸಂಧಿ

ಸಾಂದ್ರ=ದಟ್ಟವಾದ
ಕೀಲಿಸಿದ=ಸಂಬಂಧಿಸಿದ
ಸೊಂಡಿ=ಬಾಯಿ

## ಹದಿನೈದನೆಯ ಸಂಧಿ

ವಾಂಛಿತ=ಇಚ್ಛಿತ

## ಹದಿನಾರನೆಯ ಸಂಧಿ

ಪೊರಮಟ್ಟ=ಹೊರಗೆ ಹೊರಟು

## ಹದಿನೆಂಟನೆಯ ಸಂಧಿ

ಜೃಂಭಿಸ=ಪ್ರಕಾಶಮಾನವಾದ
ಸ್ತುವನ=ಸ್ತುತಿ

## ಹತ್ತೊಂಭತ್ತನೆಯ ಸಂಧಿ

ಬನ್ನ=ಕಷ್ಟ

## — ಒಪ್ಪೋಲೆ —

| ಸಂಧಿ | ಪದ್ಯ | ಸಾಲು | ತಪ್ಪು | ಒಪ್ಪು |
|---|---|---|---|---|
| ೨ | ೨೫ | ೪ | ಸೊಲ್ಲಸಿತ | ಸೂಲ್ಲಸಿತ |
| ೨ | ೨೭ | ೫ | ವೂಗೆಸೆದಿತ್ತರಿ | ವಾಗೆಸೆದಿತ್ತರಿ |
| ೨ | ೪೮ | ೬ | ಖಂಡಿತ | ಖಂಡಿತಂ |
| ೩ | ೯ | ೧ | ಮುಕುರುದ | ಮುಕುರದ |
| ೩ | ೬ | ೩ | ಸರ್ವರಲೆಯುವ | ಸರ್ವರರಿಯುವ |
| ೩ | ೬ | ೪ | ಉರ್ವ್ವ | ಉರ್ವಿ |
| ೩ | ೧೯ | ೧ | ವರ್ಷಂಗಳ | ವರ್ಷಂಗಳು |
| ೪ | ೧ | ೩ | ಭುವನೇಕ | ಭುವನೈಕ |
| ೪ | ೨ | ೪ | ಇಚ್ಛೈಯಿಂ | ಇಚ್ಛೆಯಿಂ |
| ೪ | ೭ | ೨ | ಶಕ್ತಿಯ | ಶಕ್ತಿಯಿ |
| ೪ | ೧೧ | ೬ | ಪಂಚಾಚಾರ್ಯಮಾತ್ಮ | ಪಂಚಾಚಾರ್ಯಮಾತ್ಮಂ |
| ೪ | ೧೬ | ೬ | ಕುಳ್ಳಿರಿಸುತ | ಕುಳ್ಳಿರಿಸುತ್ತ |
| ೪ | ೩೦ | ೬ | ಬರುವಸೆ | ಬರುವನೆ |
| ೪ | ೩೭ | ೩ | ಯೆ.ಚ್ಚರ | ಯೆಚ್ಚರಿ |
| ೪ | ೮೪ | ೬ | ಘಟಿಕೆ | ಘುಟಿಕೆ |
| ೪ | ೯೮ | ೧ | ದೊರೆದುದಾ | ದೊರೆದಾ |
| ೪ | ೧೧೧ | ೫ | ತಂದ್ರಾಜ | ತದ್ರಾಜ |
| ೪ | ೧೧೧ | ೫ | ಶಿವಂ | ಶಿವ |
| ೪ | ೧೪೦ | ೬ | ದರ್ಯನವ | ದರ್ಯನವ |
| ೫ | ೮ | ೪ | ತಂದೆಯ | ತಂದೆಯೆ |
| ೫ | ೯ | ೬ | ಸಮನಪ್ಪೆಯ್ಯ | ಸಮನಪ್ಪೆಯ್ಯೈ |
| ೫ | ೧೩ | ೩ | ಸ್ವೇಷ್ಟಾನು | ಸ್ವೇಷ್ಟಾನು |
| ೫ | ೨೦ | ೫ | ನಲೆಸಿತು | ನೆಲೆಸಿತು |
| ೭ | ೨೪ | ೪ | ವೇದೇಳಿ | ವೇದೇಡಿ |
| ೯ | ೧೪ | ೪ | ಭಕ್ತಿಳುಮಿವೆ | ಭಕ್ತಿಗಳುಮಿವೆ |
| ೯ | ೩೭ | ೧ | ಗುರವಿಂತೆಂದ | ಗುರುವಿಂತೆಂದ |
| ೯ | ೪೨ | ೩ | ಸನುತನೆ | ಸನ್ನುತನೆ |
| ೯ | ೪೮ | ೩ | ಪಡೆಯತಿರ್ದ್ದಳ | ಪಡೆಯುತಿರ್ದ್ದಳ |
| ೧೦ | ೩ | ೫ | ಪೊಂದವಿರ್ | ಪೊಂದುವರ್ |
| ೧೧ | ೫೯ | ೩ | ಪದಪಂದೆ | ಪದಪಿಂದೆ |
| ೧೩ | ೨೦ | ೩ | ಶನ ದೃಶ್ಯ | ಶನದೃಶ್ಯ |

| | | | | |
|---|---|---|---|---|
| ೧೭ | ೬ | ೨ | ಪರ್ಮೈಯಿಂ | ಪೇರ್ಮೈಯಿಂ |
| ೧೮ | ೧೯ | ೩ | ದನಜ್ಞೆ | ದನುಜ್ಞೆ |
| ೧೯ | ೨೫ | ೫ | ರುವನೆಲ್ಲ | ನಿರುವನೆಲ್ಲ |

ವಿ. ಸೂ. ಪುರಾಣಗ್ರಾಹಕರು ಇನ್ನೂ ಅಲ್ಲಲ್ಲಿ ವುಳಿದಿರುವ ಲೋಪದೋಷಗಳನ್ನು ನಮಗೆ ತಿಳಿಸಿದಲ್ಲಿ ಮರ.ಮುದ್ರಣದಲ್ಲಿ ಸಂಪಡಿಸ ತ್ತೇವೆ.

---

ಗಂಜೀಗಟ್ಟಿ ಶ್ರೀಗುರುಚರಮೂರ್ತಿಗಳ ಪುರಾಣ ಪ್ರಕಟನೆಗೆ

## ಧನ ಸಹಾಯವಿತ್ತವರ ವಿವರವು

ಶಿರಹಟ್ಟಿ ತಾಲೂಕಿನ
ರಾಮಗೇರಿ ಭಕ್ತ ಮಂಡಳಿಯ ವತಿಯಿಂದ
**1001** ರೂಪಾಯಿಗಳನ್ನು ಅರ್ಪಿಸಿರುತ್ತಾರೆ.

| | | ರೂ. ಪೈ. |
|---|---|---|
| 1) | ಶ್ರೀ ನಿಂಗಪ್ಪ ದಾಮಣ್ಣವರ | 101-00 |
| 2) | ,, ಮುದುಕಪ್ಪ ಕಲ್ಯಾಣ | 101-00 |
| 3) | ,, ಚನ್ನಪ್ಪ ಮಂತ್ರೋಡಿ | 101-00 |
| 4) | ,, ಸಿದ್ದನಗೌಡ್ರು ಮೆಳ್ಳೀಗಟ್ಟಿ | 101-00 |
| 5) | ,, ಹೊಳಿಬಸನಗೌಡ್ರು ಮೆಳ್ಳೀಗಟ್ಟಿ | 101-00 |
| 6) | ,, ಹುತ್ತಪ್ಪ ಮಲ್ಲೂರ (ಶಿಗ್ಗಾಂವ) | 101-00 |
| 7) | ,, ಸದಾಶಿವಯ್ಯ ಹಿರೇಮಠ (ಚಿಕ್ಕಮಲ್ಲೂರ) | 101-00 |
| 8) | ,, ಮಲ್ಲಪ್ಪ ರಗಟೆ (ಚಿಗಳ್ಳಿ) | 101-00 |
| 9) | ,, ಹನುಮಂತಪ್ಪ ತೆಂಬದಮನಿ | 40-00 |
| 10) | ,, ಹನುಮಂತಪ್ಪ ಮರೋಳ | 51-00 |
| 11) | ,, ಫಕೀರಪ್ಪ ಸವಣೂರ | 51-00 |
| 12) | ,, ನಿಂಗಪ್ಪ ಮಾರಂಬೀಡ | 30-00 |
| 13) | ,, ವೀರಪ್ಪ ಹುರಳಿ (ಮಾಸ್ತರ) | 25-00 |
| 14) | ,, ಗುರಪ್ಪ ಮರಿದ್ಯಾಮಣ್ಣವರ | 51-00 |
| 15) | ,, ದ್ಯಾವಪ್ಪ ಮಂತ್ರೋಡಿ | 51-00 |
| 16) | ,, ಶಿವಪ್ಪ ಪಾಣಿಗಟ್ಟಿ | 51-00 |
| 17) | ,, ವೀರಭದ್ರಯ್ಯ ಹಿರೇಮಠ (ಕಬನೂರ) | 25-00 |
| 18) | ,, ದ್ಯಾವಪ್ಪ ಸಾ. ಚಂದಾಪೂರ | 25-00 |
| 19) | ,, ಶಿವಪ್ಪ ಬಡಿಗೇರ (ಇಂಗಳಗಿ) | 25-00 |
| 20) | ,, ಶಿವಪ್ಪ ವೀರಭದ್ರಪ್ಪ ಮಿಸ್ತ್ರಿಕೋಟಿ ಸಾಯುಲವಥಾಳ (ತಾವರಗೇರಿ) | 10-00 |

